


ವೆಂಕಾಮಾತ್ಯ ಕವಿ ವಿರಚಿತಂ

ಶ್ರೀ ಮ ದ್ರಾ ಮಾ ಯ ಣಂ

# ಅ ಯೋ ಧ್ಯಾ ಕಾಂ ಡಂ

# AYODHYAKAṆḌAM

## (RĀMĀYAṆAM) OF VEṄKĀMĀTYA

EDITED BY

T. CHANDRASEKHARAN, M.A., L.T.

*Curator, Government Oriental Manuscripts Library, Madras*

*and the staff of the Library*

*(Under the orders of the Government of Madras)*

PRINTED BY THE SUPERINTENDENT
GOVERNMENT PRESS
MADRAS
1954

[PRICE, *Rs.* 6-8-0.




వేంకామాత్య కవి విరచితం

# శ్రీమద్రామాయణం
# అయోధ్యాకాండం

# AYŌDHYĀKĀṆḌAM

## (RĀMĀYANAM) OF VEṄKĀMĀTYA

EDITED BY


T. CHANDRASEKHARAN, M.A., L.T.
*Curator, Government Oriental Manuscripts Library, Madras*

*and the staff of the Library*


*(Under the orders of the Government of Madras)*


PRINTED BY THE SUPERINTENDENT
GOVERNMENT PRESS
MADRAS
1954

# INTRODUCTION.

The manuscript ot Rāmāyaṇa by Veṅkāmātya was selected by the Editorial Committee of the Government Oriental Manuscripts Library and was approved by Government for publication during 1951-52. Accordingly, the Sundara Kāṇḍa was taken up first, in view of the special significance with which it is looked upon and was published as No. 20 in the Madras Government Oriental Manuscripts Series. In the manuscript of Veṅkāmātya Rāmāyaṇa preserved in this Library, some verses in the beginning of Bālakāṇḍa and in the middle of Āraṇyakāṇḍa are wanting. Therefore, Ayodhyā Kāṇḍa, which is complete, was next taken for printing. Enquiries are being made to ascertain if any other copies of Veṅkāmātya Rāmāyaṇa are available which may contain the portions missing in this library manuscript and I appeal to the Kannaḍa public to inform me about the existence of any such manuscripts and thus enable me to publish this rare manuscript in complete form. The remaining Kāṇḍas will be published and placed before the Kannadigas in due course.

The literary importance of this Rāmāyaṇa and the particulars regarding the author, Veṅkāmātya and his scholarship were dealt with in the introduction to the Sundarakāṇḍa. It is not, therefore, proposed to repeat them here. It may, however, be pointed out that the description of Citrakūṭa for which one complete Chapter has been devoted and which is full of high poetic imagination and figures of speech, shows that the author was not merely a prosaic story teller but a poet of a high order.

My thanks are due to Sri V. Hanumanthachar, M.A., L.T., Librarian, and to Sri K. Krishna Sharma, former Pandit of the library, for preparing the press-copy. I have also to thank the Superintendent, Government Press, Madras, for completing the printing in an efficient manner within a short time.

GOVERNMENT ORIENTAL MANUSCRIPTS LIBRARY, MADRAS-5,
*8th May 1954.*

T. CHANDRASEKHARAN,
*Curator.*

# ಮುನ್ನುಡಿ

ವೆಂಕಾಮಾತ್ಯ ವಿರಚಿತವಾದ ರಾಮಾಯಣವು 1951-52 ನೆಯ ಇಸವಿಯಲ್ಲಿ ಮುದ್ರಿಸುವ ಸಲುವಾಗಿ ಮದ್ರಾಸ್ ಸರಕಾರದ ಪ್ರಾಚೀನ ಹಸ್ತಲಿಖಿತ ಪುಸ್ತಕ ಭಾಂಡಾಗಾರದ ಸಂಪಾದಕೀಯ ಸಮಿತಿಯವರಿಂದ ಆರಿಸಲ್ಪಟ್ಟು ಸರಕಾರದಿಂದ ಅಂಗೀಕೃತವಾಯಿತು. ತದನುಸಾರವಾಗಿ, ಸಾಮಾನ್ಯವಾಗಿ ರಾಮಾಯಣವನ್ನು ಪಾರಾಯಣ ಮಾಡುವವರಿಗೆ ಸುಂದರಕಾಂಡದ ವಿಷಯದಲ್ಲಿ ಇರುವ ವಿಶೇಷವಾದ ಶ್ರದ್ಧಾ ಭಕ್ತಿಗಳನ್ನು ಹಿಡಿದು ಪ್ರಥಮದಲ್ಲಿ ಅದನ್ನು ಮುದ್ರಿಸಲಾಯಿತು. ಹಸ್ತಲಿಖಿತ ಪುಸ್ತಕ ಭಾಂಡಾಗಾರದಲ್ಲಿ ಇರುವ ರಾಮಾಯಣದ ಪ್ರತಿಯಲ್ಲಿ, ಬಾಲಕಾಂಡದ ಆದಿಯಲ್ಲಿಯೂ ಅರಣ್ಯಕಾಂಡದ ಮಧ್ಯದಲ್ಲಿಯೂ ಗ್ರಂಥಪಾತವಿರುವುದರಿಂದ, ಸಂಪೂರ್ಣವಾಗಿರುವ ಅಯೋಧ್ಯಾ ಕಾಂಡವು ಎರಡನೆಯ ಸಂಪುಟವಾಗಿ ಮುದ್ರಿಸಲ್ಪಟ್ಟಿದೆ. ಉಳಿದ ಕಾಂಡಗಳು ಕ್ರಮೇಣ ಒಂದೊಂದಾಗಿ ಮುದ್ರಿಸಲ್ಪಡುತ್ತವೆ. ಭಾಂಡಾಗಾರದ ಪ್ರತಿಯಲ್ಲಿನ ಗ್ರಂಥಪಾತಗಳನ್ನು ಪೂರ್ತಿಗೊಳಿಸಲು ಇತರ ಪ್ರತಿಗಳ ಆವಶ್ಯಕವಿದೆ. ಆದುದರಿಂದ ವೆಂಕಾಮಾತ್ಯ ರಾಮಾಯಣದ ಹಸ್ತಲಿಖಿತ ಪ್ರತಿಗಳುಳ್ಳ ಮಹಾಶಯರು ತಮ್ಮ ಪ್ರತಿಗಳನ್ನು ಭಾಂಡಾಗಾರಕ್ಕೆ ಎರವಲಾಗಿಕೊಟ್ಟು ಅಪೂರ್ವವಾದ ಈ ಗ್ರಂಥವನ್ನು ಗ್ರಂಥ ಲೋಪವಿಲ್ಲದೆ ಸಾಧ್ಯವಾದ ಮಟ್ಟಿಗೆ ಶುದ್ಧವಾಗಿ ಮುದ್ರಿಸಲು ನೆರವಾಗಬೇಕೆಂತ ಕೋರಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ವೆಂಕಾಮಾತ್ಯ ರಾಮಾಯಣಕ್ಕೆ ಇರುವ ಸ್ಥಾನಮಾನಗಳು, ಕವಿಯ ಕಾಲದೇಶ ಮುಂತಾದುವು ಸುಂದರ ಕಾಂಡದ ಮುನ್ನುಡಿಯಲ್ಲಿ ನಿರೂಪಿತವಾಗಿವೆ. ಆದುದರಿಂದ ಅವನ್ನು ಇಲ್ಲಿ ಪುನಃ ಪ್ರಸ್ತಾಪಿಸಿಲ್ಲ. ಈ ಗ್ರಂಥದಲ್ಲಿ ಚಿತ್ರಕೂಟ ಪರ್ವತದ ವರ್ಣನೆಗೆ ಇಡೀ ಒಂದು ಸಂಧಿ ಮೀಸಲಾಗಿಡಲಾಗಿದೆ. ಆ ವರ್ಣನೆಯನ್ನು ಓದಿದವರಿಗೆ ಕವಿ ವೆಂಕಾಮಾತ್ಯನು ಸಾರವಿಲ್ಲದ ಬರಿಯ ಕತೆಗಾರನಾಗಿರದೆ ಉತ್ತಮ ದರ್ಜೆಯ ಕವಿ ಎಂಬುದು ಸ್ಪಷ್ಟವಾಗುವುದು.

ಇದರ ಮುದ್ರಣ ಪ್ರತಿಯನ್ನು ಸಿದ್ಧಪಡಿಸಿದ ಶ್ರೀ ವಿ. ಹನುಮಂತಾಚಾರ್, ಎಂ.ಎ., ಎಲ್.ಟಿ., ಮತ್ತು ಲೈಬ್ರರಿಯಲ್ಲಿ ಕನ್ನಡ ಪಂಡಿತರಾದ ವಿದ್ವಾನ್ ಶ್ರೀ ಕೆ. ಕೃಷ್ಣಶರ್ಮ ಇವರ ಕಾರ್ಯದಕ್ಷತೆಯು ಸಂಸ್ಮರಣೀಯವು.

ಕೊನೆಯದಾಗಿ ಈ ಗ್ರಂಥವನ್ನು ಸಕಾಲದಲ್ಲಿ ಅಂದವಾಗಿ ಅಚ್ಚು ಮಾಡಿಕೊಟ್ಟಿರುವ, ಸರಕಾರ ಮುದ್ರಣಾಲಯದ ಸೂಪರಿನ್‌ಟೆಂಡೆಂಟರವರಿಗೆ ಮತ್ತು ಅವರ ಸಿಬ್ಬಂದಿಗೆ ನಮ್ಮ ಕೃತಜ್ಞತೆಯು ಸಲ್ಲಬೇಕಾಗಿದೆ.

ಗವರ್ನಮೆಂಟ್ ಓರಿಯಂಟಲ್
ಮಾನ್ಯುಸ್ಕ್ರಿಪ್ಟ್ಸ ಲೈಬ್ರರಿ,
ಮದರಾಸ್-5.

ತಿ. ಚಂದ್ರಶೇಖರನ್,
ಕ್ಯೂರೇಟರ್.

# ವೆಂಕಾಮಾತ್ಯಕೃತ ರಾಮಾಯಣಂ

## ಅಯೋಧ್ಯಾ ಕಾಂಡಂ

### ಒಂದನೆಯ ಸಂಧಿ.

ಸೂಚನೆ ॥ ಶ್ರೀಕಾಂತ ಸಾರಸಾಸನಮುಖ್ಯಗಾಂಧರ್ವ
ಪಾಕಶಾಸನ ಮುನಿರಾಜ ಮಂಡಲಜನಾ ।
ನೀಕ ಸಂತೋಷದಿಂದೆಸೆಯೆ ಭದ್ರಾಕಾರವೇದಿಕಾಮಧ್ಯದಿ ॥
ಭೂಕಾಂತೆಯಣುಗಿಸಹ ಕೌತುಕದಕರದಿಂದ ।
ನೇಕವಿಭವದೊಳನುಜರೊಡವೆರೆದು ಕುಳ್ಳಿರ್ದ್ದ ।
ಲೋಕಲೋಚನ ಕುಲಾಗ್ರಣಿ ರಾಘವೇಶ್ವರಂ ಪಾಲಿಸುಗೆ ಮನದಿಷ್ಟಮಂ ॥ (1)

ಶರಧಿಯೊಳ್ಕರಗಳನ್ನಿಟ್ಟು ಲೋಕರಕರದು ।
ಕರದಾಸೆಯಿಂ ನಡೆವ ದೇವಸಂತತಿಗಳಂ ।
ತಿರಲಿ ನುತಿಸನು ನಮಿಸೆ ಕನಸಿನೊಳೊಗೂಡದಡಂ ಗಣಿಸೆ ನವಕುಗಳ ಬಳಿಕ ॥
ಶರದಗ್ರದೊಳ್ ಶರಧಿಯಿಟ್ಟ ಶಾಶ್ವತಕೃಪಾ ।
ಕರ ನೀರದಾಕಾರ ಶರಣಜನಮಂದಾರ ।
ತರುಣ ವಂಶಜರಾಮ ಭದ್ರನಂಘ್ರಿದ್ವಯವ ಧ್ಯಾನಿಸುವೆ ಮಾನಸದೊಳು ॥ (2)

ಸಿಂಧುವನ್ನುಂದುವೆಸಲತಿ ವೇಗದಾಂಟಿ ಮಣ ।
ಬಂಧುರದಸಾಲಮಂ ಪೊಕ್ಕು ನಿಶಿಯೊಳ್ ಜಗ ।
ದ್ಬಂಧು ಗೋತ್ರಜನರಸಿಯಂ ಕಂಡು ಮಣಿಮುದ್ರಿಯಿತ್ತು ಸಂತಸಗೊಳಿಸಿದ ॥
ಕಂಧರಗಳೀರೈದ ಸಾಂತವನ ಭಂಗಿಸಿದ ।
ಸಿಂಧುಸಮಗಂಭೀರ ನೆನೆದವರಘಹರಶರಣ ।
ಬಾಂಧವನ ಶರ್ಮದಾತಾರ ಶೆಟ್ಟೀನಗರವಾಂಜನೇಯಂಗೆರಗುವೆ ॥ (3)

ಲಲಿತಸತ್ಕವಿಗಳಾಧಾರನರ್ಗಳ ಶೂರ ।
ಛಲದಂಕನಿಶ್ಶಂಕ ಲಂಕಾಭಯಂಕರನ ।
ಸಲಲಿತೋದ್ಧಾರ ಭಕ್ತಾಧಾರ ಭವದೂರ ಮಾರುತಾತ್ಮಜನಂಘ್ರಿಗೆ ॥
ಒಲವಿನಿಂದೆರಗಿ ಪ್ರಾರ್ಥಿಸಿ ನುತಿಸಿ ಶ್ರದ್ಧೆಯಾ ।
ಕಲಿತಸಾಗುತೆ ರಾಮಚರಿತಾಮೃತೋದಧಿಯೊ ।
ಳಲಿವೆ ನಿಷ್ಪಾರ್ಥಗಳ ನೀವಯೋಧ್ಯಾಕಾಂಡಸಕಲಾಗಮೋದ್ದಂಡೆಮಂ । (4)

ಸೂತನಂ ಬೆಸಗೊಂಡ ರಖಿಳಮುನಿಗಣ ತತ್ವ ।
ಜಾತದರ್ಥಂಗಳಂ ತಿಳಿದು ಹಗೆಭೋಧಿಸಿದ ।
ಗೀತೆಯುತೆಯಾರ್ಧಾಂಗಿಗಮಿತ ಕೃಪೆಯಿಂ ಬಾಲಕಾಂಡದೊಳ್ಹರಿಚರಿತೆಯ ॥
ಭೂತಪತಿ ಮಗುಳ್ದೀನ ಪೇಳ್ದನೆಂಬರ್ಥಮಂ ।
ಪ್ರೀತಿಯಿಂದೆಮಗುಸುರಿ ಕೃತಿಗಳಂ ಮಾಳ್ಪುದೆನೆ ।
ಲಾತತ್ವನಿಧಿ ಯಾಮಿಜನೋತ್ತಮರಿಗಿಂತೆಂದ ಮೇಲ್ಕಥೆಯವಿಸ್ತರದೊಳು ॥ (5)

ತೋಳ್ ಬಲುಹಿಂದಮರರಾಳ್ವವನ ಸಖನಾಗಿ ।
ಖೂಳರಕ್ಕಸಗಣವನರಿದು ಸದ್ಧರ್ಮಗಳ ।
ಪೀಳಿಗೆಯು ಪೆರ್ಚಿಸಿದೆನಖಿಳಯಾಗಂಗಳನ್ನೆಸಗಿದೆಂ ಬಹುವಿಧದಲಿ ॥
ಮೇಳಗೊಂಡಿದೆ ವಯೋಧರ್ಮ ಭೂಭಾರಮಂ ।
ತಾಳ್ವರ್ದರೆಯಿಂದ ಜೀರ್ಣವಾಯ್ತುಮದ್ದೇಹ ।
ಬೀಳಲೀಂ ಪೊರೆಗಲಸಿತಿರ್ಪ್ಪ ವಿಶ್ರಮಿಸುವೊಡೆ ಬಯಸುತಿದೆ ತಾಣವನ್ನು ॥ (18)

ಸುರಪನಿಭವಿಕ್ರಮಂ ಸಕಲ ಕಲ್ಯಾಣಗುಣ ।
ದಿರವು ಕರುಣಾಶರಧಿ ಕಳೆಗಳೆಗ್ಗದದೇಹ ।
ತರಣಿಕುಲಭೂಷಣಂ ಮತ್ಪುತ್ರರಗ್ರಭವರಾಘವಂಗೀ ಭಾರಮಂ ॥
ಪೊರಿಸಿ ಭವದನುಮತದಿ ಸಕಲಸಂಭ್ರಮದಿಂದ ।
ಲಿರುವೆನೆಂದಿಚ್ಛೈಸುತಿರೆ ಚಿತ್ರಮೀಕಾರ್ಯ ।
ದಿರವನಾಳೋಚಿಸಿಯೆ ಬೆಸನೀಯಲಾಂಗೈವೆನೆನಲರಸರಿಂತೆಂದರು ॥ (19)

ಧಾರುಣಿಯಭಾರಮಂ ಧರಿಸಿಬೆಳಗುವ ಮಹಾ ।
ಮೇರುವೆಯುನಿಜನಿಳಯಪಟುಲಿಯಶಾಂತಿಸವಶ್ಯಂ ।
ಸಾರಮಯಸ್ತಂಭಮಂವಾಳ್ಪೆನೆಂದೆಣಿಸಿ ಕೇಳ್ವೆ ನೃಪಕುಲತಿಲಕನೆ ॥
ಮೂರುಲೋಕಂಗಳಂಸೃಜಿಪ ಪಾಲಿಪಮಹ ।
ತ್ಕಾರಣನ ಭವದೀಯರಾಷ್ಟ್ರಕಧಿನಾಥನಂ ।
ಪ್ಪೋರಂತೆ ಕೈಯ್ಯಲೆಳಸಿದ ಮಂತ್ರವೈಚಿತ್ರ್ಯತರಮಾಯ್ತು ನೆರೆದಸಭೆಗೆ ॥ (20)

ಉತ್ತಮೋತ್ತಮಗುಣಂಗಳ ದೊರೆಯುನಿಖಿಳ ಭೂ ।
ಪೋತ್ತಮರ ಮಸ್ತಮಣಿ ಸತ್ಕಲಾನಿವಹಕಣಿ ।
ಚಿತ್ತಜ ವಸಂತನಳಕೂಬರ ಜಯಂತರಂ ಗೆಲುವ ಚೆಲುವಿನ ಧೋರಣಿ ॥
ಉತ್ತಮರ ಮನದಿಷ್ಟಮೀವ ಚಿಂತಾಮಣಿ ರ ।
ಘೂತ್ತಮಂ ಶ್ವೇತಾತಪತ್ರ ಸಚ್ಛಾಯೆಯೊಳ್ ।
ಮತ್ತೇಭವಡರಿ ಬಹುದೀಕ್ಷಿಪಭಿಲಾಷೆಯಿಂದಿಹುದೀ ಸಭಾಸಜ್ಜನಂ ॥ (21)

ಘನಸಮಭ್ಯುದಯದಿರವ ಬಯಸುವ ಮಯೂರಗಳ ।
ಇನನಧಿಕ ಶ್ರೇಯಸ್ಸ ಕೋರುತಿಹ ಕಮಲಗಳ ।
ವಿನಯದಿಂ ಶಶಿವೃದ್ಧಿಯಂ ನೆನೆವ ಶರನಿಧಿಯ ಮಾನಸವ ಪೆರ್ಚುಗೆಯನು ॥
ಅನುದಿನದಿ ಬಯಸುವ ಮರಾಳನಾಯಕನಿರವ ।
ನನುಸರಣೆಗೈವುತಿದೆ ನೆರೆದೀ ಸಭಾಸದರ ।
ಮನದಿಷ್ಟ ರಘುಕುಲಾನ್ವಯ ರಾಮಚಂದ್ರಮನ ಭೂಗವಾಸಂಪ್ರಾಪ್ತಿಯಂ ॥ (22)

ಋತುಗಳರಸನ ಬಯಸದಿರುವ ಭೂಜಾತಸಂ ।
ತತಿಗೆ ಶ್ರೇಯಸ್ಕರಮದುಂಟೆ ಸುರರಾಜನನು ।
ಮತಿಯುಪಡೆಯದಲೆಜೀವರಮನುಂಟೆ ರಘುಪತಿಯನರಸೆನಿಸದಿಹ ರಾಷ್ಟ್ರದೊಳು ॥
ಸ್ಥಿತಿಯ ಪಡೆದಿಹ ಮನುಜರಿಂಗೆ ಶುಭಕರವಾರ್ತೆ ।
ಯಾತಿಶಯಗಳುಂಟೆ ಜನನಾಥ ಮತ್ತೀನಗರ ।
ಪತಿಯೆನಿಸು ಬೇಗ ನಾಳೋಚಿಸುವುದೇನೆಂದು ಸಭೆನುಡಿಯೆ ನೃಪನೆಂದನು ॥ (23)

ಚಿರಕಾಲ ಸದ್ಧರ್ಮವಿಡಿದು ಮರ್ತ್ಯಲೋಕ ।
ಪರಿಪಾಲನಂಗೈದು ಪರಿಜನರ ಪುರಜನರ ।
ಪರಿಪೂರ್ಣಕಾಮರೆಂದೆನಿಸಿ ಹಿತದಿಂಪೊರೆವ ನೃಪತಿಯಾನಿರಲು ಬೇಗ
ತರಳನನಶಿಕ್ಷಕನ ರಾಜ್ಯಭಾರದಕುರುಪ ।
ಸರಿಯುದನ ಬಾಧಿಸಿದದೇನರಿತು ರಕ್ಷಿಸುವ ।
ಭರಕೆರುಹನೆಂತಪ್ಪನೆನಲರಸಗಿಂತೆಂವರಖಿಲ ಋಷಿದೊರೆಗಳೊಲಿದು ॥ (24)

ಲೇಸನಾಡಿದೆ ನೃಪತಿ ಶಕ್ರನಿಭವಿಕ್ರಮನ ।
ಕೂಸನುತ್ತಾತನೊಳಗಿಪ್ಪ ಸದ್ಗುಣಗಣ ಗ ।
ಳೀಸೆಂದು ಗಣಿಸಲಾಶಿಸುವರೆ ಭುಜಂಗೇಶ ಸೊಲ್ಲುವೆಣ್ಣನೆಯರುಗಳು ॥
ಏಸರವರಕಟ ಸತ್ಕಳೆಗಳ ಸಮೂಹದೊಳ್ ।
ಗೀಸುದರ ಮಾವೆಲ್ಲ ತಿಳದನಿತ ವಿಸ್ತರಿಸಿ ।
ಭಾಸುರಂಗೈದೆವಿದನಾಲಿಸಂದೆನುತುಸಿರ್ದ ರಾಸ್ಥಾನಮಂಟಪದೊಳು ॥ (25)

ಬಲದೊಳಂವ್ರಂ ಬುದ್ಧಿಯೊಳ್ ಬೃಹಸ್ಪತಿ ಸತ್ವ ।
ದಲಿ ಮಹಾಬಲ ಶಾಂತಿಯೊಳು ಚಂದ್ರ ಧೈರ್ಯದಿಂ ।
ದಲಘುತುಹಿನಾಚಲ ಕ್ಷಮೆಗಂ ಧರಿತ್ರಿ ಕೋಪಕೆಣೆಯು ಕಾಲಾಗ್ನಿ ಶೌರ್ಯ ॥
ಜಲಜಮಿತ್ರಂ ಸತ್ಯದಲಿ ಧರ್ಮನೆರಡನೆಯು ।
ಚೆಲುವಿನೊಳಗಶ್ವಿನೀದೇವರ್ಕಳರಲೀತ ।
ಕಲಿತನದಿ ವಿಷ್ಣು ಕರುಣದಿಶಿವಂ ನಿಗಮದೊಳ್ಬ್ರಹ್ಮ ದಾನದಿಸುರತರು ॥ (26)

ಕರಿತುರಗದೇರಾಟ ಶರಚಾಪಗಳಕೂಟ ।
ಸರಿದೊರೆಗಳೊಡನಾಟ ಸಕಲಕಲೆಗಳಮಾಟ ।
ನಿರತಗಾಂಧರ್ವವೀಣಾ ಕಲಾಪಾದಿಗಳನರಿತ ಭಾವಜ್ಞರುಗಳ ॥
ದೊರೆಯೀತ ಕೇಳ್ಚತುಷ್ಷಷ್ಟಿಕಲೆಗಳದಾತ ।
ಪರಮತೇಜೋಭರಿತ ಪಾವನಾಮಳಚರಿತ ।
ಸರಸಕರುಣಾಪಾಂಗ ಸಕಲಮನುಜೋತ್ತುಂಗ ನಿಖಿಲಾರ್ಥದಾತ ತಾತ ॥ (27)

ದಾರುಣದನುಗಿಯಿಲ್ಲ ಧರ್ಮಕೆಡೆದೆಪಿಲ್ಲ ।
ಸಾರಿದರಿಗರವಲ್ಲ ಸಾಹಸಕ್ಕೆಣೆಯಿಲ್ಲ ।
ಚಾರುತರಭಾಷೆಗೆರಡಿಲ್ಲ ಮರೆವೊಕ್ಕರಿಂಗೆಡರಿಲ್ಲ ದೈನ್ಯಸಲ್ಲ ॥
ಧಾರುಣೀಸುರರಲ್ಲ ವೃಥಪಿ ಜಪಿಸುವರಲ್ಲ ।
ದೋರಂತೆ ಪೆರತಿಲ್ಲ ನಾರಾಯಣಾಂಶಯಿಂ ।
ಸೂರಿಜನರಕ್ಷಸಂಭವನಲ್ಲದೀರಾಮ ನರನಲ್ಲ ಲೋಕನಲ್ಲ ॥ (28)

ದರಹಾಸಯುತಭಾಷ ದೀನಜನರಂನೋಡಿ ।
ಪೊರೆವ ಕರುಣಾರಾಶಿ ಕೃತಪಾಪಗತಾಂಗ ।
ನೊರೆಯನೆಣಿಸಂ ಕಿಂಚಿದುಪಕೃತಿಯ ನಡಿಗಡಿಗೆ ಪೊಗಳುತಿಹ ಸಜ್ಜನರೊಳು ॥
ಪಿರಿಯಗುರು ದೇವತಾರಾಧಕ ಮಹಾಪ್ರಾಜ್ಞ ।
ಸ್ಥಿರಬುದ್ಧಿ ಕಲಿತಕಲಿ ವಿಜಯನೀತನ ಕೋಪ ।
ಪರನಿಷ ಲಗಳಾಗಲರಿದು ನಗರೀಜನರ ನೆಣಿಪನಾತ್ಮಜರಂದದಿ ॥ (29)

ಭಜಿಸಲಾರಾಗಲವರೀಪ್ಸಿತವ ಸಲಿಪ ಗೋ ।
ದ್ವಿಜರಾಯನಂ ಕಂಡು ಸ್ವೈರಿಸಸಮಕ್ಷದೊಳು ।
ಕುಜನರ್ಕಳಂ ನಿಲಿಸ ಪರರಂತರಂಗವ ನಿರೀಕ್ಷೆಯೊಳ್ತಾನರಿವನು
ನಿಜವಲ್ಲದನೃತ ನುಡಿವಂಚಿಸಂ ಪರನಿಂದ್ಯ
ರುಚಿಯುಸಾಕರ್ಣಿಸಂ ಸ್ವಪ್ನದೊಳಗಾದೊಡಂ ।
ಯುಜವಮಾನ ಮೂಕಬಧಿರಾಂಧರ ಕಚೋಕ್ತಿಗಳ ನಾಡೆನವರಂ ಕೋಪಿಸಂ ॥ (30)

ಪರಸಮಾನೀಕರೊಳ್ ದರ್ಪಣಾನ್ಯಾಯದಿಂ ।
ಪರಿಶೋಭಿಸುತ್ತಿಹಂ ಪಾಪಪುಣ್ಯಂಗಳಂ ।
ನೆರೆಮರಾಳ ನ್ಯಾಯಮಾಗೈದೆ ಪಿಂಗಡಿಪ ಪಿಕನಂತೆ ಕಾಲವರಿತು ।
ಸ್ವರಗೊಡುವ ಭ್ರಮರನಂತರಸುವನು ವಾಸಕೆಯು ।
ನೆರೆಗದಂತತಿಜಾಗ್ರತೋರ್ದ ಪುದು ಸಾಗರದ ।
ಪರಿಯೊಳಹ ಗಂಭೀರ ಗುಣ್ಪಿನಿಂ ತಪ್ಪಿನಿಂ ಕೇಳವನಿಪಾಲತಿಲಕ ॥ (31)

ತಾಟಕೆಯು ತಂದಿಕ್ಕಿದವರಾರು ಮಾರೀಚ ।
ಕೀಟಕಸುಬಾಹುಗಳ ಪರಿಹರಿಸಿ ಕೌಶಿಕನ ।
ರಾಟಪುರುಷರ ಮಖವ ರಕ್ಷಿಸಿದವರಾರಹಲ್ಯಾಂಗನೆಯು ನಿರ್ಮಲೆಯನು ॥
ನೋಟಪಾತ್ರದಿ ಮಾಡಿದವರಾರು ಶಿವಚಾಪ ।
ಸೂಟಿಯಿಂ ನೆಗೆತ್ತಿ ಸೀತೆಯಂ ಮಿಗೆ ಗೆಲಿದು ।
ಕೋಟಿನೃಪರಂ ಕೊಂದ ಭಾರ್ಗವನ ಗರ್ವಮಂ ಸೆಳೆದನಾರೀತನಲ್ತೆ ॥ (32)

ಪೊಗಳಲೆಂತಳವಪ್ಪುದೆಮಗೆ ಸದ್ಗುಣಗಣವ ।
ಬಗೆಗಳನಿಸೆಂದು ಲೆಕ್ಕಿಸೆನಾಲ್ಕೊಗಂಗರಿದು ।
ಜಗತಿಯೊಳು ಮನುಜಾವತಾರವಂ ಸ್ವೀಕರಿಸಿ ಶ್ರೀಮಹಾವಿಷ್ಣುತಾನೆ ॥
ಮಿಗೆ ಗೋದ್ವಿಜರ ಪೊರೆಯೆ ಕರುಣದಿಂದೈತಂದ ।
ಬಗೆಯಲ್ಲದಿಪು ಭೂಭುಜೋತ್ತಮರ ಸಂತತಿಗೆ ।
ಸೊಗಯಿಪುವೆ ಸರ್ವಗುಣಸಂದೋಹಪೊಂದೆಸೆಯೆ ರಘುವೀರ ರಾಮನಂತೆ ॥ (33)

ಈತನರಸಾದೊಡಂ ಸುಖದೊಳಿರ್ಪೆವೆಂದು ।
ಭೂತಳದ ಜನರೆಲ್ಲ ಬಯಕೆಗೊಂಡಿದೆ ಮುನಿ ।
ವ್ರಾತಮಿಡುಗಣ್ಣವರ ಬಳಗವಾಕಾಂಕ್ಷಿಸಿದೆ ಶ್ರೀರಾಮನಭ್ಯುದಯಮಂ ॥
ಪ್ರೀತಿಯಿಂದನುಮತಿಸಿ ಯುವರಾಜಪಟ್ಟಮಂ ।
ಆತನಿಂ ಕಟ್ಟಿಸಂತೋಷಗೊಳಿಸಲ್ ಜನವ ।
ಖ್ಯಾತವಾದಪುದು ನಿಜಕೀರ್ತಿ ಮೂಲೋಕದೊಳಗೆಂದು ಬುಧತತಿನುಡಿದುದು ॥ (34)

ಪೊಳಗೆ ಘನವಾಗಸದೊಳಾಲಿಸುತಮನ್ನೆಗಂ ।
ಪುಳಕದಿಂ ಮೆಯ್ಯುಬ್ಬಿ ನಲಿವ ನೋಗೆಯು ತೆರದಿ ।
ಕಳಕಳಪದ್ವಿಜಗಣೋಕ್ತಿಗಳ ಕೇಳುತನೃಪತಿ ಹಿಗ್ಗಿ ಮಯ್ಯುಬ್ಬಿಮುದದಿಂ ।
ಬೆಳಗೆ ಮಿತ್ರೋದಯಮಂ ಸರಸಿಜಂ ಮಾಕಂದ ।
ಪೊಳಪಾಂತ ಮಾಳ್ಕೆಯೊಳ್ ರಾಮನಭಿಷೇಕವಂ ।
ಬೆಳಗನಿಟ್ಟಳೆ ನೋತ ಯುಗ ತೊಳಗುವಂದದಿಂದುಣ್ಮೆ ಕಣ್ಬನಿಗಳಾಗ ॥ (35)

## ಎರಡನೆಯ ಸಂಧಿ.

ಸೂಚನೆ ॥ ಗುರು ವಸಿಷ್ಠರ ಮತದೊಳ್ ಧರಾಭಾರಮಂ ।
ಧರಿಸಿ ಲೋಕವ ಪೊರೆಯೆ ರಘುಕುಲಲಲಾಮಶ್ರೀ ।
ಕರವ ದೀಕ್ಷೆಯ ನಾಂತು ರಾಜನ್ಯಲೀಲೆಯುಂ ಬೆಳಗಿದಂಸುರಪತಿಯೊಲು ॥

ಬಸವಂತನಂ ಕಂಡ ಕೋಗಿಲೆಯ ವಾಳ್ಕೆಯೊಳ್ ।
ವಸುಧಾಧಿಪತಿಸುತನನೀಕ್ಷಿಸಿ ಸುಮಂತ್ರ ಸಂ ।
ತಸದಿಂದ ಪೊಗಳಿ ಕರಗಳ ಮುಗಿದು ಮನ್ನಣೆಯನಾಂತು ಮಸ್ತಕದಿ ಬಳಿಕ ॥
ಪೊಸಪೀಠವಗ್ರದೊಳು ಕುಳ್ಳಿರ್ದ ಹರುಷರಸ ।
ಮೊಸರುವಂದದ ಮೃದುಳ ಭಾಷಣಗಳಿಂದ ಶುಭ ।
ದೊಸಗೆಯಂ ಬಿನ್ನವಿಸಲೆಳಸಿದಂ ವಿನಯದಿಂ ನಗರಾಜನುದರ ಶಶಿಯೆ ॥ (1)

ಧರಣೀಸುರೋತ್ತಮರು ರಾಹುಜಬಾಂಧವ ।
ವೆರಸಿ ದಶರಥರಾಜನೊಡ್ಡೋಲಗದೊಳಿರುತ ।
ಪರಿಪರಿಯ ಮಂತ್ರದುಪಮೆಗಳಿಂದ ಸರ್ವರಂ ಸಂತೈಸಿ ಸಮ್ಮತದೊಳು ॥
ನಿರುತ ಸಾಮ್ರಾಜ್ಯಾಧಿಪತ್ಯದ ಭಿಷೇಕಮಂ ।
ವಿರಚಿಸಲು ನಿಶ್ಚೈಸಿ ತಾತನಾದಂ ನಿಮ್ಮ
ಸ್ಮರಿಸಿದರ್ಥವನು ವಿಜ್ಞಾಪಿಸುವರೈತಂದೆ ತಂದೆ ನರಕಂಠೀರವ ॥ (2)

ತಾತನಾಜ್ಞೆಯ ಮಹಾಮಾತ್ಯನಿಂದಲಿ ಕೇಳ್ದು ।
ಜಾತಹರುಷಾನ್ವಿತನೆ ತೆರಳಿದಂ ರಘುಕುಲೋ ।
ದ್ಭೂತ ಭೂಭುಜ ಮಕುಟಮಣಿ ನಿಜಗೃಹಾಂತರ ದ್ವಾರ ದೇಶಗಳ ನುಳಿದು ॥
ಗೀತವಾದ್ಯಂಗಳಾರವಗಳ ನ್ನಾಲಿಸುತ ।
ಪ್ರೀತಿಯಿಂ ಮಣಿರಥವನಡರೆ ಪರಿವೇಷ್ಟಿಸಿದ
ಸೂತಮಾಗಧವಂದಿ ಸಂದೋಹ ಕಲಕಲಧ್ವನಿ ಬೆರ್ಚಿತೆಣ್ದೆಸೆಯನು ॥ (3)

ಸಿಂಗಾರ ರಾಜಮಾರ್ಗವ ಬೆಳಗುತಾಗ ರಘು ।
ಪುಂಗವನು ಪೊಂದೇರೊಳೈತಪ್ಪ ಶುಭಕರ ಬೆ ।
ಡಂಗ ನಿಟ್ಟಿಸಲಖಿಳ ನಾಗರರ್ ನಲವಿಂದೆ ನಿಂದುಭಯಪಾರ್ಶ್ವಗಳೊಳು ॥
ಇಂಗಡಲೊಳೊಗೆ ದವಳಸಂಗಡಿಗ ವಾರುಣಿಯ ।
ಭಂಗುರದ ಶೈಲಾಗ್ರದಲಿ ಪೊಳೆಯಲಾಮೋದ ।
ಹಿಂಗದೀಕ್ಷಿಸುವಂತೆ ಪೆರೆಸೌಧದಲ್ಲಿ ನೋಡಿದರ್ ಪಾಂಸಲೆಯರು ॥ (4)

ತಳಿರಡಿಯ ಗಿಳಿನುಡಿಯ ತೊಂಡೆವಣ್ಬಾಯ್ದೆರೆಯ ।
ಸುಳಿಗುರುಳ ತೊಳಪರಳ ಚೆಲ್ಗಂಗಳಪೆರೆಯ
ಪಳಿವ ಮುಖಕಂಬು ಸುಕಂಠ ಮದನೋತ್ಕಂಠ ಪೆರ್ಜಗೆಯ ಬಾಹುಲತೆಯ ॥
ನಳಿನಕರ ತಳಸುಕರ ಗರಿವೂಗಳಿನೆ ನಖರ ।
ಪೊಳೆವಲ್ಲ ಕಳೆವಲ್ಲವರ ಚಿತ್ರಬೆಳಗೆತ್ತ ।
ಸುಳಿನಾಭಿ ಮಿಗೆ ಶೋಭಿಸುವ ಚೆಲ್ವೆಯುವತಿಯರು ಬೆಡಗಿನಿಂ ದಿಟ್ಟಿಸಿದರು ॥ (5)

ನೆರೆದುಭಯ ಸೌಧಾಗ್ರದಲ್ಲಿ ಕುಳ್ಳಿರ್ದವರ ।
ತರುಣಿಯರ್ವರ್ಜನದುತ್ಸವದೊಳಂಬುಜಾಕಾರ ।
ಕರಲಾಜಗಳ ರಘೂತ್ತಮನ ಮಕುಟಾಗ್ರ ದೊಳ್ಸೂಸಿದರು ಪೂವಳೆಯನು ॥
ಸುರರು ಸಿರಿಯರಸಂಗೆ ಕರೆವಂತೆ ಪಿರಿಯಜನ ।
ರುರುತರದ ಪಳವಾತಿನಿಂದ ಶ್ರುತಿಗೈವುತಿರೆ ।
ನರನಾಥರೆಡಬಲದೊಳ್ಕೈತಂದು ಕೈಮುಗಿದು ವಂದಿಸಲ್ಕರಗಳತ್ತು ॥ (6)
ಸಂತಸದೊಳಖಿಳ ದಿಗ್ದೇಶದಧಿನಾಥರಾಗ ।
ಳಂತರವನರಿದು ಮೃದುನುಡಿಯಿಂದಲುಪಚರಿಸಿ ।
ಪಿಂತೆ ಬಹಭೂಸುರೋತ್ತಮರ ಗುರುಭಾವನೆಯೊಳಾನಂದ ಗೊಳಿಸಿ ಜನರ ॥
ಸಂತೆಯಂ ಮನ್ನಿಸುತೆ ರಾಜವೀಧಿಯೊಳೈದಿ ।
ಮುಂತೆಸೆವ ತಾತನರಮನೆಯ ಮುಂಗಡೆಯಲ್ಲಿ ।
ನಿಂತಿರಿಸಿ ರಥವನಿಳಿದಾಸುಮಂತ್ರನ ಹಸ್ತದುರುಲಾಘವ ದೊಲವಿನಿಂದ ॥ (7)
ಅರಮನೆಯನೊಳ ಪೊಕ್ಕು ಮಿರುಗುವಾಸ್ಥಾನ ದೊಳು ।
ಹರಿಪೀಠವಗ್ರದಲಿ ಕುಳ್ಳಿರ್ದತಾತನಂ ।
ದರುಶನಂಗೈದು ಚರಣಾಬ್ಜಕಭಿನಮಿಸಲುಂ ಸುತನ ಸಂತಸದೊಳಪ್ಪಿ ।
ಶಿರವನಾಘ್ರಾಣಿಸುತ ಹರುಷದಿಂದಂಕದೊಳು ।
ಸಿರಿಯರಸನಂ ತನೂಭವನೆಂದು ಕುಳ್ಳಿರಿಸಿ
ಸರಸತರ ಭಾಷಣಗಳಿಂವರಸನಿಂತೆಂದನಖಿಳ ಜನಸಮ್ಮತಿಯೊಳು ॥ (8)
ಪಾಕಶಾಸನ ಮುಖ್ಯ ದೇವತಾವಿಜಯಕ್ಕ ।
ನೇಕ ಸಾಹಾಯ್ಯ ಮನೆಸಗಿ ಸತ್ಕೀರ್ತಿಯಂ ।
ಜೋಕೆಯಿಂಗಳಿಸಿ ಸಕಲೇಷ್ಟಮೆಂದೆನೆ ಭೂಮಿ ಭಾರವಂ ಬಾಹುಯುಗದಿ ।
ಶ್ರೀಕಾಂತನಾಜ್ಞೆಯಿಂ ತಳೆದೆ ಬಹುವತ್ಸರಂ ।
ಬೇಕಾದ ಭೋಗವನ್ನನುಭವಿಸಿ ಭೂಸುರಾ ।
ನೀಕವಂ ಸತ್ಕ್ರತುಗಳಿಂ ಸಮೃದ್ಧಾರ್ಥರಂಗೈದೆ ಸುಖಕರ ದೊಳಾನು ॥ (9)
ಜರೆಯಿಂದ ಜೀರ್ಣ ಮಾಗಲ್ಕಂಗ ಧಾರಣೆಯು ।
ಪೊರೆಗಲಸಿದವು ಭುಜಗಳು ಭುಜಂಗೋಪಮದ ।
ಸಿರಿಕರದ ಭವನೀಯ ಬಾಹ್ವಾಶ್ರಯಂಗೈಯ್ಯೆ ಬಯಸಿದಳ್ ಭೂಕಾಂತೆಯು ।
ಧರಣೀಧವರ್ಸುರರು ಪರಿಪರಿಯಕಾಂಕ್ಷೆಯಿಂ ।
ವರವಬೇಡುತ್ತಿರ್ಪರೆಲೆ ಪುತ್ರಭೂತಳಕೆ ।
ದೊರೆಯಾಗಬೇಕೆನುತ್ತಖಿಳ ಜನರಿಂದು ಸಂಪ್ರೀತಿಯಿಂ ಬಯಸುವಂತೆ ॥ (10)
ಅದರಿಂದ ಪುತ್ರನೀ ಯುವರಾಜನಾಗಿ ಸ ।
ಮ್ಮುದಗೊಳಿಸು ಲೋಕವಂ ಮತ್ಸದೃಕ ಮೂಲೋಕ ।
ವಿದಿತ ಸದ್ಗುಣನಿಲಯ ಸುತಸಮುದಯಕೆ ಜ್ಯೇಷ್ಠ ಸಕಲಾಗಮ ಶ್ರೇಷ್ಠನು ॥
ಸದಯ ಸರ್ವಪ್ರಕೃತಿರಂಜಕ ಸುಧಾವಾಣಿ ।
ಯುದಯಮುಖಕದನಮುಖಕರ್ಕಶ ಮಹಾಪ್ರಾಜ್ಞ ।
ಚೆದುರನೀಂ ಯುವರಾಜನೆನಿಸು ಮರುದಿನ ಪುಷ್ಯಯೋಗದೊಳನುರಾಗದಿ ॥ (11)

ಕಾಮ ಮೋಹೋದ್ಭೂತ ಗುಣವುಳಿದು ಸದ್ಧರ್ಮ ।
ನೇಮದಿಂದನವರತ ದೇಶಕೋಶಂಗಳಂ ।
ಪ್ರೇಮದಿಂದಭಿವೃದ್ಧಿಗೊಳಿಸಿ ನಿಜಸುತರಿಂದು ಪ್ರಜೆಗಳಂ ಪರಿಪಾಲಿಪ ॥
ಭೂಮಿಪಾಲಕರ್ ಬಯಸುವರಖಿಲರಲ್ಲಿ ನೃಪ ।
ಸೋಮನೀನಾ ಪರಿಯಲಿ ಪ್ರಜಾಪಾಲನೆಯು ।
ಧೀಮಂತ ಯುವರಾಜನೆನಿಸಿ ನೀಂ ಗೈವುದೆಮ್ಮಭಿಮತವ ಸಲಿಸುವುದದಿ ॥ (12)

ಅವನಿಪತಿ ಯೀಪರಿಯೊಳೊರೆದ ಶುಭವಾರ್ತೆಯಂ ॥
ಯವನ ಕಾಂಭೋಜ ಕರ್ಣಾಟಕಾಂಧ್ರಾವನೀ ।
ಧವರೆಲ್ಲ ಕೇಳಿ ಭುಲ್ಲೈಸಲ್ಕೆ ಬುಧಗಣಂ ಸುತನವಿ ಮೆಚ್ಚುತಿರಲು ॥
ಸುವಿವೇಕದಿಂದೊರ್ವನಾಪ್ತ ನೀವಾರ್ತೆಯಂ ।
ತವಕದಿಂ ಕೌಸಲ್ಯೆಯೊಡನರುಹೆ ಸಂಭ್ರಮದಿ ।
ನವರತ್ನಭೂಷಣಾದಿಗಳನಿತ್ತುಪಚರಿಸಿ ನಲಿವುತಿರಲಿತ್ತಲರಸ ॥ (13)

ಸುತನಿಗಪ್ಪಣೆಗೊಟ್ಟು ಕಳುಹಿ ನಿಜಮಂದಿರಕೆ ।
ಮತಿಯಿಂದಮಾತ್ಯಮುಖ್ಯಭೂಭುಜರೊಳಂತೆಂದ ।
ನತಿಶಯದ ಶುಭಪುಷ್ಯಯೋಗ ಬಂದಿದೆ ನಾಳೆ ತನಯನಭಿಷೇಕವನ್ನು ॥
ಹಿತದಿಂದೆ ರಚಿಪುದಭಿಮತವೆಂದು ಪೇಳಸ ।
ಮ್ಮತಗೊಳಿಸಿ ಸಕಲರಂ ಸಂತೈಸಿ ಕಳುಹಿ ಮುನಿ ।
ಕ್ಷಿತಿಯರಸ ಸುಹಿತಲಂತಃಪುರಕೆ ಗಮಿಸಿದಂ ಸಂತೋಷಚಿತ್ತನೆನಿಸಿ ॥ (14)

ನಳಿನಪತ್ರಾಕ್ಷ ಶ್ರೀರಾಮನಂ ಮಗುಳೆ ಮ ।
ನ್ನಿಳಯಕ್ಕೆ ಕರೆತಹುದೆನುತ್ತ ನೇಮಿಸೆ ಮಂತ್ರಿ ।
ತಳೆದು ಪತಿಯಾಜ್ಞೆಯಿಂದೈದಿ ಬಾಗಿಲೊಳಿರ್ಪ ಜನರಿಂದಲರಿಕೆಗೊಳಿಸಿ ॥
ಘಳಿಲನಪ್ಪಣೆಪಡೆದು ಬಂದೆರಗಿ ರಘುವೀರ ।
ನೆಳಗೆ ಪಿತ್ರ ಬೇಳ್ದಂತೆ ಬಿನ್ನವಿಸೆ ಸಂತಸಂ ।
ತಳೆದು ದರ್ಶನಲಾಭಕೆಂದು ಮಣಿರಥವೇರಿ ಬಂದಂ ಸುಮಂತ್ರನೊಡನೆ ॥ (15)

ತನಯ ಮಂದಿರದೆಡೆಗೆ ಬಂದ ವಾರ್ತೆಯ ಕೇಳಿ ।
ಜನಪನಪ್ಪಣೆಗೊಂಡಲ್ಲಕ್ಷಾಂತರಗಳುಳಿದು ।
ವಿನಯದಿಂದೊಳಪೊಕ್ಕು ದೂರದೊಳ್ಬಪ್ಪನಂ ಕಂಡು ಭಯಭಕ್ತಿಯಿಂದೆ ॥
ತನುಪುಳಕದಿಂದೆ ವಂದನೆ ಗೈದು ಕೈಮುಗಿಯು ।
ಲಿ ಪ್ರಿಯದೊಳಪ್ಪಿ ಸಂತಸದೊಳತಿ ಪ್ರೇಮದಿಂ ।
ಕನಕಪೀಠದೊಳೊತ್ತಿನಲಿ ಕುಳ್ಳಿರ್ಪುದೆನೆ ಮಂಡಿಸಿದ ರಘುವೀರನು ॥ (16)

ಸಸಿಯು ಸಮ್ಮುಖದಿ ಬೆರ್ಚುವ ಪಯೋನಿಧಿಯಂತೆ ।
ವಸುಮತೀರಮಣ ಕುವರನ ನೋಡಿ ದಂತರುಚಿ ।
ವಿಶದಮಂದರಹಾಸಮೊಸಗುತಂ ಮೃದು ಮಧುರ ಭಾಷಣದೊಳು ।
ಪೊಸತೆನಲ್ ನುಡಿದನೆಲೆ ಪುತ್ರಕ ಸ್ವವೀರ್ಯದಿಂ ।
ವಸುಧೆಯಂ ಪಾಲಿಸಿದೆನೇಕ ದಕ್ಷಣೆಯಿಂದ ।
ಬೆಸಗಿದೆಂ ಕ್ರತುಗಳಂ ಪಡೆದೆನು ಕುಮಾರ ಹಿತರಾದಾತ್ಮಸಂಜಾತರ ॥ (17)

ದೇವಋಷಿಪಿತೃಋಣ ವಿಮುಕ್ತನಾದೆಂ ಮನದಿ ।
ಭಾವಿಸಿದುದೆಲ್ಲಮಂ ಭೋಗಿಸಿದೆನೆನಗಿನ್ನು ।
ಈವಸುಧೆಯೊಳ್ಬಯಸುವರ್ಥ ನಿರಗಭಿಷೇಕರಚನೆಯಂ ಮಾಳ್ಪುದುಳಿದು ॥
ಕೋಪಿದನೆ ಮತ್ತನ್ಯವೊಂದಿಲ್ಲ ಮದರಿಂದ ।
ಪಾವನೀ ಕೃತ ಮನಿಸು ಪ್ರಿಯದಿಂದೆ ಬೇಡುವರು ।
ದೇವತೆಗಳಂ ಸತತಾಂತಃಪ್ರದೊಳರ್ಪ ಜನರು ನಿಶ್ಚಭ್ಯುದಯಕೆ ॥ (18)

ಲೋಕಹಿತಕೋಸುಗಂ ನಾಳೆಯುವರಾಜ್ಯಾಭಿ ।
ಷೇಕಮಂ ಕೈಗೆಂಡು ಪೂಡವಿಯಂ ಪಾಲಿಪುವು ।
ಶ್ರೀಕಾಂತನಂತೆ ಮಗುಳೊಂದು ವಾರಿಂ ಕನಸ ಕಂಡೆನಾಂ ಪೋದಿರುಳೊಳು ॥
ಆಕಾಶದಿಂದ ಪುಲ್ಕಪಾತನಿರ್ಘಾತ ।
ಬೀಕರವ ನಕ್ಷತ್ರ ಪತರ ಸಸಿಕುಸಿವುದ ।
ನ್ನೀಕನಸ ದೈವಜ್ಞರೊಡರೆಯಲವರಿಂದರಿದರ ಫಲವಾಗಮವರು ॥ (19)

ತರಣಿಧರಣೀತನಯ ಸೌಮುಂತಾದ ಗ್ರಹ ।
ಮುರುತರದ ವಕ್ರಗತಿಯಿಂ ತೋರ್ಪವಲ್ಲದದೆ ।
ಧರಣಿಪತಿಗಪ್ಪುವತಿ ಭೀತಿಯೊಂದೆ ರೆವರಾ ಕಾರ್ತಾಂತಿಕಾಗ್ರೇಸರರ್ ॥
ನರರಸ್ಥಿತಿಯಧ್ರುವ ನಟಾಂಚಲ್ಯ ಚಿತ್ತಮಿದು ।
ತಿರಮಿಲ್ಲ ಮದರಿಂದೆ ತ್ವರಿತದಿಂ ಪಟ್ಟವಮಂ ।
ವಿರಚಿಸುವರಭಿಲಾಷೆ ಪೆರ್ಚುತಿದೆ ತನಯ ಕೇಳನ್ನೊಂದಭಿಪ್ರಾಯಮಂ ॥ (20)

ಮಾತುಳನ ಮನೆಯೊಳಹ ಭರತ ಸತ್ಯವ್ರತ ಪಿ ।
ನೀತ ಸದ್ಗುಣನಿಳಯ ಸಕಲಾಗಮಜ್ಞನತಿ ।
ಪ್ರೀತಿಭಕ್ತಿಯೊಳಿರುವ ತಿಳಿಯಲ್ ಭವಸ್ವಿಷಯದೊಳಗಾವಡಂ ಮಾನಸ ॥
ಜಾತುಚಂಚಲ ಮೆನಿಸದಿರದು ಭ್ರಾಂತಿಯು ಪುರುಷ ।
ರೀತಿಯದರಿಂ ನಾಳೆ ಪುಷ್ಯಯೋಗದಿ ಋಷಿ ।
ವ್ರಾತಮೆಚ್ಚಪ್ಪಲು ಯುವರಾಜ್ಯಾಭಿ ಷಿಕ್ತ್ಯಮಂ ಧರಿಸು ಮತ್ಪ್ರೀತಿಕಾಂತ ॥ (21)

ಇದು ಮನ್ಮನೋರಥ ಭವನ್ಮತಮಿದೀಪರಿಯ ।
ಪದಮೆನಿಸಲರಸ ಶ್ರೇಯಸ್ಸಿಗತಿ ವಿಘ್ನಂಗ ।
ಳೊದಗುವುವೆನುತ್ತ ಬುಧರೊರೆವರು ಸತ್ಯಮದು ಶುಭಕಾರ್ಯ ಶೀಘ್ರದಿಂದ ॥
ಸದಯ ಕೈಕೊಳ್ಳಲನುಗ್ರೈದು ಮತ್ತೀನಿಶೆಯ ।
ವಿಧಿಯಿಂದ ಪತ್ನಿಸಹ ನೇಮದಿಂ ಕಳೆದು ರವಿ ।
ಯುದಿಸೆ ಭೂಸುರ ಮತದೊಳೆಸ್ಸನ್ಮನೋಭೀಷ್ಟ ಸಂಪೂರ್ಣಮೆನಿಸುಪ್ರಿಯದಿ ॥ (22)

ಎನುತ ಸಂಪ್ರೀತಿಯಿಂ ನೇಮಿಸಿದ ತಾತಗಂ ।
ವಿನಯದಿಂದಭಿನಮಿಸಿ ಬೀಳ್ಕೊಂಡು ಜನನಿಯಿಹ
ಮನೆಗೈದಿ ಮಾತೆಗಂ ನಮಿಸಿ ಕರಗಳ ಮುಗಿದು ಬೊಪ್ಪನೇಮಿಸಿದಪರಿಯ ॥
ಇನಿತ ಬೈಚಿಡದೆ ವಿಸ್ತರಮಾಗಿ ಬಿನ್ನವಿಸೆ ।
ಸನುಮತಿಸಿ ಸಂತಸದಿಹಿಗ್ಗಿ ಸಾಮ್ರಾಜ್ಯಸಿರಿ ।
ತನಗಡಸಿತೆಂಬುತ್ಸವದೊಳು ಕುವರನನಪ್ಪಿ ಶುಕವಾಣಿ ಮಗುಳಿಂತೆಂದಳು ॥ (23)

ಖಿಲುಕಾಲದಿಂ ಒಯುಗಿ ದೇವತಾರಾಧನೆಯು ।
ನೆಲವಿಂದಾನೆಸಗಿ ಪ್ರಾರ್ಥಿಸಿದ ಕಾಂಕ್ಷೆ ಬಂ ।
ದೊಲಿದುದೈ ರಾಮ ಜೀವಾತ್ಮಕ ದಯಾಪರನೆ ಶರಣಜನ ಪಾರಿಜಾತ ॥
ಗೆಲವಿಂದ ಪಾಪಿಜಾತಕನೆನಿಸಿ ಸಾಮ್ರಾಜ್ಯ ।
ದೊಲವ ನನುಭವಿಸಿ ತ್ರಿಶಂಕುವ ಭಗೀರಥನೋ ।
ಲಲಘುಮತಿಯೆನಿಸಿ ಸುಖಿಯಾಗಿ ಚಿರಕಾಲ ನೀಂ ವಿಜಯಪರನೆನಿಸು ಕಂದ॥ (24)

ನಿನ್ನ ಭ್ಯುದಯಕಾಂಕ್ಷೆಯಿಂದಿರ್ಪ್ಪ ನೌಪಿತ್ರಿ ।
ಯನ್ನು ಸಂತಸ ಗೊಳಪುದೆನೆ ಕೇಳ್ದು ರಾಮ ಬಲ ।
ವಂ ನೆಮ್ಮಿ ಕೈಮುಗಿದು ನಿಂತಿರ್ಪ ಲಕ್ಷ್ಮಣನ ನಿಟ್ಟಿಸುತಲಿಂತೆಂದನು ॥
ಎನ್ನಸಿರಿ ಸಂಪದಕೆ ಕರ್ತನೀಂ ರಾಜ್ಯಸುಖ ।
ವನ್ನು ಭೋಗಿಸು ಯಥೇಪ್ಸಿತವಾಗಿ ಸತತಸಂ ।
ಪನ್ನಮೆಂದೆನಿಸನ್ನ ದೇಹ ರಾಜ್ಯದ ಭೋಗ ನಿನಗೋಸುಗವೆ ರಕ್ಷಿಪೆಂ ॥ (25)

ಎಂದೊರೆದು ಮಾತೆಯೊಡನೆಂದ ನತಿವಿನಯಪಿ ।
ದಿಂದಿನಿರುಳಾನು ಜಾನಕಿ ಸಹಿತ ನೇಮದಿಂ ।
ಪೊಂದಿ ದರ್ಭಾಸನವ ವುಪವಾಸಪಿರಪೇಳ್ಕುಮೆಂದು ಋತ್ವಿಜರುಸಹಿತ ॥
ತಂದೆಯಾಜ್ಞಾಪಿಸಿದ ನಾಳೆಯಪ್ಪಭಿಷೇಕ ॥
ಬಂಧುರದ ಮಂಗಳಾಚರಣೆಗಳ ಶಾಸ್ತ್ರವಿಧಿ ।
ಯಿಂದೆಸಗುವಂತೆ ದಯೆಗೈವುದೆನುತೆರಗುತಂ ಜನನಿಯಪ್ಪಣೆಯನಾಂತು ॥ (26)

ನಿಳಯಕೈತರೆ ರಾಮದಶರಥ ಮಹೀಪಾಲ ।
ನಳನಭವಭವನೊಡನೆ ಪೇಳದಂ ಕಾಕುಸ್ಥ ।
ನಿಳಯಕ್ಕೆ ಗಮಿಸಿ ಸಂಪದ ರಾಜ್ಯ ಕೀರ್ತಿಗಳ ಪೆರ್ಚುಗೆಯು ಲಾಭತತಿಯು ॥
ಬೆಳವಿಂಗೆ ಸೀತೆಸಹ ಶ್ರೀರಾಮನುಪವಾಸ ।
ತಳೆವಂತೆ ದಯದಿಂದಲಾಜ್ಞಾಪಿಸು ದಿಂದು ।
ಪೊಳಲಸಿಂಗರಗೈವೊಡಪ್ಪಣೆಯ ಪಾಲಿಸುಪ್ರದೈ ಕೃಪಾಸಿಂಧು ಬಂಧು ॥ (27)

ಸರಸಿಜಾಸನ ತನಯ ದಶರಥನ ವಾಣಿಯಂ ॥
ಹರುಷದಿಂ ಕೇಳ ರಥವೇರಿ ಶ್ರೀರಾಘವನ ।
ಸಿರಿಕರದ ಗೃಹಕೆನಡೆತಂದು ಹೋರತ್ರಯುವ ಕಳೆದು ಬಹವಾರ್ತೆಯನ್ನು ।
ಚರರಮುಖದಿಂ ಕೇಳ ಭಯದಿಂದಲಿದಿರೆದ್ದು ।
ಗುರುವಿನಡಿಗೆರಗಿ ತೇರಿನಿಂ ಕರಲಾಘವ ।
ನ್ನೆರಸಕೊಟ್ಟೆಳುಹಿ ಸದ್ಭಕ್ತಿಯಿಂ ಕರೆದೊಯ್ದು ಮಣಿಯಗದ್ದುಗೆಯನಿತ್ತು॥ (28)

ಕನಕಪಾತ್ರೆಯೊಳು ವೈದೇಹಿಯುದಕವನೀಯೆ ।
ವಿನಯದಿಂ ಪದಪಯೋಜವ ತೊಳೆದು ಪೂಜಿಸಿಯೆ ।
ತನುಪುಳಕದಿಂದ ತತ್ತೀರ್ಥಮಂ ಮಸ್ತಕದೊಳಾಂತು ಸತಿಸಹಿತ ನಮಿಸಿ ॥
ಮುನಿತಿಲಕ ಭವದೀಯ ಚರಣೋಪಕದ ಭರಣ ।
ಘನತರದ ಧನ್ಯತೆಯ ನೆನೆಗಿತ್ತುದೆಂದು ರಘು ।
ಜನಪ ವಿಜ್ಞಾಪಿಸಲ್ ನಸುನಗುತ ವೈಧಾತ್ರನಿಂತೆಂದ ರಾಮನೊಡನೆ ॥ (29)

ಹರ ಭವತ್ಪಾದೋದಕವ ಮಸ್ತಕದೊಳಾಂತು ।
ನೆರೆಧನ್ಯನಾದ ಮತ್ಪಿತ್ರ ನಿನ್ನ ಚರಣಭವ ।
ಸಿರಿಕರದ ತೀರ್ಥಾವಗಾಹದಿಂ ಪೂತಮಾಯ್ತು ಗಾತ್ರಮೆಂದೆನಿಸಿ ಬಳಿಕ ॥
ನಿರತ ರಾಜಿಸುವನೀ ಲೋಕಕುಪದೇಶಕರ ।
ಕರವಾಣಿಯುಂ ನುಡಿವಾದೊಡೆಯು ನಾಂಬಲ್ಲೆ ।
ಪರಕೆಪರತತ್ವ ಪರಮಾನಂದಮೂರ್ತಿ ಸರ್ವಾತ್ಮಗತ ವ್ಯೋಮವೆಂದು ॥ (30)

ದೇವಕಾರ್ಯಾರ್ಥವಂ ಸಿದ್ಧಿಗೈವೋಸುಗಂ ।
ಭಾವಿಸುವೆ ಭಕ್ತಜನ ದಿಷ್ಟಾರ್ಥಕೋಸುಗಂ ।
ಪಾವಿನಂತಲೆವ ದಶಕಂಧರನ ಸಂತತಿಯ ಸಂಹರಿಸಲೆಂದು ಜಗದಿ ॥
ಪಾವನತರಾಂಗವಂ ಧರಿಸಿ ನೀಂ ಬಂದಿಹುದ ।
ದೇವನಾಂ ಬಲ್ಲೆನಾದರು ಪೇಳಕೂಡದಿದು ।
ದೇವತಾಗೋಪ್ಯಮದರಿಂ ಲೋಕಜನರಂತೆ ಮಾಯಾನುಸಾರಿಯೆನಿಸಿ ॥ (31)

ನಡೆವನಡೆಗನುಕೂಲವಾಗಿ ನೀಂ ಶಿಷ್ಯನಾ ।
ನೊಡನೆ ಗುರುವೆಂದೆನ್ನೊಳೇರ್ಪಡಿಪೆ ಗುರುವಿಗಾ ।
ರೊಡೆಯ ತಂದೆಯ ತಂದೆ ಸರ್ವಾತ್ಮ ಚೈತನ್ಯ ಯಂತ್ರವಾಹಕ ರಮೇಶ ॥
ಪೊಡವಿಯೊಳ್ಬಾಳ್ವ ಮನುಜರಿಗೆ ಪೌರೋಹಿತ್ಯ ।
ಕಡುದೂಷ್ಯ ಜೀವನಂ ವಹಿಸ ಸಲ್ಲದು ವಾಣಿ ।
ಯೊಡನಾಜ್ಞೆಯೊಳಗೆ ಮತ್ತಾಮದೆನೆಯಿಕ್ಷ್ವಾಕುವಂಶ ಪೌರೋಹಿತ್ಯವು ॥ (32)

ಅಂದಿನಿಂದವಿತಕಾಂಕ್ಷೆಯೊಳಾನು ಕಾಯ್ದಿರ್ದು ।
ದಿಂದಿಗಾದುದು ಮನೋಭೀಷ್ಟ ನಿನ್ನಯ ದಿವ್ಯ ।
ಸಂದರುಶನದೊಳೆನಗೆ ಪರಮಪಾವನ ಮೂರ್ತಿ ಲೋಕಮೋಹಿಸಿ ಮಾಯೆಯುಂ ॥
ಪೊಂದಿರ್ಪಳನುದಿನಂ ನಿನ್ನಾಜ್ಞೆಯೊಳ್ ರಘುಕು ।
ಲೇಂದು ದಯದಿಂದೆನಗೆ ಪಾಲಿಪುದು ಪ್ರಕೃತಿಗುಣ ।
ಸಂಬದ್ಧವಾಗದೊಲು ಭವದೀಯ ಸನ್ಮೂರ್ತಿ ಚಿತ್ತಮನ್ನಗಲದಂತೆ ॥ (33)

ಇಂತೊರೆದು ವಿಧಿಸುತಂ ರಘುವೀರ ನೊಡನೆ ಬಹು ।
ಸಂತಸದಿ ಪ್ರಕೃತೋಪಯೋಗ ಲೋಕಾನುಗತ ।
ವಾಂತಕಾರ್ಯವ ನುಡಿವನಿಂದು ದಶರಥ ಮಹೀಪಾಲ ನತಿಪ್ರೇಮದಿಂದ ॥
ಪಿಂತೆ ನಹುಷಂ ಯಯಾತಿಗೆ ರಾಜ್ಯಭಾರವ ದಿ ।
ಗಂತವರಿವಂತಿತ್ತ ತೆರದೊಳಗಯೋಧ್ಯಾಧಿ ।
ಕಾಂತನೆಂದೆನಿಸಲಿಚ್ಛೈಸಿರ್ಪನೆಲೆ ರಾಮ ಪುಷ್ಯಯೋಗದೊಳುನಿನ್ನ ॥ (34)

ಸತಿಸಹಿತಲಿಂದು ನೀ ನುಪವಾಸಮಿರ್ಪುದು ।
ಕ್ಷಿತಿಪನಾಜ್ಞೆಯೆನುತ್ತ ವೇಳ ವಿಧಿಯಿಂ ವಿಪ್ರ ।
ಪತಿಸುಮಂತ್ರಾರ್ಥೋಕ್ತ ಮತದಿಂದ ಉಪವಾಸ ವ್ರತವ ನೇಮಿಸಿ ಪ್ರೇಮದಿ ॥
ಅತಿಶಯದಿ ರಾಮನಿಂದುಪಚಾರಗಳನಾಂತು ।
ನುತಿಸಿ ಬೀಳ್ಕೊಂಡು ರಥವೇರಿ ನಡೆತಂದನಂ ।
ದತುಳ ಹರ್ಷೋದ್ರೇಕದಿಂದ ದಶರಥಮಹಾರಾಜನರಮನೆಗೆ ಬಳಿಕ ॥ (35)

ಗುರುವಸಿಷ್ಠಂ ಗಮಿಸಲಿತ್ತ ರಘುಕುಲತಿಲಕ ।
ಕರೆಸಿ ನಿಜಬಾಂಧವರ ಮಿತ್ರಜನರಾಪ್ತರಂ ।
ಪರಿಜನಂಗಳ್ಗೆಲ್ಲ ತೋರಿದಿಪ್ಪುವ ಸಲಿಪ ನಾಳೆಬಹ ರಾಜಸಿರಿಯು ॥
ಧರಣೀಶ ದಶರಥಂ ಮನ್ನಿಸಿದಪರಿಯು ಪ್ರುದು ।
ಕರದಿಂದಲರುಪಿ ಸಂತಸಗೊಳಿಸಿ ಮೊಂಗಲ್ಯ ।
ಕರವಸ್ತ್ರಭೂಷಣಾಗಳಂಧರಿಸಿ ಗುರು ಪೇಳ್ದತೆರದಿ ಸೇಮಾದೊಳರ್ವನು ॥ (36)

ರಾಮಾಭಿಷೇಕದುತ್ಸವವಾರ್ತೆ ಪಸರಿಸಲ್ ।
ಭೂಮಿಸುರರ್ನೆರೆದು ತ್ರಮತಮಗೆ ಸಂತೋಷ ।
ಕಾಮಿತಗಳ ಹವೆನುತಲಲ್ಲಲ್ಲಿ ಕುಳ್ಳಿದರ್ ತಮ್ಮೊಳಗೆ ತಾವು ನಲಿಯೆ ॥
ಭೂಮಿಪತಿಗಳೆಲ್ಲ ಕೇಳುತುತ್ಸವವನ್ನು ।
ಪ್ರೇಮಗೊಳುತೆಂದರಿನ್ನಹಿತ ಭಯಮದು ಪರಿದು ।
ದೀಮಹಾ ಸಾಮ್ರಾಜ್ಯಾಧಿಪತಿಯಪ್ಪನೆನುತುಬ್ಬಿ ಹಾರೈಸು ತೊಪ್ಪಿರ್ದರು ॥ (37)

ಬೆಳಗಿತಲ್ಲಲ್ಲಿ ಶುಭವಾರ್ತೆ ಪತ್ತನದೊಳುಂ ।
ಬೆಳಗಿತತಿಶಯಮನೋಹರ್ಷ ಸಂತೋಷಮುಂ ।
ತೊಳಗಿತಾವೆಲ್ಲಾಯವಿದ ಚಿತ್ತವೃತ್ತಿಗಳಲ್ಲಿ ಸಕಲಜನಸಂದೋಹದ ॥
ಥಳಥಳಪ ಭೂಷಣಾಂಬರಗಳಂ ಸಿಂಗರಿಸಿ ।
ಕಳಕಳಪ್ರೊಲಂಗಣಂಗಳನಲಂಕೃತಿಗೈದು ।
ಪಲಬಗೆಯ ಧೂಪದೀಪಿತ ಮಹಾವಾಸನಂಗೊಳಸಿದರು ಬೀದಿಗಳನು ॥ (38)

ಚತುರವಿಧವರ್ಣಜನರೆಲ್ಲ ಪೂಜಿಸಿ ಶ್ರೀಯುತ ।
ಪತಿಯು ಬೇಡಿದರು ಶ್ರೀರಾಮನೀ ಮುನಿಮತದಿ ।
ಕ್ಷಿತಿಯರಸನೆನಿಸು ಪ್ರೊಲ್ಕೃತಿಗೆಯ್ಯ ವೇಳ್ಕೆನುತೆ ದೇವಾಲಯಂಗಳಲ್ಲಿ ॥
ಅತಿಶಯದಿ ಧೂಪದೀಪೋತ್ಸವಂಗಳನೆಸಗಿ ।
ಪ್ರತಿಪದಂಗಳೊಳು ರಘುವರನಗುಣ ಕಥನಗಳ ।
ಜತನದಿಂ ಪಾಡುತಿರುತಿರ್ದರಂದಿನದಿನದ ಸಂತಸವನೇವೇಳ್ವೆನು ॥ (39)

ಗುಣಿಯೆನಿಸಿ ಸರ್ವಭೂತಾಂತರಂಗದಿ ಮಣಿ ।
ಗಣಕಲಿತಸೂತ್ರದಂದದಿ ಮಿನುಗುತನುದಿನಂ ।
ಗುಣಗಳಂಟದ ವಿಶ್ವಸೂತ್ರಧಾರಕ ಜಗತ್ತ್ರಯ ಸರ್ವಸಾಕ್ಷಿಮಯನು ॥
ಪ್ರಣವ ಗೋಚರ ರಾಮಪುರದಧೀಶ್ವರ ಜನರ ।
ಕಣ್ಣನಕೆ ಮನುಜಲೀಲೆಯಂತೋರಿ ಸೇಮದಿಂ ।
ಧಣಿಮಾಡಿ ಸಿದ್ಧಿಯುತ ಗುರುವಿನಾಜ್ಞೆಯೊಳಿರ್ದ ನಗಜೆ ವಿಬುಧಾರ್ಥವಾಗಿ ॥
(40)

(ಸಂಧಿ 2, ಪದಗಳು 80.)

## ಮೂರನೆಯ ಸಂಧಿ.

ಸೂಚನೆ॥ ಪಿಸುಣವಿಕ್ಕುವ ಋಷಿಯು ಪೊಂಬೊಡೆಯನಾಜ್ಞೆಯಿಂ ।
ವಸುಮತೀತಳಕಿಳಿದು ರಾಮನ ಪದಾಬ್ಜಕಂ ।
ಬೆಸಸಿ ನಿಜತತ್ವಮಂ ಗಮಿಸೆ ಸರಸತಿ ಬಂದಳಮರೇಂದ್ರ ನಪ್ಪಣೆಯೊಳು ॥

ಚಿತ್ರದಧಿನಾಥಕೇಳ್ ರಾಮನಾಭ್ಯುದಯವಾರ್ತೆ ।
ಕೆತ್ತುರಿಯ ಕರಡಗೆಯ ಬಾಯ್ದೆರೆದ ವಾಳ್ಕೆಯೊ ।
ಳ್ಬಿತ್ತರಂಬೋಗೆ ದಿಗ್ದೇಶದ ಜನರ್ಸೆರೆದು ಸಂಭ್ರಮದೊಳ್ಬಿತರುತಿರೆ ॥
ಮತ್ತೀಶುಭೋದಂತ ಸಗ್ಗಕೆವರಲ್ಸುರಪ ।
ಚಿತ್ತದನುತಾಪದಿಂ ಸಕಲ ಮುನಿಜನಪ್ರಬುಧ
ಮೊತ್ತಮಂ ಕರೆಸಿ ಮಂತ್ರಾಳೋಚನಂಗೈದು ಮುಂದಪ್ಪಕಜ್ಜದಿರವ ॥ (1)

ವಾಸವಂ ದಿಕ್ಪಾಲ ಸುರಮುನಿಗಳೊಡವೆರೆದು ।
ಬಾಸಣಿಣ್ಣ(ನಿಯ)ನೆಡೆಗೈದು ಪೊರಮಟ್ಟು ನಿಜ ।
ಬೇಸರವ ಚಿತ್ತರದಿ ಬಿನ್ನಪಂ ಗೈದನೆಲೆ ದೇವ ಸಿರಿಮರಸಮುನ್ನ ॥
ಭಾಷೆಯನ್ನಿತ್ತು ಮಾನಿಸರೂಪಮಂ ತಳೆದು ।
ಈಸುಜನರೆಡರ ಪರಿಹರಗೈಯುವಲೆ ಗಾವ್ಯ ।
ಭಾಸುರವ ಭೋಗೇಚ್ಛೆಯಿಂವರಸುತನ ಕೆಳಸಿ ರಘುವೀರನೆಡೆ ಗೊಂಡನು ॥(2)

ನಾಳೆ ಪುರದರಸುತನು ದಭಿಷೇಕ ಮತ್ಕಾರ್ಯ ।
ಜಾಳಪ್ಪುದದರಿಂದೆ ಬಾಧಿಸುವ ವಶವದನ ।
ಖೂಳಖಳಸುಪಟಳ ಮದೆಂತು ನಿಲುವುದು ಸುಖವು ದೊರಕೊಂಬುದೆಂತುಪಾಯ ॥
ದೇಳಗೆಯನುಸಿರೆಂದು ಭಯದಿಂದಸುರರೆಲ್ಲ ।
ನಾಳೀಕಪೀಠನಂ ಬೆಸಗೊಳಲ್ ನಸುನಗುತ ।
ಪೇಳದಂ ಪಾಕಶಾಸನ ಮುಖ್ಯಬಿಡುಗಣ್ಣದಂಗುಳಗೆ ಪ್ರೇಮದಿಂದೆ ॥ (3)

ಬೆದರಲೇತಕೆ ನೀವು ಜಗದೀಶ ಸಿರಿಯರಸ
ಸದಯನತಿಸತ್ಯಸಂಕಲ್ಪನಾತನ ಭಾಷೆ ।
ಪದುಗುವುದೆ ನುಸುಳನೊಳು ನಿಮಗಭಯ ಮಿತ್ತಂತೆ ದಶಶಿರನ ಸಂತತಿಯನು ॥
ಸದೆದಿಟ್ಟು ಗೋದ್ವಿಜರಿಂಗಧಿಕ ಶುಭಗೊಟ್ಟು ।
ಪದುಮಾಕ್ಷ ಕೆಲಕಾಲ ಭೂತಳದಿ ಬಾಳ್ದಪನು ।
ನಿಮ ದಿಟಂ ಭಯಬೇಡ ಫಲಿಸುವುದು ಮನದಿಷ್ಟ ಮಿದಕೆ ಸಂದೇಹಮಿಲ್ಲ ॥ (4)

ವನಜಾಸನಂ ಪೇಳ್ದವಾಣಿಯಿಂ ಸಂತುಷ್ಟ ।
ರೆನಿಸಿ ಸಂತೋಷದಿಂ ದೇವಸಭೆಯೈದಲ್ಕೆ ।
ಮನದೊಳದ್ಭಿಮತವ ಬೆಸಸಿದಂ ನಾರದನೊಳಂತೆಂದು ವಿನಯದಿಂದ ॥
ಮುನಿವರ್ಯನೀಂ ಪೋಗಿ ಕೋಸಲಾಭಿಧನಗರ ।
ವನುವಿನಿಂ ರಘುಪತಿಯ ಚರಣಾಬ್ಜವನು ಕಂಡು ।
ಮನುವಿನಂ ಮಾಡು ಮತ್ಕಾಂತರ್ಯದೇಶದೊಳ್ಪಿರತೆನಿಸಲರಿಯದಂತೆ ॥ (5)

ದುರುಳ ದಶಕಂಧರನ ತರಿದಿಕ್ಕಿ ಲೋಕವಂ ।
ಪೊರೆಸುವೆ ಗುಳ್ಳೈತಪ್ಪೆನೆಂದಭಯವುಮಂ ಕೊಟ್ಟು
ನರರೂಪತಾಳ್ವು ಭೂತಳಕ್ಕೈದಿ ಮನುಜ ಸುಖಲೀಲೆಯನೊಪ್ಪಗೊಂಡು ॥
ಅರಸು ತನವಭಿಷೇಕವುಮಂ ಮಾಡಿಕೊಳ್ ವಾಣಿ ।
ವರವೆನಿಪ್ಪುದೆಂತು ತ್ರಿದಶರಿಗಾರು ಹಾದಿ ಮುಂ ।
ದರಿಯುಪಿದೆ ದಯದಿಂದ ಬೆಸಸವೇಳ್ಕೆಂದರುಪಿ ಬರ್ಪುದತಿ ವೇಗದಿಂದ ॥ (6)

ನಳಿನಪೀಠಂ ಬೇಳಲೀ ಪರಿಯ ಸಂತೋಷ ।
ಕಲಿತ ನಾಗುತಲೆರಗಿ ಬೀಳ್ಕೊಂಡು ಮೂಲೋಕ ।
ಕಲಹಕಥಿನಾಯಕಂ ನಿಖಿಳ ಮುನಿನಾಯಕಂ ನಾರದಂ ಭೂಲೋಕಕೆ ॥
ಲಲಿತಮೃದುತರ ದಿವ್ಯರಸ ಚರಿತಮಾಧುರ್ಯ ।
ಕಲನಾದಯುತ ವಲ್ಲಕಿಯನು ಬಾಜಿಸುತಲುಂ ।
ನಲವಿನಿಂ ಮೂರ್ಛನಾಕ್ರಮಗಳಾಲಿಸುತಲುಂ ಪಾಡುತೈತಂದ ಹರಿಯ ॥ (7)

ಸಿಂಗರದ ತೋರಣಗಳೋರಣದ ಪರ್ವತೋ ।
ತ್ತುಂಗಮದ ವಾರಣದ ವಾರಣಗಳಕ್ಕಡೆಯ ।
ಶೃಂಗಾರ ಘಂಟಿಕಾ ಘಂಣ ಘಂಣೀರವದಿ ರಮ್ಯವಹವೀಥಿಗಳಲಿ ॥
ಸಂಗೀತ ನರ್ತನದ ಗಂಧರ್ವ ಗಾಂಧರ್ವ ।
ರಿಂಗಿತಗಳರಿತು ಸಂತೋಷಿಸುವ ತೋಷಿಸುವ ।
ಶೃಂಗಾರಜನ ಹೃದ್ಯಯೋದ್ಯಮನೊಳಪೊಕ್ಕ ಮುನಿರಾಯನತಿಮೋದದಿ ॥ (8)

ನಗರವೀಥಿಗಳಲ್ಲಿ ನಾನಾ ವಿನೋದಗಳ ।
ಬಗೆಬಗೆಯ ರಚನೆಗಳ ನಿಲಯಗಳ ನಿಟ್ಟಿಸುತ
ನಗೆಯ ಮಿನುಗಿಸುತ ನಾರದ ಮಹಾಮುನಿ ಮೌನಿವರನೈದಿ ರಘುವೀರನ ॥
ಸೊಗಸಿನರಮನೆಯ ನೊಳಪೊಗಲು ದೌವಾರಿಕನು ।
ಬಗೆಯಮಿಯೆನುತ್ತ ಕೈಮುಗಿದು ಕೆಲಸಾರಲ್ಕೆ ।
ನಗವೈರಿಗತಿಹಿತಂ ನಡೆತಂದು ನೋಡಿದಂ ಶ್ರೀರಾಮ ಚಂದ್ರಮನನು ॥ (9)

ಪೊಸಕುಶಾಸ್ತರಣದೊಳು ದಿವ್ಯವಸಾಲ್ಯಾಂಬರಗ ।
ಳೆಸಕದಿಂ ಚಾಮರವ ಬೀಸುತಿರ ಲೆಡದೊಳುಂ ।
ವಸುಧಾತನೂಜಾತೆ ಸೌಮಿತ್ರಿ ಮುಂಭಾಗದಲಿ ನಿಂದತಿ ಭಕ್ತಿಯಿಂ ॥
ರಸಕಲಿತ ವಾಣಿಯಿಂ ನುತಿಸುತಿರೆ ಶ್ರೀರಾಮ ।
ರಸೆಯ ನಾಯಕನಂತೆ ಗುರುವೇಳ್ವ ಮೌನದಿಂ ।
ದೆಸೆದಿಪ್ಪ ಪರಬೊಮ್ಮನಂ ಕಂಡು ಸುರಮೌನಿ ಸಂತೋಷಮಯನಾದನು ॥ (10)

ಕರದಿ ವೀಣೆಯ ಪಿಡಿದು ವರತಂತ್ರಿಗಳ ಮಿಡಿದು ।
ನರಲೋಕ ಮೋಹಿಪೊಲು ನವರಸಸುಗಾನದಿಂ ।
ಕರದಿಂದು ನಿಭಗಾತ್ರ ಮೌನಿಯ್ಯೆತರುತಿರಲ್ಕಂಡು ರಘುನಾಥ ಪ್ರಿಯದಿಂ ।
ಹರುಷದಿಂದೆದ್ದು ವಂದಿಸಿ ಪೂಜೆಗೈದು ಸಿರಿ ।
ಚರಣಂಗಳಂ ನುತಿಸಿ ಕರೆದೊಯ್ದು ಮಣಿಪೀಠ ।
ಶಿರದೊಳಗೆ ಕುಳ್ಳಿರಿಸುತುಪಚರಿಸಿ ಸಂತಸದೊಳಂತೆಂದ ಮೃದುವಚನದಿ ॥ (11)

ಸಂಸಾರವಿಷಯ ಚಿಂತಾಸಕ್ತಚೇತನಗ ।
ಹಿಂಸಾನುವರ್ತನದ ನಿರ್ಮಲದ ಹೃದಯುವರ ।
ಹಂಸವಾಹನ ಪುತ್ರ ಭವದೀಯಾದರ್ಶನಂ ದೊರಕುವುದು ದುರ್ಲಭವಲೇ ॥
ಪುಂಸರಿಗೆ ಪೂರ್ವಕೃತ ಪುಣ್ಯಪರಿಪಾಕದಿಂ ।
ಹಂಸಸಲ್ಲಾಪ ಸಂದರುಶ ನಾದಿಗಳೊಳ್ರಿ ।
ರಂಸೆ ಪುಟ್ಟುವುದಲ್ತೆ ಕೃತಕೃತ್ಯನಾದೆನಾಂ ಫಲಿಸಿತಿಷ್ಟಾರ್ಥಮಿಂದು ॥ (12)
ಎನುತ ರಘುವೀರನಂ ನಿಟ್ಟಿಸುತೆ ಮೋಹದಿಂ ।
ಮುನಿತಿಲಕನಿಂತೆಂದ ಭಕ್ತವತ್ಸಲದೇವ ।
ಚಿನುಮಯಾತ್ಮಕ ರಾಮ ನೀಂ ನುಡಿದೆ ಸಂಸಾರಿಯೆನ್ನುತದು ಸತ್ಯವಲ್ತೆ ॥
ಘನತರದ ಮೋಹನದ ವಿದ್ಯೆನಿಟ್ಟಿಪೆ ನಿನ್ನ ।
ಮನೆಯೊಳಗೆ ತೊತ್ತಿನಂತಿರೆ ಭವತ್ಸಂಗದಿಂ ।
ವನಜಾಸನ ಪ್ರಮುಖ ಪ್ರಜೆಗಳುಂ ಪುಟ್ಟುವರು ಮುಂತಾ ಮಹಾಮಾಯೆಯೊ ॥ (13)
ನಿನ್ನಧೀನದ ಮಾಯೆ ಮೂರುಗುಣಮಂ ಪೊದ್ದಿ ।
ನಿನ್ನಬಲದಿಂ ಬಿಳದು ಕೆಂಪುಕಪ್ಪಿನ ವರ್ಣ
ವನ್ನಾಂತ ಪ್ರಜೆಗಳಂ ಬೇಳ್ವರದರಿಂ ಮೂರುಲೋಕ ಯುಮ್ಮನ್ನಿಲಯುವು ॥
ನನ್ನಿಯುದರಿಂ ನೀಂ ಗೃಹಸ್ಥನೆಂಬುದು ದಿಟಂ ।
ಪನ್ನಗಾರಿಧ್ವಜ ರಘೂತ್ತಮನೆ ಲೋಕದೊ ।
ಳ್ಭಿನ್ನ ಮೇನಿಹುದು ಭವದೀಯ ಸನ್ನಿಹಿಮೆಯುಂ ತಿಳದನಿತುಸಿರ್ವ ಜೀಯ ॥(14)
ಹರಿನೀನೆ ಸಿರಿಸೀತೆ ಹರ ನೀನು ಗಿರಿಜಾತೆ ।
ಧರಣೀಸುತೆ ಬೊಮ್ಮನೀಂ ಸರಸತ್ತಿಯು ವೈದೇಹಿ ।
ಸುರಪನೀಂ ಪೌಲೋಮಿ ಜಗತೀತನೂಭವೆಯು ಮರುತ ಸಖನೀನು ಸ್ವಾಹೆ ।
ನಿರುತ ಜನಕಜೆ ಕಾಲರೂಪ ನೀಂ ಸಂಯಮಿಯು ।
ತಿರೆಯುಣಾಗಿ ನೈಋತ್ಯ ನೀಂ ಕಾಮಿನೀಸೀತೆ ।
ವರುಣನೀಂ ಭಾರ್ಗವಿಯು ಭೂಜಾತೆ ಮರುತನೀಂ ಸೀತೆಯೆ ಸದಾಗತಿಯುಲ್ಕೆ ॥ (15)
ಧನಪನೀಂ ಸರ್ವ ಸಂಪತ್ಪ್ರದಾಯಕಿ ಸೀತೆ ।
ಘನರುದ್ರ ನೀನೆ ರುದ್ರಾಣಿ ಜಾನಕಿ ದೇವ ।
ರಿನ ಪ್ರಭಾರೂಪಳುರ್ವೀಜಾತೆ ಶಶಿನೀನು ರೋಹಿಣಿಯು ಜಗತಿಯುಣಾಗಿ ॥
ಎನಿತುಂಟು ಸ್ತ್ರೀವಾಚಕಂ ಲೋಕಮೂರರೊಳ ।
ಗನಿತು ಸೀತಾಪರಂ ಪುರುಷವಾಚಕ ಮೆಲ್ಲಿ ।
ವನಜಾಕ್ಷ ನೀನಲ್ತೆ ನಿಮ್ಮುಭಯ ಮುಳದನ್ಯ ಮೊಂದುಂಟೆ ರಘುಕುಲೇಶ ।(16)
ಚಿತ್ತಿನಾಭಾಸಮವ್ಯಾಕೃತಂ ಮತ್ತವರ ।
ಬಿತ್ತಿನೊಳಗಾದುದು ಮಹಾತತ್ವಮದರಿಂದ ।
ಪ್ರತ್ಯೇಕ ತತ್ವಂಗಳುದ್ಭವಿಸಲವ ಭಾಸಮಾನ ದೇಹತ್ರಯಗಳು ॥
ಸತ್ತುಪುಟ್ಟುವ ಕೋಟಲೆಗಳಾಂತು ದೇಹಗಳ ।
ಪೊತ್ತದೊಳು ಜೀವನಜ್ಞಾನವಶನಾಗಿರ್ದ ।
ತತ್ತರದ ಜೀವತ್ರಯಾಖ್ಯದಿಂ ಮೂರವಸ್ಥಾ ಭೋಗಭೋಗ್ಯಮೆನಿಸಿ ॥ (17)

ತನುಕುಂಭವಹಮುಂಬು ಮಧ್ಯದೊಳು ಜೀವತಾಂ ।
ಮಿನುಗೆ ಸುಖದುಃಖಾದಿಗಳ ನಂಟೆ ತೊಳಲುತಿಹ ।
ನನವರತ ಪ್ರಕೃತಿ ಬಲದಿಂದವಷ್ಟತಿವೆರಸಿ ನಿಜಭಾವವನ್ನು ಮರೆದು ॥
ವನಜಾಕ್ಷ ನಿನ್ನಪದ ಭಕ್ತಜನ ಸಂಸರ್ಗ ।
ಜನಿಸೆ ಮಾಯಾರಜ್ಜುಬಂಧ ಸಡಿಲಿಸಲ್ಕೀಹ ।
ವನುನೀಗಿ ನಿತ್ಯಸುಖಿಯಪ್ಪನದರಿಂ ಭಕ್ತಿ ಮುಕ್ತಿಕಾರಣವು ಜೀಯ ॥ (18)

ಮೂರುತನುಗಳ ಮೂರವಸ್ಥೆಗಳ ಗುಣ ಮೂರ ।
ನಾರು ಭಾವವಿಕಾರಗಳ ನೊಂದದಿರುವ ನಭ ।
ವಾರು ನಿರ್ಮಲ ಜಗತ್ಸ್ರಷ್ಟ್ರಿ ಯಾಪೋಜ್ಯೋತಿರೂಪನೀನಲ್ತೆಜೀಯ ॥
ಚಾರುತರ ಪದ ಪದ್ಮವಂ ನೆನೆವರಂಘ್ರಿಗಳ ।
ಸಾರಿದರಿಗುಂಟೆ ಮಾಯಾವೇಷ ಸಂಪರ್ಕ ।
ಮೂರುಲೋಕದೊಳು ಜಗದೀಶ ಕೃಪೆಯಿಂದೆನ್ನ ಸಲಹು ನಿರ್ವಾಣಯನೆನಿಸಿ ॥ (19)

ಲೋಕಗಳ ನಿರ್ಮಿಸುವ ಬೊಮ್ಮ ನಿನ್ನಯ ತನಯ ।
ನಾಕಮಲಸಂಭವನು ಮತ್ತಾತ ಮೊಮ್ಮನಾಂ ।
ವೈಕುಂಠ ನಿನ್ನಪದವಡಿ ಗೆರಗುತಲಾನು ಕಿಂಕರನೆನಿಪೆನು ॥
ಶ್ರೀಕರ ಕಟಾಕ್ಷದಿಂದೀಕ್ಷಿಸೆನ್ನನು ಮಾಯೆ ।
ಸೋಕದಂದದಿ ಸಲಹು ನಿನ್ನವನೆನುತ್ತಲೆ ಕೃ ।
ಪಾಕರನೆ ರಘುಕುಲೋತ್ತಂಸ ಬಿನ್ನಪ ವೊಂದು ಪ್ರಕೃತಾನುಸಾರ ಮಿಹುದು॥(20)

ಪಾಲಿಸು ಮಹೇಂದ್ರ ದಶರಥನೀ ಸುರಾಷ್ಟ್ರವಂ ।
ಪಾಲಿಸು ಪ್ರೌಢಧಿಕಾರವಂ ನಿಮಗೆ ಒಪ್ಪಿಸುವ ।
ನೀಲೋಕದೊಳಗೆಂಬ ವಾರ್ತೆ ಮುಂಬರಿದೈವಲುಂ ಸಗ್ಗಲೋಕದೆಡೆಗೆ ॥
ಮೇಲೆನಿಪ ಭಯದಿಂದಲಮರೇಶನೈತಂದು ।
ಮೂಲೋಕ ಬೊಪ್ಪನಿಂಗರುಪಲಭಯವೆನಿತ್ತು ।
ಮೇಲೆನಿಸಿ ಚರಣಯುಗದೆಡೆಗೆನ್ನ ಕಳಪಿದಂ ಮನದಿಷ್ಟವಂ ಪೇಳ್ವೊಡೆ ॥ (21)

ವಸುಮತೀ ಭಾರವನ್ನಿಳುಹಿ ಗೋದಿವಿಜಸುರ ।
ರಸುಗಳಂ ರಕ್ಷಿಸುವೆನೆಂದು ಭೂತಳಕೈದಿ ।
ವಸುಧಾಧಿ ಪತ್ಯಮಂ ಸ್ವೀಕರಿಸೆ ಮುಂದಪ್ಪ ಕಜ್ಜಕೇಂಗತಿ ಯೆಂಬುದ ॥
ಬೆಸನನೀಂ ಬೇಡಿಬಹುದೆಂದು ಕಳುಪಿದೊಡಾನು ।
ಜಸಜಾಕ್ಷನಿನ್ನ ಪದದೆಡೆಗೆ ಬಂದೆನು ದೇವ ।
ರೆಸಗುವೆನು ಕಾರ್ಯಗಳನಾಜ್ಞಾಪಿಸಿ ದೊಡ್ಡೈದಿ ಬಿನ್ನವಿಪೆ ಕಮಲಭವಗೆ ॥(22)

ಎಂದಿಗುಂ ಪುಸಿಯು ಪೊದ್ದದ ಸತ್ಯಕರವಾಣಿ ।
ಎಂದರಿವೆನಯ್ಯನಾದರು ಸುರಾಧಿಪನೆ ತಾ ।
ವೃಂದಬಂದರಿಪಿದುದ ಭವದೀಯ ಚರಣಕಂ ಬಿನ್ನಪಂ ಗೈದುಮುಗುಳ್ ॥
ಸಂದೇಹವಿನಿತಿಲ್ಲವಭಯವೆಂದೆನಿಸಿರ್ಪ ।
ರೆಂದರಿತು ಕಳಪಿದನಿತಂ ಪೇಳ್ದದೇವರಿಗೆ ।
ಮುಂದಪ್ಪ ಕಾರ್ಯವಂ ದೇವರೇ ಬಲ್ಲರೆನೆ ನಸುನಗುತ ಹರಿ ನುಡಿದನು ॥ (23)

ಪಿಂತೆ ಪೋದುದು ಪ್ರಕೃತ ಮಲ್ಲಪ್ಪ ಕಜ್ಜಮಂ ।
ಮುಂತೆಸಗುವನಿತನುಂ ನಾಂ ಬಲ್ಲೆ ಬೆರತೊಂದ ।
ಚಿಂತೆ ಸಲದೇಕೆ ದಶಕಂಧರನ ವಂಶಮಂ ತರಿದಿಡುವೆ ನೀ ಕ್ಷಣದೊಳು ॥
ಸಂತರಗ್ರೇಸರಂ ವಿಧಿಯಿತ್ತಶುಭವಾಣಿ ।
ಗಂತರವೆ ಬರ್ಪುದದರಿಂ ಕಾಲಮಿರಬ್ಬ ।
ಸಂತೆಯಂ ನೀಗಿ ಮತ್ತಿರುವೆನಿದು ಪುಸಿಯಲ್ಲ ದೇವಮುನಿಧೌರೇಯನೆ ॥ (24)

ಪೊಡವಿಯತಿಶಯದಾಸೆಯೆನಗೇನು ಬೆಳಗಿದೊಡೆ ।
ನಡೆವೆ ಸತಿ ಸೌಮಿತ್ರಿ ಸಹ ದಂಡಕಾವನಕೆ ।
ಒಡೆಯನಾಜ್ಞೆಯಧಂಗಿಸಿ ಪದಿನಾಲ್ಕು ವರುಷಮಂ ವನವಾಸದಲ್ಲಿ ಬಳಿಕ ॥
ಸಡಗರದೊಳಿರ್ದು ಸೀತಾಮಿಷದಿ ದಶಶಿರನ ।
ಕೆಡಹಿ ಋಷಿಸಂತತಿಗೆ ಸಂತಸವನಿತ್ತು ಮ ।
ತ್ತೊಡನಯೋಧ್ಯಾಪುರಕೆ ಬರ್ಪೆನಿದು ಮನ್ಮನೋರಥ ಕೇಳು ಬಿಡಿಯಣುಗನೆ ॥ (25)

ಲೋಕಾನುಸಾರ ಮಾಗೆಲ್ಲರಾದಂದದಲಿ ।
ಬೇಕಾದ ಮನುಜನಂದದಿ ನಟಿಸಿ ಮತ್ತಮಂ ।
ಗಾಕಾಮ್ಯ ಸಲುವಂತೆ ಸರ್ವಜನ ಸಮ್ಮತದೊಳೈದಿ ವಿಪಿನಾಂತರದೊಳು ॥
ಜೋಕೆಯಿಂದಾನು ಋಷಿಗಣದೊಡನೆ ಸಂಚರಿಸು ।
ತೇಕಾಂತ ಭಕ್ತರಂ ಪೊರೆದು ದುಷ್ಟರ ನರಿದು ।
ಶೋಕಾಹಿತನ ಕಾಂಕ್ಷೆಯಂ ಸಲಿಪೆನಿದು ಸತ್ಯವೆಂದು ರಘುನಾಥ ನುಡಿಯೆ ॥ (26)

ಕೇಳ ಸಂತೋಷಮಯನಾಗಿ ರಾಮನ ಚರಣ ।
ನಾಳೀಕಕಭಿನಮಿಸಿ ನುತಿಸಿ ಬೀಳ್ಕೊಂಡು ಪ್ರಮು ।
ದಾಳೀರವಾನುಗತತಂತ್ರೀಕಲಸ್ವನದ ವಲ್ಲಕಿಯ ಬಾಜಿಸುತಲಿ ॥
ಆಳದೊಡೆಯನ ಪೊರೆಗೆ ಪೇಳ್ ಜಗದೀಶನುಂ ।
ವೇಳದನಿತಂ ತಿಳುಪಿ ಕಮಲಭವನಾಜ್ಞೆಯಂ ।
ತಾಳ ಸುರಪತಿ ಯೆಡೆಗೆ ಗಮಿಸೀ ಸುವೃತ್ತಮಂ ಚಿತ್ರರದಿನುಡಿದನೊಲಿದು ॥ (27)

ತದನಂತರದಿ ದೇವಋಷಿಗಣಂ ನೆರೆದುಬಹು ।
ವಿಧದಿ ಮಂತ್ರಾಲೋಚನೆಯನೆಸಗಿ ಸರಸತಿಯ ।
ಸದನಕೈತಂದು ವಂದನೆಗೈದು ನುತಿಯಿಂದ ಸಂಪ್ರಾರ್ಥನಂ ಗೈದರು ॥
ಸದಯೆ ಪ್ರಜ್ಞಾನಿಲಯೆ ವಾಗ್ದೇವಿ ಸಮ್ರಾಶ್ವ ।
ನುದಯ ಮಾದಡೆ ರಾಮಗಭಿಷೇಕಮಪ್ಪುದಿ ।
ನ್ನಿದಕಂತರಾಯಮನ್ನೆಸಗಿ ಕೃಪೆಯಿಂದೆಮ್ಮಕಾಯಬೇಕಧಿದೇವಿಯೆ ॥ (28)

ಮಂದರೆಯ ವದನದೊಳ್ ನೆಲೆಗೈದು ವಕ್ರತರ ।
ಬಂಧುರದ ನುಡಿಗಳಿಂದಶ್ವಪತಿಯಾತ್ಮಜೆಗೆ ।
ದಂಧತೆಯ ಬೋಧಿಸಿ ವಿಕಾರಮಂ ಪುಟ್ಟಿಸುತಲವಳಿಂದ ದಶರಥಂಗೆ ॥
ಸಂಧಿಸುವೊಲಪ್ರಬುದ್ಧತೆ ಪೂರ್ವವರ ಮತ್ತು ।
ಬಂಧಂಗಳಂ ಒಲಿದು ಸವಿನುಡಿಯ ಮೋಹಕರಾ ।
ಮಾಂಧತೆಯ ಕವಿಸಿ ರಾಮಾಭಿಷೇಕೋದ್ವಿಘ್ನಗೈದೆಮ್ಮಪಾಲಿಸುವುದು ॥ (29)

ಬಿಡುಗಣ್ಣರೊಡೆಯ ಮುಂತಾದ ಸುರರೀಪರಿಯು ।
ಪೊಡವಟ್ಟು ಬಿನ್ನವಿಸೆ ವಾಣಿಯೊಪ್ಪಂಬಡೆದು ।
ಕಡುಮಮತೆಯಿಂದ ಪತಿಯಾಜ್ಞೆಯಂ ಕೈಕೊಂಡು ನಡೆದಯೋಧ್ಯಾನಗರಿಗೆ ॥
ಮಡದಿಮಣಿ ಮಂದರೆಯ ನಾಭಿಹೃದಯಂ ಕಲೆವ ।
ನುಡಿವ ಜಿಹ್ವಾಸ್ಥಾನದೊಳು ನಾಲ್ಕುಪಾದವಂ ।
ಮಡಗಿ ವ್ಯಾಪಿಸೆ ಪೂರ್ವಮತಿಯಡಗಿ ದುರ್ಬೋಧಮಂಕುರಿಸಿತಾಕ್ಷಣದೊಳು ॥ [(30)

ಇದು ದೇವಕೃತಿ ಯಂತರಂಗ ಮತ್ತೀ ನಗರ ।
ದಧಿನಾಥನಿತ್ತಲಿಂಗೈದ ನೆಂಬುದವೇಳ್ವಿ ।
ಸುದತಿಯರ ಪಾಣಿಕವೆ ಮನದನ್ನೆ ಪ್ರೀತಿಯಿಂ ಆಲಿಪ್ಪುದು ಮುಂಗತೆಯನು ॥
ಸದಯ ಮೈತ್ರಾವರುಣಿ ರಾಮನರಮನೆಯಿಂದ ।
ಮುದವೆತ್ತು ನಡೆತಂದು ದಶರಥಮಹೀಪಾಲ ।
ಸದನ ಮನೆನ್ನೊಳಹೊಕ್ಕು ನೃಪತಿಲಕನಂ ಕಂಡು ಬಂದ ವೃತ್ತಾಂತ ಮೊರೆಯ ॥ (31)

ಹರುಷರಸಮಂಕುರಿಸಿ ಪಂಕ್ತಿರಥ ಮಂತ್ರಿಗಳ ।
ಕರೆಸಿ ನೇಮಿಸಿದ ನಾಳೆಸಗುವ ಮಹೋತ್ಸವಕೆ ।
ಗುರು ನಿರೂಪಿಸಿದ ಮಾಳ್ಕೆಯೊಳಖಿಳವಸ್ತುಗಳ ಕಂತುರಗಧೇನುಗಳನು
ತರಿಸಿ ಯೋಲಗಶಾಲೆಯನ್ನು ಸಿಂಗರಗೈಸಿ ।
ನರಪತಿಗಳಖಿದಿಗ್ದೇಶದಿಂಬಂದ ಭೂ ।
ಸುರನೆರವಿನೆರೆವಂತೆಡಂಗುರವಪೊಯ್ಸಿತಾನಯೋಧ್ಯಾನಗರಿಯನುವೀಥಿಗಳಲಿ॥

ಗುರುವಿನಪ್ಪಣೆವಿಡಿದು ಪಂಕ್ತಿರಥಶುದ್ಧಾಂತ । (32)
ಕರುಹಲಿತ್ತಲು ರಾಮನಾ ಮೌನಿವೇಳ್ದಂತೆ ।
ಪರಿಮಳಾಂಬುವಿನಿಂದ ಮಜ್ಜನಂ ಗೈದು ಶುಭ್ರ ವಸ್ತ್ರಂಗಳನ್ನುಧರಿಸಿ ॥
ಸುರುಚಿರದ ಭೂಷಣಾಲಂಕಾರ ಯುತನೆನಿಸಿ ।
ಧರಣಿಸುತೆ ಸಹಿತ ದರ್ಭಾಸ್ತರಣದೊಳ್ಕುಳಿತು ।
ಸಿರಿಯರಸನಂಘ್ರಿಯಂ ಧ್ಯಾನಿಸಿದ ಮಾನಸದಿ ವೀರಾಸನವನು ಒಲಿದು ॥ (33)

ಸತಿಸಹಿತಲಗ್ನಿ ಹೋತ್ರವ ಪೂಜೆಗೈವುತ್ತೆ ।
ಕತಿಪಯ ಸುಮಂತ್ರತಂತ್ರಗಳಿಂದಲಿಹವಿ
ಸ್ಸತಿಶಯದೊಳಗ್ನಿ ಪುರುಷನಿಗಿತ್ತು ಮಿಕ್ಕುದಂ ಮನದನ್ನೆಸಹಭುಂಜಿಸಿ ॥
ಪ್ರತಿಪದದಿ ನಾರಾಯಣಾಂಘ್ರಿ ಪಂಕಜಗಳನು ।
ನುತಿಸುತ್ತಲಿ ತನ್ಮೂರ್ತಿಯಂ ಮನದ ಕೊನೆಯೊಳಗೆ ।
ಜತನಗೈದು ದಿಟ್ಟಿಸುತ ಚಾಂಚಲ್ಯವನ್ನುಳಿದು ಭಕ್ತಿಯಿಂದೆಸೆದಿರ್ದನು ॥ (34)

ವಿಧಿಯೊರೆದನೇಮದಿಂ ಪ್ರಥಮಯಾಮವನುಳಿದು ।
ಮುದದಿಂದ ಲೆಚ್ಚತ್ತು ಮನೆಯಸಿಂಗರ ಗೈಸ ।
ಲೊದಗಿನಿಂ ಮೇಲ್ಕಟ್ಟು ನಂಬರಗಳಂತರಿಸಿ ನಾನಾವಿಚಿತ್ರತರದಿ ।
ಸದನವನಲಂಕಾರ ಗೈಸಿದಂ ಮೂಡಲಿನ ।
ನುದಯಿಸುವ ಸಮಯದೊಳ್ವಂದಿ ಮಾಗಧಘೋಷ ।
ದದುಭುತಂ ಕೇಳ್ದು ಪೂರ್ವಾಂಗಕೇ ಸತ್ಕ್ರಿಯಾ ರಚಿಸಿದ ಯಥಾವಿಧಿಯೊಳಂ ॥ (35)

ಉದಯಮುಖದೊಳು ವಾಯುಸಖನ ತೋಷಣಗೈದು ।
ಮುದದಿಂದ ಭೂಸುರರ ಸಂತತಿಯನುಂ ಬರಿಸಿ ।
ಪದುಳದಿಂ ಪುಣ್ಯಾಹ ಗೈಸಿದ ದ್ವಿಜೋತ್ತಮರ ದೆಸೆಯಿಂದಲತಿ ವಿಭವದಿ ।
ಸದನದೊಳು ಸ್ವಸ್ತಿ ಪುಣ್ಯಾಹ ಮಂತ್ರ ಸುಘೋಷ ।
ಮೊದವಿದುದು ದಿಕ್ತಟವ ಸರ್ವಜನರೀ ಶುಭದ ।
ವಿಧಿಯನುಂ ಕೇಳ ಹರುಷಿತರಾದರಡಿಗಡಿಗೆ ಮನದಿಷ್ಟ ಮಾದುದೆನುತ ॥ (36)

ಬಲಿದುದಲ್ಲಲ್ಲಿ ಶುಭವಾರ್ತೆಯಾ ನಗರದೊ ।
ಳ್ಕಲಿತ ಮಾದುದು ಸಕಲಜನ ಹರುಷರಸದಿಂದ ।
ಪಲವುವಿಧಮಾಗಿ ತಮ್ಮೊಳಾತಾವೆ ಶ್ರೀರಾಮನತಿಶಯದ ಗುಣಗಣಗಳ ।
ನಲಿವುತಲಿ ನಿಜಗೃಹಗಳಾದ್ವಾರದೇಶಗಳ ।
ಲಲಿತ ಸಾರಣೆ ರಂಗವಲ್ಲಿಗಳಸಿಂಗರಿಸಿ ।
ಪಲ ವಗೆಯ ಭೂಷಣಾಂಬರಗಳನ್ನಳವಡಿಸಿ ಭಾಸಿಸಿವರಚ್ಚರಿಯೆನೆ ॥ (37)

ಹಿಂದಣ ಮಹಾರಾಯರಾಯರುಗಳೀಜಗ ।
ದ್ವಂದಿತಾನತ ರಕ್ಷದಶರಥಗೆ ಪಾಸಟಿಯು ।
ಬಂದಪರೆ ಪರಿಕಿಸಲ್ ಬಹುಕಾಲ ಪೊಡವಿಯಂ ಪಾಲನಂ ಗೈದು ಕಡೆಗೆ ।
ಸಂಧಿಸಲು ವಾರ್ಧಕ್ಯ ನಿಜಕಾಯ ಕದರಿಂದೆ ।
ಸಿಂಧು ಮಂದರಸದೃಶ ರಾಘವಂಗಭಿಷೇಕ ।
ಮಿಂದೆಸಗಿ ಮೆರೆವ ಗಡ ಕೃತಕೃತ್ಯ ನೃಪನೆಂದು ಪೌರಜನ ಹರ್ಷಿಸಿದುದು ॥ (38)

ಕುರುಜುಮೇಲ್ಗಟ್ಟುಗಳ ಪೊಂದಳಿಗೆ ದೋರಣಾ ।
ಸ್ಫುರಣೆಗಳವಲ್ಲಲ್ಲಿ ಬೆಳಗಿದುವು ಪ್ರಜ್ವಲಿಸಿ ।
ಥರಥರದೊಳೆತ್ತಿದರು ಸಿಂಧುಗೊಂದಣಗಳಂ ಶಶಿಸೂರ್ಯವೀಥಿಗಳೊಳು ॥
ಪರಿಮಳದ ಸಾಂಬ್ರಾಣಿ ಧೂಪಸಂಕಲಿತದಿಂ
ಪರಿಶೋಭಿಸುತ್ತಿರ್ದುದೇ ನೆಂಬೆ ತನ್ನಗರ ।
ಹರಿಯ ವೈಕುಂಠದೊಲು ದೇದೀಪ್ಯಮಾಗೆಸೆದುದೆಂತದಂ ಬಣ್ಣಿಸುವೆನು ॥ (39)

ಕರಿತುರಗ ಸಂದೋಹ ಸ್ಯಂದನಗಳಂದಣಂ ।
ಪರಿಪರಿಯ ನವರತ್ನದಿಂದಲಂಕೃತಗೊಳಿಸಿ ।
ಮಿರು ಮಿರುಗುತಾವಾವ ಕೇರಿ ಕೇರಿಗಳೊಳ್ಗಂ ನೆರೆದು ಪರಿವಾರಸಹಿತ ॥
ಧೊರೆದೊರೆಗಳಕ್ಕಲದಿ ಸಂರಂಭದಿಂದೊಪ್ಪು ।
ತರಮನೆಯ ಮುಂಗಡೆಯ ಕವಿಗಮಕಿ ವಾಗ್ಮಿಗಳ್ ।
ಮರಿದುಂಬಿಗುರುಳಾಂತ ವಾರಾಂಗನಾನಿವಹ ಪಂಡಿತರ್ಕವಿದಿರ್ದರು ॥ (40)

ಪರಿದುಮತ್ಸವ ವಾರ್ತೆನಾನಾ ದಿಗಂತದೊಳ್ ।
ಪರಿಪರಿಯ ನೃಪಮೌನಿ ವರ್ಗಮಂ ಕರೆವಂತೆ ।
ಹರುಷರಸ ಮುಣ್ಮಂತೆ ಸಕಲದೇಶಾಧಿ ಪಭೂಸುರರ್ಬೇಗಬಂದು ।
ನೆರೆದುದಾನಗರದೊಳ್ನಿಖಿಲ ವೃಂದಾರಕರ ।
ನೆರವಿ ಸುರಪನಸಿರಿಯ ನಿಟ್ಟಿಸುವರ್ತೈತಂದ ।

ಕೆಲರು ದಶರಥ ಮಹೀಪಾಲನಂ ಸ್ತುತಿಸುತಿರೆ ।
ಕೆಲರು ರಘುವರ ಗುಣೋದಯಗಳಂ ಪಾಡುತಿರೆ ।
ಕೆಲರು ಮತ್ತಾನಂದ ನೀರಧಿಯೊಳಾಳುತಲಿ ಜಗದಘಂ ಪೋದುದೆನುತ ।
ಪಲಬಗೆಯೊಳಾ ಬಾಲವೃದ್ಧರುಗಳೆಲ್ಲರುಂ ।
ಫಲಿಸಿತೆಮ್ಮಭಿಮತವೆನುತ್ತ ಶ್ರೀರಾಮಪುರ ।
ನಿಲಯನಭಿವೃದ್ಧಿಯಂ ಹಾರೈಸುತೊಪ್ಪಿರ್ದರೇನೆಂಬೆನತಿಶಯವನು ॥ (42)

(ಸಂಧಿ 3, ಪದಗಳು 122.)

## ನಾಲ್ಕನೆಯ ಸಂಧಿ.

ಸೂಚ॥ ಬೋಧಿಸಿದಳ್ ಮಿತ ಕುಟಿಲೋಪಾಯ ತಂತ್ರಗಳ ॥
ಸಾಧನಗಳೆನಿಪ ನುಡಿಗಳ ಲಕ್ಷ್ಮಪತಿಸುತೆಗೆ ।
ಸಾವರದಿ ಮಂಥರೆಯು ರಾಮಾಭಿಷೇಕಕಂ ಪ್ರತ್ಯೂಹರೂಪಳಾಗಿ ॥

ಇಸ್ಟೊರೆವೆಲಾಲಿಸು ಭವಾನಿ ಮೂಲೋಕಜನ ।
ಸನ್ನುತ ಶ್ರೀಭರಿತವಾದಯೋಧ್ಯಾನಗರ ।
ವನ್ನು ಪೊಕ್ಕದು ನಗರ್ತ್ರಯದ ಜನರೆಲ್ಲರುಂ ರಾಮನಭ್ಯುದಯವನ್ನು ॥
ಚೆನ್ನಾಗಿ ನಿಟ್ಟಿಸಿ ಕೃತಾರ್ಥರಹೆ ವೆನ್ನುತಂ ।
ಮನ್ನಿಯರ್ವೊಡಲಾದ ಮುನಿ ಸಮುದಯಂ ಪ್ರೇಮ ।
ದುನ್ನತದಿ ನಿಜಪುತ್ರದಾರಾ ಸಮೇತ ಮಾಗೇನೆಂಬೆ ನಚ್ಚರಿಯನು ॥ (1)

ಶರನಿಧಿಯು ಪಾರ್ವದೊಳ್ ಪ್ರೇರ್ಗರೆದು ಪೆರ್ಚುವೊಲು ।
ನೆರೆದ ಜನ ಸಂದೋಹದಲಿ ತೂರ್ಯ ನಿರ್ಘೋಷ ।
ಕರಿತುರಗರಥನಿಚಯ ಬೃಂಹಿತಂ ಹೇಷಿತಂ ಚೀತ್ಕೃತಿಯುಧ್ವನಿಯೊಸಗಲು ॥
ನರದೇವನರಮನೆಯ ಗೋಪುರವ ನಡರಿದಳ್ ।
ತ್ವರಿತದಿಂ ಮಂಥರೆಯು ನಿಟ್ಟಿಪೇರ್ವೆಯಾಪುರದ ।
ಸಿರಿಯನಿಟ್ಟಿಸಿ ಕುತೂಹಳ ಚಿತ್ತಳಾಗುತ್ತೆ ಬೆರಗಾದಳಾಕ್ಷಣದೊಳು ॥ (2)

ಪನ್ನೀರ ತಳಿದು ಕಸ್ತೂರಿಸಿರ್ದ ರಾಜಪಥ ।
ವುನ್ನತ ಧ್ವಜತೋರಣಾಲಂಕೃತ ಗೃಹಗ ।
ಳನ್ನು ಮಾಲಿಕೆಲಾಜ ಮೋದಕಾ ಹಸ್ತದಿಂದೈತಪ್ಪ ವಿಪ್ರಕುಲವಮಂ ॥
ಚೆನ್ನಾಗಿ ದೇವಗೃಹನಾದಿತ್ಯನಾಮವುಂ ।
ಸನ್ನುತಿಪ ಬ್ರಹ್ಮಘೋಷಾನು ಹರ್ಷಂಗಳಂ
ಮಿನ್ನಾದ ರಥಗಜಾಶ್ವಗಳ ನೀಕ್ಷಿಸುತಾಗ ಬೆರಗಾದಳಾಮಂಥರೆ ॥ (3)

ನಗರದಲಿ ಶೃಂಗಾರ ದತಿಶಯವನೀಕ್ಷಿಸುತ ।
ನಗುತಲೊತ್ತಿನೊಳು ನಿಂದಿರ್ದ ಧಾತ್ರಿಯನೋಡಿ ।
ಮಿಗೆಹರ್ಷವಾಂತವಳತೆರನಂತೆ ಬೆಸಗೊಂಡಳೀ ವಿಭವ ಮಾರೊಳೆಲ್ಲ ॥
ನೆಗಳಹುದದೇನು ಪ್ರಕಟಭೇದನೆ ದೊಳಾವಾವ ।
ಬಗೆಬಗೆಯ ಜನರೆಲ್ಲ ಮೋದಗೊಳುತಿಹರಲ್ತೆ ।
ಜಗದೀಶನರ್ಧಾಂಗಿ ಕೌಸಲ್ಯೆ ಕಾಂಚನವ ನಿತ್ತಪಳೆ ವಿಪ್ರಕುಲಕೆ ॥ (4)

ಜನನಾಥ ಸವನಾಂಗ ಭೂರಿದಕ್ಷಿಣೆಗಳಂ ।
ಜನರಿಗೀವನೊ ಮೇಣ್ ದೇವತಾರಾಧನೆಯ ।
ವಿನಯದಿಂ ರಚಿಸುವನೊ ಪೇಳದೇಂ ದಿಗ್ದೇಶ ವೆಲ್ಲ ನೆಗೆದಿಹ ಪರಿಯನು ॥
ಎನೆಧಾತ್ರಿನಸುನಗುತ ಪುಷ್ಯಯೋಗದಿ ರಾಮ ।
ಗನುನಯದಿ ಪಂಕ್ತಿರಥ ಯೌವರಾಜ್ಯಾಧಿಪತಿ ।
ಯೆನಿಸುವತಿಶಯಮಿದಂ ನಿಟ್ಟಿಪಭಿಲಾಷೆಯಿಂ ಬಂದಿರ್ಪ್ಪ ದಖಿಲಜನವು ॥ (5)

ಕೇಳದಾಕ್ಷಣ ಶುಭೋದಯ ವಾರ್ತೆಯಂಕುಬ್ಜೆ ।
ತಾಳಚಿಂತೆಯನು ಹರ್ಮ್ಯಕೃಸಿ ಕೈಲಾಸನಿಭ ।
ದೇಳಗೆಯ ಪ್ರಾಸಾದದಿಂದಿಳದು ಕೋಪದಿಂದೈತಂದು ಮ್ಲಾನಳಾಗಿ ॥
ಆಳದೊಡತಿಯ ಪೊರೆಗೆಸಾರಿ ಕಡುದುಃಖದಿಂ ।
ಪೇಳಲಮ್ಮದೆ ಸಿಮಿಷನಿಂದಿರ್ದು ಗದ್ಗದಿಸು ।
ತೂಳಗವ ಬಿನ್ನೈಸಲನುಗೈದಳನ್ನೆಗಂ ಪಾಪದರ್ಶಿನಿ ಮಂಥರೆ ॥ (6)

ಸಕಲಸಾಮ್ರಾಜ್ಯಸುಖ ದನುಭವಿಯ ತೆರನಂತೆ ।
ನಿಕಟದೊಳ್ಬಂದ ಭೀತಿಯನು ಕಾಣದೆ ಬರಿದೆ ।
ಯಾಕಟ ಕೆಡೆದಿಹೆ ಮೂಢೆ ಬೇಗ ಎಚ್ಚರು ಮಹಾದುಃಖಸಾಗರದಿ ಮುಳುಗಿ ॥
ಯುಕುತಿಯನ್ನರಿಯೆ ಸಿರಿಯೊಳಗಿಪೆನೆನ್ನುತಿಹೆ ।
ಪ್ರಕಟಗ್ರೀಷ್ಮದೊಳಂ ಪ್ರವಾಹತತಿ ಬರುವಂತೆ ॥
ರಕುತಿಯುಳದುದು ನಿನ್ನಸಂಪದಮೆನಲ್ಕುಬ್ಜೆಯತಿಹರುಷ ತರದನುಡಿಯ ॥ (7)

ಲಾಲಿಸುತಲಶ್ವಪತಿಯಣುಗಿ ಮಂದರೆಯನ್ನು ।
ಲೀಲೆಯಿಂ ನಿಟ್ಟಿಸುತ ಬೆಸಗೊಂಡಳಂದಿದೇ ।
ನಾಲಸ್ಯಬಂದಡಸಿತತ್ರಿದುಃಖವಾಂತಿರುವರ್ಪೈಸೆ ಮುಖಮಲಿನತರದಿ ॥
ಲೋಲಲೋಚನೆ ನಗರದೊಳು ಕ್ಷೇಮವಾರ್ತೆಯನು ।
ಪಾಲಿಸುವ ನಾಥ ಸತ್ಕುಶಲದಿಂದಿಹ ಜಗ ।
ಜ್ವಾಲ ಸಂತೋಷಕರವಾಗಿರ ಲ್ನಿನಗಿದೇಂ ತನುತಾಪಮುಸಿರೆನಲ್ಕೆ ॥ (8)

ಕ್ರೋಧಶಿಖಿ ಪೆರ್ಚುತಾ ಕುಬ್ಜೆ ಕ್ರೂರಾಕ್ಷರದಿ ।
ಬಾಧಿಸುವ್ರೊಲೊಡತಿಗತಿ ಪ್ರೀತಿ ಸಂಪನ್ನೆ ದು ।
ಬೋರ್ಧನೆಯ ಪೇಳಲುಜ್ಜುಗಿಸಿ ಮಾರುತ್ತರವನಿತ್ತಳತಿ ಖಾತಿಯಿಂದೆ ॥
ಭೂಧವಂ ಕೌಸಲ್ಯೆಯಾತ್ಮಜಗೆ ಯುವರಾಜ್ಯ ।
ದಾಧಿಪತ್ಯವನೀವನೆಂಬ ದುರ್ವಾರ್ತೆ ಸಂ ।
ಬಾಧೆಗೊಳಸಲ್ಕನುವ ನಿನ್ನ ಹಿತಕೋಸುಗಂ ಪೇಳ್ವರೈತಂದೆ ತಾಯೆ ॥ (9)

ಹಿತವ ನುಡಿವಂ ಸತತಮೃದುಮಧುರಭಾಷೆಯಿಂ ।
ದತಿಶಯವ ಬೆರ್ಚಿಸುತ ಮರುಳ್ಗೊಳಿಸಿ ನಿಪ್ಕವಂ ।
ಕ್ಷಿತಿಯರಸ ನಿಜಮನೋರಥ ವ ಕೋರದೆ ತೋರಮೆನುತ ಪೊಗಳುತೆ ಮೆಚ್ಚಿಸಿ ॥
ಸುತನ ಬಂಧುಗಳೆಡೆಗೆ ಕಳಪಿ ನಿಷ್ಕಂಟಕದ ।
ಯಾತ್ರನದಿಂ ಕೌಸಲ್ಯೆಯಣಾತ್ಮಜಗೆ ನಗರಪತಿ ।
ಯುತನೆನಿಪ ವಂಚನಾಕ್ರಮವ ನೀಂ ತಿಳಿಯದಿಹೆ ಮೂಢೆ ಮರುಳೆನಿಸುತವಗೆ ॥
ಕಲುಷಹೃದಯಂರಾಯ ಕಪಟಗಳ ತವರ್ಮನೆಯು । [(10)
ನೆಲೆಯು ಭೇದೋಪಾಯಗಳಗೆ ಮಾಯಾನಿಲಯು ।
ಗೆಲಲರಿದು ವಂಚಿಪ್ಪವನರಿವೊಡಸದಳ ನಾಥನುಡಿದುದಂ ಸತ್ಯಮೆನುತ ॥
ಒಲಿದು ಪೇಳ್ದಂತೆ ದಾಸಿಯು ರೂಪಿಸಂತಿರ್ಪೆ ।
ಯೆಲೆ ಮರುಳೆ ನೀಂ ಮಹಾರಾಜನಂದನೆ ರಾಜ್ಯ ।
ದೊಲುಮೆಗಧಿಕಾರಿ ನಿನ್ನಳಿದನ್ಯವಶಮಪ್ಪುದೀ ಮಹಾನಗರಸಿರಿಯು ॥ (11)
ಅರಸುತನ ರಾಮಂಗೆ ದೊರಕೊಳಲ್ ಕೌಸಲ್ಯೆ ।
ಗುರುತರದ ಸಂಪದಂ ಸಕಲಸಿರಿಸೇರುವುದು ।
ತರಳ ಭರತಗೆ ನಿನಗೆ ಪರಿಹರಿಸಲಸದಳದ ನಾಶಕರ ಬೀಜಮಹುದು ॥
ಅರಿತರಿಯದಾದೆ ನಿನ್ನಯ ಕಷ್ಟಮಿಂದೆನಗೆ ।
ಬರುವುದಭಿ ವೃದ್ಧಿಯಾದೊಡೆ ಸುಖಂ ದೊರೆಕೊಳ್ಳಗು ।
ನಿರುತಮಿದು ಸತ್ಯಮೆನರಿಂದಾನು ತಿಳುಪುವೊಡೆ ಬಂದೆನೀ ಪರಿ ತವಕದಿ ॥ (12)
ಮತಿಯೊಳಾಳೋಚಿಸುತ ದೂರದೃಷ್ಟಿಯೊಳರಿತು ।
ಸುತನ ನಿನ್ನಂ ತನ್ನ ದೇಹಂಗಳಂ ಸಲಹು ।
ವತಿಶಯದ ಕಜ್ಜಮ ನ್ನೆಸಗು ಮಗುಳೀನುಡಿಯು ಸಫಲಮೆಂದೆನಿಸದಿರಲು ॥
ಕ್ಷಿತಿಪರಾಮಗೆ ಪಟ್ಟಮಂ ರಚಿಸೆ ನಿನಗಿನ್ನು ।
ಜತನಮಾಗದು ಸಿರಿಯು ದಿನದಿನಕೆ ತಗ್ಗಿಬರೆ ।
ಯಾತ್ರನದಿಂ ಸಾಧ್ಯಮಾಗದು ಭೋಗ ತಿಳಿದುನೀ ಯೋಚಿಪ್ಪುದುಪಾಯಗಳನು ॥ (13)
ರಾಮನಿಗೆ ರಾಜ್ಯಸಿರಿಯಹುದೆಂಬ ಶುಭನುಡಿಯು ।
ಪ್ರೇಮದಿಂ ಕೇಳಿದಾಕ್ಷಣ ಮುಖಂ ಪೌರ್ಣಮಿಯ ।
ಸೋಮನಂದದಿ ಕಳಾಭರಿತ ಮಾಗಲು ಹಿಗ್ಗಿ ಹರುಷದಿಂದರಸಿನಗುತ ॥
ಈ ಮಹಾ ಪೆರ್ಚುಗೆಯ ಪೇಳ್ದುದಕೆ ಸೌವರ್ಣ ।
ದಾಮಕುಟ ಕಂಗಳನ್ನಿತ್ತು ಕುಬ್ಜೆಯನುತಿಸಿ ।
ತಾಮರಸನಯನೆ ತುರಗೇಶನಂದನೆ ನಲಿಯುತಿಂತೆಂದಳತಿಶಯದಲಿ ॥ (14)
ತರಣಿ ವಂಶಾಭೂಷಣಾಯುತ ಮಹಾಪ್ರಾಜ್ಞ ।
ಸುರಮೌನಿಸುತ ಸಾಧುಜನರಕ್ಷನತಿದಕ್ಷ ।
ಶರಣಾಗತತ್ರಾಣ ಸಕಲಭೂಸುರ ಭರಣ ರಾಮದೊರೆಯಪ್ಪಸಿರಿಯು ॥
ಚಿರಕಾಲ ತಾಂಕೇಳ್ದನೀ ಮಹಾಶುಭನುಡಿಯು ।
ಭರತನಿಂದಧಿಕ ಮತ್ಪ್ರಾಣಪದಕಂ ಗುಣಾ ।
ಕರದಯಾನಿಧಿ ಸರ್ವಜನಮನೋಹರನಾದ ಸಂಪದಗಳೆನ್ನವಲ್ಲಿ ॥ (15)

ಎನುತೊರೆದ ಮಧುರತರ ಭಾರತಿಯ ನಾಲಿಸುತೆ ।
ಕಿನಿಸಾಂತು ಮಂದರೆ ಮನೋವ್ಯಥೆಯೊಳಂ ನುಡಿದ ।
ಅನಿಸನಱಿಪಿದೊಡಱಿಯದಾದುದು ಭವಚ್ಚಿತ್ತ್ರ ಕಾಪಟ್ಯಜನರ ನಡೆಯು ॥
ಜನನಿ ನೀಂ ತಿಳಿಯೆ ನಕ್ರಾಕುಳದೊಳಡಿದಿರ್ದ ।
ಘನವಾಪಿ ಗಾಂಭೀರ್ಯದಿಂ ತೋಱುವಂತವರು ।
ಮನುಜರಂ ಮೆಚ್ಚಿಸುತಲರ್ಚಿಸುತ ತುದಿಯೊಳುಚ್ಚಾಟ್ಯವರುವೆರರಸಿರಿಯು ॥ (16)
ಮಾತಿನಿಂ ನಿನ್ನಂಮರುಳ್ಗೊಳಿಸಿ ಮಮತೆಯಿಂ ।
ಸೋತಂತೆ ಬೇಡಿದುದನಿತ್ತು ನಿನ್ನವ ನೆನಿಸಿ ।
ಭೂತಳಾಧಿಪ ಸಕಲ ಸಂಪದವ ಕೌಸಲ್ಯೆಗಿತ್ತು ಕಪಟೋಪಾಯದಿ ।
ಆತಳೆವ ಮನದಿಷ್ಟ ಮಿದನಱಿಯದಾತನಂ ।
ನೀತಿಯುತನೆಂದು ನೆಚ್ಚಿಹೆ ಮರುಳ್ಕಷ್ಟಸಂ ।
ಜಾತವಾಗದೆ ಪೂಣದಿದರಿಂದೆ ಮಾಣಪಕಗೇಂ ಗತಿಯು ತಿಳಿದೆ ಮನದಿ ॥ (17)
ಮಗನಿಗೀ ರಾಜ್ಯಪದವಾಗಲಾ ಕೌಸಲ್ಯೆ ।
ಬಗೆಗೊಂಬಳೆಂತು ನಿನ್ನಂ ಮನದಿ ಸವತಿಯರ್ ।
ಜಗದೊಳೇಂ ಹಿತಕರರೆ ಕೂರಸಿಯ ಬಾಯ್ಧಾರೆತಾಂ ಕಣಾ ಕಮಲಾಂಬಕಿ ॥
ಹಗೆಗಳೇಂ ಬೇರಿಹರೆ ಬಾಲ್ಯ ದೊಳ್ಸಹಭವ ।
ವಿರ್ಗೆ ತಿಳಿಯೆ ಯೌವನಂ ಸಮನಿಸಿದ ಕಾಲದೊಳ್ ।
ತಗರಂತೆ ತರ್ಕಿಸುವರಿದು ನನ್ನಿ ನೀನಱಿಯೆ ತೋರ್ದುದಂ ಸೂಚಿಸುವೆನು ॥ (18)
ಕೇಳವ್ವೆ ದುರ್ಮತಿ ಯದೇನಡಸಿದುದು ನಿನಗೆ ।
ಪೇಳದೊಡು ತಿಳಿಯೆ ಸವತಿಯ ಮಗಗೆ ಸಂಪತ್ತು ।
ಸೇಳಗೆಯ ಬಯಸುತಿಹೆ ನಿಜಸುತನಿಗಹ ವಿಪತ್ತುರಿಯೆ ನರಗುರಿಯೆ ಬರಿದೆ ॥
ಕೋಳ್ಪೋಗದೆ ಸಿರಿಯು ನಿಲ್ವಂತುಪಾಯ ಮಂ ...................... ।
ತಾಳೆಂದು ಬೋಧಿಸುವೆ ನೆನಿತರುಪಲುಂ ತಿಳಿಯಗೊಡವು ದುಷ್ಕರ್ಮ ಫಲವು ॥ (19)
ಧರೆಯೊಳತಿ ಬಲನಭಿಜ್ಞನು ತಿಳಿಯೆ ಲಕ್ಷ್ಮಣಂ ।
ದೊರೆಯಪ್ಪ ರಾಮನನು ಸರದಿಂದಲಾತನಂ ।
ಪೊರೆದು ಕೊಂಡಿಹನಿನ್ನ ತನುಭವನ ಪೊಂದಿಹಂ ಶತ್ರುಘ್ನ ಸೌಮಿತ್ರಿಯೊಳು ॥
ಸಿರಿಯು ಕೈಸಾರಿತವರೀರ್ವರಿಗೆ ಭೂಪತಿಯು ।
ಕರುಣಾಮವರೊಳ್ನಂದಾದಂತೆ ನಗರೀ ಜನಂ ।
ಪರಿಜನ ವಶೀಕರಗೊಂಡು ದಿನ್ನೇನುಳಿದುದೈಸೆ ಭರತಂಗೆ ನಿನಗೆ । (20)
ನೆಲದೊಳ[1]ರಿಗಳ್ಗಶಕ್ಯಂ ರಾಮ ಶೌರ್ಯಯುತ ।
ಕಲಿಗಳಗ್ರೇಸರಂ ಸೌಮಿತ್ರಿ ಯುಭಯರ್ಗಂ ।
ಕಲಿತವಾದುದು ಧನಂಜಯ ಮರುತರೊಂದಾದ ಮಾಳ್ಕೆಯಂತಭಿವೃದ್ಧಿಯಂ ॥
ಸುಲಭದಿಂ ಗೈವನರನಾಥ ಭವದೀಯಸುತ ।
ನೆಲಗೆ! ತೃಣದಂತಲ್ಲದೇಂ ಗಣನೆ ಭೂಕಾಂತೆ ।
ಯೊಲುಮೆ ಭುಜಬಲ ಮುಳ್ಳರಿಂಗಲ್ಲದುಳಿದರ್ಗೆ ದೊರೆದಪುದೆ ಮುಗುದೆ ಮಾಣೆಯ ॥ (21)

[1] ನೆಲದೊಳುಳ್ಳರಿಗ ಶಕ್ಯಂ.

ಕರುಣೆಕೊಸ್ಯ ಪ್ರೀತಿಸೊಸ್ನೆ ದಾಕ್ಷಿಣ್ಯಮುಂ ।
ದೇರೆಯುದಿಹಶಾಣ ಪರರಭಿವೃದ್ಧಿಯಂ ನೋಡಿ ।
ತರುಬುವ್ರುವನರ್ಥಕಾರಣ ಬೆರೆಸಾರದಿಹುದರ್ಥಮಂ ಸಾಧಿಸುವ್ರೊಡೆ ॥
ಬರೆಸಳೆವ್ರುದೆಲ್ಲರಂ ರಾಜಧರ್ಮವದಲ್ತೆ ।
ಧರೆಯೊಳಗೆ ಭೂಭುಜರ ಕುಲದೊಳುದ್ಭವಿಸಿದರ ।
ಚರಿತವೊತ್ಸ್ಯನ್ಯಾಯುಮೆಂದರಿಯದಾದೆ ದಿಟಮರುಳೆ ಕುಲಗೆಡುಕಿದುರುಳೆ ॥ (22)

ಸೀತಗೂಡಿದ ಕೆಂಡಗಳ ಕರೆವ ಪಕ್ಷಿಗಳು ।
ನಾತಂಕಗರಳಯುತ ಮೃದುತರದ ವಾಣಿಗಳು ।
ಕೌತುಕದ ಕರುಣೋಪದೇಶ ಕತ್ತರಿವೆರೆದ ಹೃದಯುದಿಂ ಲೋಕಜನರ ॥
ಭೀತಿಪ್ರೀತಿಗಳಿಂದೆ ಭಕ್ಷಿಪರುಭೂಭುಜರು ।
ನೀತತ್ವವರಿಯ ಮತ್ತವರನುಣ್ಬನ್ನಣೆಯು ।
ಮಾತಿಂಗೆ ಮೆಚ್ಚಿ ಮರುಳಾಗಿ ಸಾಧುತ್ವವನ್ನೆಣಿಸಿ ದಣಿಸುವೆ ತರಳನ ॥ (23)

ಮುನಿಸೊಂದು ದೆಸೆಯು[1] ಕಾರ್ಯಗಳ ಕೈಸಾರಿಸುವ್ರು ।
ದಿನಿಸೊಂದು ದೆಸೆಯುನಗೆ ನುಡಿಗಳಿಂದುಪಚರಿಪ ।
ರಿನಿಸೊಂದು ದೆಸೆಯು ಮಾಯಾವೇಷ ಮಾಚಾರ್ಯಕೃತಕೆ ಮೃಗಧೂರ್ತನರಸು ॥
ಇನಿಬರುಂ ವಂಚನೆಗೆ ತವರಲ್ತೆಯಿೂಲೋಕ ।
ಜನರನೀಪರಿಯು ಮೋಹನಗೊಳಿಸಿ ಸರ್ವಸ್ವ ।
ವನುಸಳೆದು ಕಾಕಭಾಜನಗೊಳಿಪರೆಲೆತಾಯಿ ತಿಳಿಯೆನಾಂ ಪಳಿಯನೀನು ॥ (24)

ಸುತತನುಜ ಮಿತ್ರಬಾಂಧವ ಸುಜನ ಗುರುದೈವ ।
ಪಿತ್ರಮಾತೆ ಜಾಮಾತ ಧರ್ಮನೀತಿಗಳ ಸಂ ।
ಗತಿಗಳರಿವನೆ ಮಹಾ ದೊರೆತನದ ದುಷ್ಟಗ್ರಹಮಾವರಿಸಿಕೊಂಡನರನು ॥
ಹಿತವರಿಲ್ಲವಗೆ ತಾನೇ ಪ್ರಾಜ್ಞತನ್ನನಡೆ ।
ಯಾತ್ರಿಕಯುದ ಧವಳಪಥ ಮೆಂದೆಣಿಪ ನದುಂದೆ ।
ಕ್ಷಿತಿಯೊಳೊರೆದಪರು ಸಿರಿಗೆರವಿಡಿದರುನ್ಮತ್ತರೆಂತರಿವರ್ಕೆಸೆ ಗತಿಯು ॥ (25)

ಸತಿಯರಿಗೆ ಮಿತ್ರುತಾನಾರು ಸವತಿಯರುಗಳು ॥
ಪೃಥ್ವಿಯೊಳು ಪುರುಷರಿಗೆ ಯಮನಾರು ದಾಯಿಗಂ ।
ಮತಿಹೀನೆ ನೀನದಂ ಬಳಕರಿಯದಕಟಕಟ ನಮ್ಮಕ್ಕನೆಂದೆನುತ್ತೆ ॥
ಸತತ ಬೆರೆತಿಹೆ ರಾಮನಣೆಗ ನೆಂದಾಡುತ್ತಿಹೆ ।
ಪಿತು ? ಮೆ ಯೆಂದಾಳೋಚಿಸಿರ್ದರದರಿಂದ ಭೂ ।
ಪತಿವಶೀಕರಗೈದು ಕೌಸಲ್ಯೆಕಾವಲಯುಕ್ಕರಸಾದಳೇನೆಂಬೆನು ॥ (26)

---

[1] ಕೌ.

ವರತಪೋ ಶಾರ್ದೂಲ ಕಾಶ್ಯಪಮಹಾಮುನಿಯು ।
ತರುಣರಲೆ ಗರುಡನಾಗೇಂದ್ರರೇಂ ಮಿತ್ರತೆಯು ।
ಬೆರೆದಿಹುದೆ ಕದ್ರುವಿಗೆ ವಿನತಾನಿತಂಬಿನಿಯು ದಾಸಿಯಾಗನವರತವು ॥
ಚರಣ ಸೇವನೆ ಗೈದಕಥೆಯನೀ ಕೇಳ್ದರಿಯು ।
ಮರೆಮಾಚಲೇಂ ಜನನಿ ರಾಜ್ಯಸಿರಿ ರಾಮನಿಗೆ ।
ದೊರಕೊಂಡಬಳಿಕ ನಾಯಕ ನಾದನೇ ಭರತ ಕೌಸಲ್ಯೆ ಕೃತಕೃತ್ಯಳು ॥ (27)

* ಕುಲಿಶ ಕಠಿಣತರ ನುಡಿಯಿಂದಲೀ ಪರಿಯಲ್ಲಿ ।
ಬಲುತರದ ಕೋಪದಿಂದೊರೆಯೆ ಮಂದರೆ ಕೈಕೆ ।
ನಲವಿಂದ ನಸುನಗುತ ಮತ್ತವಳವದನಮಂ ನೋಡುತಿಂತೆಂದಳೊಲಿದು ॥
ಎಲಗೆ ಪಾಪಾಚಾರಯುತೆ ರಾಮಚಂದ್ರಮನ್ನಿ ।
ಗೊಲಿದ ಸಂಪದಕಸೂಯೆ ಬಡುವೆ ದುರ್ಮೇಧೆ ।
ಜಲಧಿಮೇಖಲೆಯೊಳಾಪರಮಪುರುಷನ ಪೋಲ್ವ ಗುಣನಿಧಿಗಳುಂಟೆ ಮರುಳೆ ॥

ಗುರುಸೇವನಾಪರ ಕೃತಜ್ಞ ಧರ್ಮಜ್ಞನುಂ । [(28)
ನಿರತದಾಂತಂ ಸತ್ಯಭಾಷಿ ಸುಖವಿಕ್ರಮಂ ।
ಪಿರಿಯಸುತನರಸಿಂಗೆ ಸಕಲಗುಣಗಣ ಭರಿತ ಭ್ರಾತೃವತ್ಸಲ ಶಾಂತನು ॥
ದೊರೆತನಕೆ ಯೋಗ್ಯನೀ ನೆಲಕೆ ಸಮ್ಮತ ರಾಮ ।
ಸಿರಿಯು ಪೊಂದಿದೊಡೆ ನೀನೇಕೆಸಂತಾಪದಿಂ ।
ಕೆರುಬುತಿಹೆ ಭರತಗಿಮ್ಮಡಿಯಲ್ತೆ ಮತ್ತಿವರೊಳೇಂ ಭೇದಮುಂಟು ತನಗೆ ॥ (29)

ಸೇವಿಸುವನನವರತ ಮತ್ಪದಪಯೋಜಮಂ ।
ದೇವಿಕಂ (ಕೌ) ಸಲಗಧಿಕಮೆಂದು ಭರತಂ ತನ್ನ ।
ಜೀವೋಪಮಿತನೆಂದು ಪ್ರೀತಿಯಿಂದಾರೈವನಖಿಲಜನ ಸಮ್ಮತಮೆನೆ ॥
ಈ ವಸುಧೆಯರಸನಾದೊಡೆ ತನಗೆ ಸೌಭಾಗ್ಯ ।
ತ್ರೀವಿದುದು ಹೃದಯಾಂತಸ್ಥಮಂ ನೀನರಿಯು ।
ದೀ ವಿಧದಿ ಪರಿತಾಪಗೊಳುವೆ ಮಂವರೆ ಮೂಢೆ ರಾಮಚಂದ್ರನ ನಿಟ್ಟಿಸಿ ॥ (30)

ಧರಣಿಪಗೆ ನೂರುಜನಮಿರೆ ಸುತರು ಪಿರಿಯರಿಂ ।
ಗರಸುತನವನುಜರಿಗೆ ತತ್ಸೇವೆ ಭೃತ್ಯರಂ ।
ತಿರುವರಿದು ಕುಲಪರಂಪರೆಯೊಳಾಚೆರಣೆಯುಂ ಮಾಡಿದುದು ರವಿವಂಶದಿ ॥
ದೊರೆಧರ್ಮನಿಷ್ಠ ಸತ್ಯಾಚಾರಿ ಬಹುದಿನಂ ।
ಧರೆಯ ನಾಳ್ದವರಾದ ಕತದಿಂದ ರಾಮಗಂ ।
ವಿರಚಿಸುವ ಯೌವರಾಜ್ಯಾಧಿಪತ್ಯವನಿದನು ನೀಂ ಕೇಳುತಳುವೆ ಮರುಳೆ ॥ (31)

ಸಕ್ಕರೆಯು ಸವಿನುಡಿಯಲನುದಿನಂ ನಿಜಹೃದಯ ।
ದಕ್ಕರಿಂದಖಿಲ ಸೌಖ್ಯವಲಿ ಪಾಲನೆಗೆಯ್ಯೆ ।
ವಕ್ಕಗಿ ನ್ನೆಂದಿಗಾದರು ರೋಷದೆ ಲಕ್ಷಂಗಳೇಂ ಪುಟ್ಟಬಹವೆಕೃಪೆಯು ॥
ಇಕ್ಕೆಯೆನಿಸುವ ರಾಮಚಂದ್ರ ಮತ್ಸುತ ಭರತ ।
ಧಿಕ್ಕಾರಮಂ ಮನದಿ ನೆನೆದಪನೆ ಸೂರ್ಯಗತಿ ।
ಮಿಕ್ಕುನಡೆವುದೆ ಮರುಳೆ ಚಿಪಿಪಾಲಿನೊಳ್ಪುಳಯು ನಿಡಲೆಳಸಿಬೋಧೆಗೈವೆ ॥ (32)

---

* ಕುಲಿಶಕರ ಕಠಿಣವೆಂದು ಇದೇ ಅರ್ಥದಲ್ಲಿರ ಬಹುದು.

ಪೊಡೆವೀಶರಾಘವಂಗೀ ರಾಜ್ಯಪದವಿಯಂ ।
ಕೊಡಲು ಮತ್ಸುತಗಖಿಲಭಾಗ್ಯಮಿತ್ತಂತಾಯ್ತು ।
ಗಡ ಭರತ ಗತ್ರಿಶಯಂ ರಾಮನೂರ್ಮ್ಮಡಿ ಯೆನಗೆ ಪಾಪಿ ಕೌಟಿಲ್ಯಗತಿಯಂ ॥
ಕೆಡಿಸಲೋಸುಗ ನುಡಿವೆ ನಿಜಧರ್ಮವುಂ ಮೀರಿ ।
ನಡೆವರಾರ್ಪೆಚ್ಚ ವರ್ಸರ್ವಜನ ಸಮ್ಮತ ದೊ ।
ಳೊಡವೆರದು ಬಾಳದಿರಲುಭಯಕುಲಕೆಡುಗು ಬಹುದಪಕೀರ್ತಿಮೂಲೋಕದಿ ॥ (33)
ಎಂದು ಸತ್ಯಾಚಾರ ನುಡಿಗಳಂ ಪೇಳಲಾ ।
ಮಂದರೆಯು ಕೋಪದಿಂ ಪಲ್ಮೊರೆದು ಶೋಕಿಸುತ ।
ಕಂದಿದಾನನದಿಂದ ಕರಗಿ ಕೊರಗುತ ನುಡಿವ ಳೆಲೆದೇವಿ ಬಾಲ್ಯದಿಂದ ॥
ಕಂಡ ಭರತನಿಗಿಂದಲೆಷ್ಟಲ್ಲಿ ವಾತ್ಸಲ್ಯ ।
ಪೊಂದಿನೀ ನಾರೈದೆಯಾದ ಕತದಿಂದೀಗ ।
ಬಂದಡಸಿ ತತಿವಿಷಮ ಕಾರ್ಯವುಂ ಬಿನ್ನವಿಸಲಾವುದನುಮಾನವಾಗೆ ॥ (34)
ಒಡತಿ ನಿನಗಾದ ಸುಖಕೋಟಿಗಳಿನ್ನ ಬಂ ।
ದಡಸಿ ದಂದಲಿನಿಸುದಿನದೊಳಂ ಸಂತೋಷ ।
ದೊಡವಿರ್ದೆ ಮುಂದೆ ಭರತನಿಗಪ್ಪ ಪುಭವವನಣಿಸಿ ಸಂಕ್ಲೇಶದಿಂದ ॥
ಒಡನೆ ಕೆಂಡಪಿಕೆಡೆದ ಮೂಷಕನಪಾಳ್ಕೆಯಂ ।
ತೊಡಲುರಿದು ತರಹರಿಸಲಾರದಾಂ ಬಂದೊರೆದೆ ।
ರೆಡೆಸಾಗಿ ತೋರ್ಪ್ಪಿಸಿ ತೈಸೆ ದಿಟ ಕೂಡಿದರ ನಗಲಿಸುವರಾವಾದೆವು ॥ (35)
ಮಂಜುಭಾಷಣೆಗಳಂ ಮಮತೆಯಂ ಪುಷ್ಟಿಸುತ ।
ರಂಜನಂಗೈದು ಸರ್ವಸ್ವಮಂ ಸೆಳೆದೊಯ್ವ ।
ಜಂಜಡೆವಠಕ್ಕಗಳ ನೀನರಿವೆಯೆಂತು ವಿಷಮಾಚಾರಹೃದಯಗಳನು ॥
ಕಂಜಮುಖಿಯಮೃತಾನ್ನಮೃಷ್ಟಭೋಜನದಲ್ಲಿ ।
ನಂಜುಬೆರಸಿರ್ಪುದಂ ತಿಳದವರೆಂತಕಟದಂ ।
ಎಂಜಲಿಸೆ ತುದಿಗೆ ಕಾಣ್ಬುದುವುದನುಭವ ಮಲ್ಲದರುಪಿದೊಡೆನಿಜಮುಕ್ಕುಮೆ॥ (36)
ಪತಿಯು ಮಮತೆಯು ರಾಗಮದು ಪಶ್ಚಿಮದರಾಗ ।
ಸುತನ ಸವಿನುಡಿಬೆಡಗು ಘನವಿಲೀನದಗುಡುಗು ।
ಸತತ ಸವತಿಯು ಪ್ರೀತಿ ಸೌದಾಮಿನಿಯರೀತಿ ದಾಯಿಗರ ಸರಸವಿರಸ ॥
ಕ್ಷಿತಿಯೊಳಿದು ಸತ್ಯ ನಿನಗಿದ ಪಥ್ಯಮೆಂದೆನೆವೆ ।
ಮತಿಹೀನೆ ಕಾಲಕರ್ಮಾಧೀನೆಗಳಖಿಳ ।
ಗತಿಯುಂಟೆ ಮನುಜರ್ಗೆ ಬುದ್ಧಿಕರ್ಮವ ಪೊದ್ದಿ ನಡೆವುದಿದು ಸತ್ಯಮಲ್ತೆ ॥ (37)
ಅರಸುತನ ರಾಮಂಗೆ ಚರಭಾವ ಭರತಂಗೆ ।
ಸಿರಿಯಹಾನಿ ಕೌಸಲೆಗೆ ಗುರುದಾಸ್ಯಕರ ನಿನಗೆ ।
ಪರಿಪೂರ್ಣ ಸುಖವು ಲಕ್ಷ್ಮಣನಿಂಗೆ ಶತ್ರುಘ್ನಗಧಿಕತರ ದುಃಖಮೆಮಗೆ ॥
ನರಪತಿ ಯುಪಾಯದಿಂದೆಸಗಿ ಕೈಸಾರಿಸಿದ ।
ಪರಿಯು ಸರಿಯದೆ ಬರಿದೆ ಮೋಸಪೋಪರೆತಾಯ ।
ಉರಿಯ ಸುಖವಾಪಿಷವೆನುತ್ತ ಚುಂಬಸೆಗೈವ ಸಿಂಹಿಯಂತರದನುಡಿಗೆ ॥ (38)

ಜಗದಾಧಿಪತ್ಯಮುಂ ರಾಮಂಗೆ ಸೇರಿದೊಡೆ ।
ನಗರದೊಳಗಿರಲು ಭರತಗೆ ಘಟಿಸದಿದು ನಿಮಗೆ ।
ಮಿಗೆ ಪಲಾಯನ ಮೂಲಧನವು ಪರಲೋಕಾಧಿವಾಸಮೆಡೆಲ್ಲದಿಲ್ಲ ॥
ಬಗೆಬಗೆಯ ಭೋಗಗಳ ನನುಭವಿಸಿ ದಾರಿದ್ರ್ಯ ।
ಮೊಗೆಯೆ ಪ್ರಿಯಜನರೆಡೆಯಲೆಂತಿರ್ಪನಾಕುವರ ।
ಮುಗುದೆ ಬಂಧುಗಳ ಮಧ್ಯದಲಿ ನಿರ್ಧನನಿಹುದು ವ್ಯರ್ಥಮೆಂದರಿಯದಾದೆ ॥ (39)
ಜನಕಗತಿಶಯಮೆಂದು ಸೇವಿಸುವ ಲಕ್ಷ್ಮಣಗೆ ।
ನೆನೆಯನುಪಕಾರಮಂ ಮರದೊಮ್ಮೆಮಿಗೆನಿನ್ನ ।
ತನಯನಲಿ ದೋಷಂಗಳೆಣಿಸಿ ನಾಶನಗೈವ ರಾಮನಿದು ನನ್ನಿ ಮರುಳೆ
ನಿನಗೆ ತಿಳಿಯದು ಲೋಕದೊಳಗೆ ಜೀವರುಗಳಗೆ ।
ಮನಮೆರಸಿ ತಾಂ ಗೈದ ಪುಣ್ಯಾಪಾಪಗಳೆರಡ ।
ನನುಭವಿಸಿದಲ್ಲದವ ಮೀರಲೆಂತಳವಹುದು ಕಾಲಗತಿ ಬಲಿಯಮಲ್ತೆ ॥ (40)
ವಿಧಿಲಿಖಿತಮಂ ಬುದ್ಧಿಯನುಸರಿಪುದಂತೆಂದು ।
ಬುಧರೊರೆದ ಗಾದೆ ನಿಷ್ಫಲ ಮಪ್ಪುದೆಂತು ತನ ।
ಗಧಿಕಾರಮೆನಿತಿರ್ದೊಡಂ ಕರ್ಮಫಲಗಳಂ ಭುಂಜಿಸಿದ ಬಳಿಕಲ್ಲದೆ ॥
ನಿಧನಮಪ್ಪುದೆ ಜೀವತತಿಗೆನಾಂ ಪೇಳ್ದೀನು ।
ಬಧಿರ ಕರ್ಣೋಪದೇಶಂ ದರಿದ್ರನ ಕೋಪ ।
ಮಧುರಪೀಡನೆಯಲ್ಲದೇಂ ಫಲಂ ಕಾನನದ ರೋದನಬಗೆಯಲ್ಲದೆ ॥ (41)
ಪೊಡವಿಯೊಳು ಜೀವರಿಗೆ ಸುಖದುಃಖಸಂಬಂಧ ।
ಮಡಸುವುದು ಜಗದೀಶನಾಜ್ಞೆಯಲ್ಲಿದೆ ಬೇರೆ ।
ಜಡಮತಿಗಳುಪಮಂತ್ರ ತಂತ್ರದಾಲೋಚನೆಗಳೊಡಗೂಡಿ ಬಹವೆಕರಂದಿ ॥
ಪಿಡಿದಿರ್ಪನವರವರ ಕರ್ಮ ಫಲವನು ಸೂತ್ರ ।
ದೊಡನೆ ಚಲಿಸದ ತೆರದೊಳರಿಯ ದೀಪರಿಯನ್ನು ।
ಬಡವರಾಯಾಸ ದುಗ್ಗಡಯತ್ನಗಳ ನೆನೆಯೆ ಫಲಿಸುವುದೆ ಮನದಿಷ್ಟವು । (42)
ಒಡಲ ವ್ಯಾಪಿಸಿಯಲಿವ ಕ್ರೂರರುಜೆಯುಪಟಳವ ।
ಕೆಡಿಸುತಿರುವೌಷಧಿಯ ನೂಡಿಸಲ್ಕದು ರಸನೆ ।
ಗೆಡಸೆನಿಸಿ ತೋರ್ದಪು ದಪಥ್ಯಕರವಸ್ತು ರುಚಿಕರದಿಂದ ಮೋಹಿಸುವುದು ॥
ಕಡೆಗೆ ಕಾಂಬುದು ಕಾಂತೆ ಮುನ್ನುಡಿಯ ಕಾಠಿಣ್ಯ ।
ಮುಡದಿಮಣಿ ಕೌಸಲೆಯ ಮೇಲ್ನುಡಿಯ ಮಾಧುರ್ಯ ।
ಸಡಗರಮದೆಲ್ಲಿ ಮೇಣೆಂಬುದೇಂ ಪೇಳಲೇಂ ಒಂದೆರಡು ವತ್ಸರದೊಳು ॥ (43)
ತಾಮರಸತಪಪರವಿನಾಭಾವಸಂಬಂಧ ।
ಕೋಮಲಪ್ರಿಯಮಂಬು ನಿಲಯದೊಳಗಿರ್ಪಾಗ ।
ನಾಮರಸ್ಯಂ ಪೋಗಿ ಶತ್ರುತ್ವ ಮಹುದುದಕ ಪೋದಡಾಕ್ಷಣಧರೆಯೊಳು ॥
ನೀಮಹತ್ಸಂಪತ್ತಿನಲ್ಲಿರಲು ಕೌಸಲೆಯು ।
ರಾಮರತಿಸ್ನೇಹದಿಂದಿರ್ಪರಾಪತ್ತಡಸೆ ।
ಪ್ರೇಮವಳಿದಾತ್ಮಜನ ಮಗುಳೆ ನಿನ್ನಂಚುಚ್ಚದುಳಿದಪರೆ ಹಿತವರಹರೆ । (44)

ಪಗೆಯು ಹಿತಮೆಂದರಿದುಪೇಕ್ಷೆಗೈದಿರ್ದೊಡಂ ।
ಮಿಗೆ ಸಮಯ ಬಂದೆಡೆಯುಲಪಕೃತಿಗಳನ್ನೆಸಗಿ ।
ಬಗೆಯುಮಳವನೆ ಕಳೆದು ಬರಕೂನಮಂ ಮರುಳೆ ನೇಹಸಿಂದಗ್ನಿಯುರ್ವ್ವು ॥
ಬಗಲೊಳಗೆ ಬೈಚಿಟ್ಟು ತೆಗೆ[1] ಪುಳೆಯುಂಸಾದೊ
ಡೊಗೆಯೆ ಪೂರ್ಗುತತನೂತಾಪ ಗೊಳಿಸದೆಮರ್ಾಡ್ಡಿ ।
ಸೊಗಯಿಪುದೆ ಶೀತಳಾಕೃತಿ ಯೆ ಏಸಿಯೆರ್ಕ್ಕರಸಿ ತಿಳಿನೆನ್ನೊಳಾಳೋಚಿಸಿ ॥ (45)
ಹೃದಯಾಪಂತಸ್ಥಮಂ ತಿಳಿಯುವಳೆ ರಾಜಸಂ ;
ಪದವ ಕೈಸಾರಿಸುವೆ ರಾಮಂಗೆ ಸಿರಿಯು ಬಂ ।
ದೊದಗಿದೊಡೆ ಭಪಡೀಯ ಸಿಪಿಪಿಗದ ಶಾಂತಿಯುಂ ಕೆಳೆಯುಮಳದಪನೆ ತಾಯೆ ॥
ಪದನೋಪಮಿತಮೆಂದು ನೀರೇಜಬೀಜಮಂ ।
ಮುದದಿಂದ ವಾಪಿಯೊಳ್ಬಿತ್ತಿ ಪೋಷಿಸೆ ಕುಸುಮ ।
ಮುದಮಿಸಲ್ವಕ್ತ್ರ ಸುಂದರವನೊಯ್ದು ದಲ್ಲದದು ಮಾಡ್ಡಿಪುದೆ ತಿಳಿಯದಾದೆ ॥
ಕ್ರೂರತರದಾರ್ಭಟೆಯ ನುಡಿಯು ಕಂಡಂಜುವುದು । (46)
ಧಾರುಣಿಯು ಜನಮೆಲ್ಲ ಮೃದುಮಧುರ ವಾಣಿಯಿಂ ।
ಸಾರಿಪರಶಕ್ತಿಯುಂ ಸತತ ತೊಡೆಯೊಳಗಿಟ್ಟು ಮೃಗವ ಪ್ರಿಯದಿಂ ಸಲಹಿದ ॥
ತಾರೆಯರಸನನೆರು ಮೃಗಲಾಂಛನನೆನುತ್ತೊರೆವ ।
ರೋರಂತೆ ತತ್ಕುಲವ ನಲೆವ ಕೇಸರಿಯನ್ನು ।
ದಾರಮೃಗಪತಿಯೆಂಬರೀನೀತಿ ಧರ್ಮವಂ ತಿಳಿಮ ನೆಕಾಶಬ್ಜಾನನೆ ॥ (47)
ಪಲವು ಮಾತೇನಂಬುಜಾಕ್ಷಿ ರಾಮಗೆರಾಜ್ಯ ।
ಮೊಲಿಯಲವನರಸಿಯರ್ಗಂತಸದಿಹಿಗ್ಗುವ ।
ಬಲಾಕಪ್ಪದಿಂ ಭರತ ನಳಯಲಾತನ ಸತಿಯು ನಿನಗಳಲಿತೊಳಲುತಿಹಳು ॥
ನೆಲವನಾಕಾಂಕ್ಷಿಸದೆ ಸಿರಿಯುಸವತಿಯುತನುಜ ।
ಗೊಲಿಸಿನೀಂ ಸುಲಭ ಪಹುದನುಚಿತಂ ಪೂರ್ವಕೃತ ।
ಫಲವ ಭುಂಜಿಸ ದುಳಿಯೆ ನಿನ್ನಳವೆ ರಾಮ ಪುರಧರೆಸನಾಜ್ಞೆಯು ಮೀರ್ವೊಡೆ ॥
(ಸಂಧಿ 4, ಪದಗಳು 170.) [(48)

## ಐದನೆಯ ಸಂಧಿ.

ಸೂಚನೆ ॥ ಶಾಂತಿಕರ್ಮದಲಿ ಬೇತಾಳ ಮಾಡಿದ ತೆರದಿ ।
ಸಂತಸದಿ ರಾಮಾಭಿಷೇಕಸಮಯದಲಿ ಬಹುತ್ರ ।
ರಾಂತರಾಯಂಗೈದಳಶ್ವಪತಿಯಾತ್ಮಭವೆ ಮಂಥರೆಯ ಬೋಧೆಯಿಂದ ॥
ಗಿರಿರಾಟ್ಸೂಜೆ ಕೇಳ್ಕಂದದೆ ಮಹಾಮಾಯ ।
ವೆರೆದ ಬಿರುನುಡಿಗಳಂ ಗಂಧರ್ವಪತಿಯಣುಗಿ ।
ಗೊರೆದು ಮನಮಂ ಕಲಕೆ ಮುಗುಳೊಂದು ಪಾಯದಿಂ ಮತಿಹಿತಮದೆಂಬಂದದಿ ॥
ಪರಿಪರಿಯ ಕುಹಕಮಂ ಪಣಿದು ದುರ್ಬೋಧನೆಯ ।
ನೆರೆದಳೇಕಾಂತ ದೊಳ್ಕರ್ಣ ಪೀಯೂಷಮೆನೆ ।
ಸಿರಿಗೆ ಪ್ರತ್ಯೂಹಗಳನೇಕ ಮೆನ್ನುವ ನ್ಯಾಯ ಸಫಲೀಕರಂಗೈವ್ವೊಲು ॥ (1)

---
[1] ಕಿರಿಯ.

ಕೇಳವ್ವೆ ರಾಮಂಗೆ ರಾಜ್ಯಸಿರಿ ದೊರಕಿದೊಡೆ ।
ಕೇಳಿನಿಸಲೂಳಗವು ಭರತಗಹುದಲ್ಲದೊಡೆ ।
ತಾಳ ಧುತಿ ವೇಷಮಂ ಕಾನನಕೆ ಗಮಿಸುವುದು ತರುನಿಲಯವುಮಂ ಸಾರ್ವ್ರದು ॥
ಆಳುವ್ರೊಡೆಯನವಾತೆ ಯೆಡೆಯು ದಾಸೀಜನರ ।
ಜೋಳಯಲಿ ನೀನಿಹುದು ನಿನ್ನ ಸೊಸೆಯುರುಯಿಟ್ಟ ।
ಕೂಳುಂಡು ಸೀತೆ ಪೇಳದ ತೆರದಿ ಸೇವೆಯೊಳಗೊಪ್ಪುವುದು ತಪ್ಪಲರಿದು ॥ (2)
ತನ್ನ ಸಿರಿಯಿಂದ್ರಪದ ತನ್ನ ದೌರ್ಭಾಗ್ಯಮದು ।
ನೆನ್ನಿ ಮೂಲೋಕದಾರಿದ್ರ್ಯತನ್ನುಳವಾದೊ ।
ಡುನ್ನತಂ ಯುಗ ಮರಳ ಪೋಪುದೆಂದೆಣಿಸುವುದು ಧೀಮಂತರ ಮತವು ಮರುಳೆ ॥
ತನ್ನುದರ ಸಂಭವರ್ತಮಗಾಗ ರೆಂಬೆಡೆಯು ।
ಲನ್ನಿಗರು ಪೊರೆದವರೆ ತಿಳ ನಿನ್ನೊಳೀಪರಿಯು ।
ಚೆನ್ನಾಗಿ ನಿಜಹಿತವ ನೀಂ ಗೈದು ಸುಖಿಯಾಗು ಪೆರರಿಂಗೆ ಬಾಯಬಿಡದೆ ॥ (3)
ಭರತನಂ ಪೊರೆ ಬರ್ಪಸಿರಿಯು ಬಾಗದೆ ಜಗ ।
ದ್ಭರಿತ ವಿಕ್ರಮರಾಮ ಭೂಪಾಲನಾಗದಂ ।
ತುರುತರೋಪಾಯಮಂ ಬೇಗಲಾಳೋಚಿಪುದು ಕಾರ್ಯಮುಂವಿೂರದಂತೆ ॥
ದೊರೆತನಂ ನಿನ್ನ ವಶಮಾದ ಬಳಿಕೀಲೋಕ ।
ತರರಂತೆ ಸೇವಿಪರು ಕೆಲಕಾಲಕಂ ಭಾಗ್ಯ ।
ಚಿರಮಹುದು ಮೈಮರೆದು ನೆನೆಯೆ ಗತಜಲಸೇತುಬಂಧದಂತಫಲವಹುದು ॥ (4)
ರಾಮಂಗೆ ಯುವರಾಜಪಟ್ಟಮಂ ಕಟ್ಟುವರೆ ।
ನೇಮಿಸಿದ ಶುಭವಸ್ತು ನಿಚಯದಿಂ ಭರತಂಗೆ ।
ಸಾವಾಜಕನುಮತದಿ ರಾಜ್ಯಾಧಿಪತ್ಯಕಭಿಷೇಕಮಂ ರಚಿಸಿ ಬಳಿಕ ॥
ರಾಮನಾರಾಮದಲಿ ಪದಿನಾಲ್ಕು ವತ್ಸರಂ ।
ನೇಮದಿಂ ಮೌನಿಯಂತಿಪ್ಪಂತೆ ನೀಂಗೈದೊ ।
ಡಾ ಮಗುಳ್ ನಾಡೆಲ್ಲ ವಶವರ್ತಿಯಾಗುವುದು ಸಂಪದಂ ಪೆರ್ಚಬಹುದು ॥ (5)
ನಾಡೆಲ್ಲ ನಿನ್ನಣುಗನವರಾದ ಬಳಿಕ ಕೈ ।
ಗೂಡುವುದು ಬಯಸಿದುದು ಕೌಸಲ್ಯೆಯಾತ್ಮಭವ ।
ಕಾದಿಂದವೈತಂದೊಡಂ ಭೃತ್ಯಭಾವದಿಂದಿಹುದಲ್ಲದಿತರವಲ್ಲ ॥
ನೋಡಿ ಸೈರಿಸದವನು ತನಗಾಗಬೇಕೆಂದು ।
ಮಾಡಿದರನೇಕವಿಧ ಯತ್ನಂಗಳಂ ಬಯಲ ।
ಕೂಡಿಪೋಪುದು ಮನೋರಥವಲ್ಲದಾ(ಂ)ತಂಗೆ ಸಿದ್ಧಿಸುವ ಕಾರ್ಯವಿರವು ॥ (6)
ಅದು ನಿಮಿತ್ತದೊಳಂಬುಜಾಕ್ಷಿ ಜಾಗ್ರತೆಯಿಂದ ।
ಪದುಳದಿಂ ಸಿರಿಯುಪ್ಪುಪಾಯಮನ್ನೆಸಗೆಂದು ।
ಹೃದಯದಂತಸ್ಥಮಂ ತಿಳುಪಿದೆಂ ಬಲ್ಲನಿತ ಜನತಾವಿರೋಧವಾಗೆ ॥
ಚದರದಿಹೆ ಭವದೀಯ ಕೃಪೆಯಿಂದಲೆಂದು ಬಹು ।
ವಿಧದಕುಹಕೋಪಾಯಗಳ ನುಸಿರಲವು ಸತ್ಯ ।
ಸದನ ಪೊಂದೆಣಿಸಿ ಮಾರುತ್ತರಂಗೊಡದೊಂದು ನಿಮಿಷ ನಿಟ್ಟಿಸುತಿರ್ದಳು ॥ (7)

ಪಾಲಿೊಳ್ಪುಳಯುಪಿಂಡಿ ಕಲಕಿದಂದದಲಿ ದು ।
ಶ್ಶೀಲಮಂತ್ರದಿ ಸೈಂಧವಾಧಿಪನ ಪ್ರತ್ರಿಯು ಹೃ ।
ದಾಲಯುವ ವಿಕಳಗೊಳಸಲ್ಕೆ ವಿಸ್ಮಿತಳಾಗಿ ಮುಂಗಾಣದತಿಚಿಂತೆಯಿಂ ॥
ಲೋಲಾಯತೇಕ್ಷಣೆ ನಿಜಾಂಗುಷ್ಠಮಂ ನೋಡಿ ।
ಡೋಲಾಯಮಾನಮಾನಸಳಾಗಿ ರಾಮ ಭೂ ।
ಪಾಲನಾಗದ ತೆರದಿ ಯತ್ನಮಂ ಯೋಚಿಸುತ ಮಂದರೆಯೊಳಂತೆಂದಳು ॥ (8)
ಎನಗೆ ಹಿತಕರವಾದ ಕಜ್ಜಮಂ ನಿನ್ನಂತೆ ।
ಮನದೊಳಾಲೋಚಿಸುತ ಪೇಳ್ವರಾರೀ ಪುರದಿ ।
ಜನನಿ ಸೋದರಿ ನೀನೆಯಲ್ತೆ ಭೂಧವನಪ್ಪನೆಂತೆನ್ನ ಕುವರನಿಂದು ॥
ಜನನಾಥ ಸಕಲ ಸಂಭಾರಮಂ ಸಂಗ್ರಹಿಸಿ ।
ಮುನಿಗಳನುಮತದಿಂದ ಪುಷ್ಯಯೋಗದಿ ಪಟ್ಟ ।
ವನು ಕಟ್ಟಲಿಚ್ಛೆಯಿಂ ಗೈದಿರ್ಪ ನಿದಕಂತರಾಯಮೆಂತಪ್ಪುದಬಲೆ ॥ (9)
ಜೀವನಂ ತನು ಧನಂ ರಾಜ್ಯಸುತ ಸರ್ವಸ್ವ ।
ವಾವುದುಂಟೆನಗದೆಲ್ಲಂ ನಿನ್ನಹಿಂದೆನಿಪೆ ।
ನೀವಸುಧೆ ಯಧಿನಾಥಳೆನಿಸಿ ಮದ್ಭಾಗ್ಯಮಂ ರಕ್ಷಿಸುವುಪಾಯಮೊಂದ ॥
ಸಾವಧಾನದೊಳರಿಪು ಜ್ಞಾನನಿಧಿ ಕಾಲತ್ರ ।
ಯಾವ ಬೋಧಾಶಾಲಿಯೆಂದು ನಾನಾ ವಿಧದ ।
ಲೋವಿಪ್ರಿಯದಿಂ ನುಡಿಸಿ ಜಾಗರವ ಲೆ ಪಡತಿಯೊಡನೆಂತೆಂದಳಾ ಮಂಥರೆ ॥(10)
ಸತತ ನಿಜನೇತ್ರದಿಂದತಿಶಯ ವಿದೆಂದೆನ್ನ ।
ಪ್ರತಿಪಾಲಿಸಿದ ಮಾತೆಯಾದ ಕತದಿಂ ಸಮಯ ।
ಕತಿಗೋಪ್ಯ ಮಂತ್ರಮಂ ಬಿನ್ನವಿಸಿ ಸಕಲ ಸೌಭಾಗ್ಯದೊಡತಿಯ ಮಾಳ್ಪೆನು ॥
ಸುತಗೆ ಪಟ್ಟಾಭಿಷೇಕೋತ್ಸವಂ ರಾಮಂಗೆ ।
ವಿತತಗಹನಾವಾಸಮಪ್ಪಂತೆ ಪೇಳ್ವದಂ ।
ಹಿತಮೆಂದು ಕ್ಷಿತಿಯರಸನೊಪ್ಪುಗೊಳುವಂದವಂ ಬಿತ್ತರಿಪೆ ನಬ್ಜಾಂಬಕಿ ॥ (11)
ವಾಸವಗೆ ಶಂಬರನೊಳಾಗಲ್ಮಹಾಸಮರ ।
ಗಾಸಿಗೆಟ್ಟಮರಪತಿಯೈ ತಂದು ಬೆಸಸಲ್ಕೆ ।
ಬೇಸರದೆ ಪ್ರೀತಿಯಿಂ ದಶರಥ ಮಹೀಪಾಲ ಸುರಪನೊಡನೈದಲಾಗ ॥
ತೋಸೆಂದು ರಕ್ಕಸರ ಮೊತ್ತಬೆಂಬತ್ತಿ ಬಲು ।
ಬೇಸರಿಸಿ ಪೋರಾಡುತಿರಲು ರಣರಂಗದೊಳು ।
ಮೋಸಮಾಗಲ್ತೇರಿನಚ್ಚು ತತ್ಸಮಯದೊಳು ಧೈರ್ಯಗುಂದದ ತೆರದೊಳು ॥
ತೇರಿಂಗೆಕರವಿತ್ತುದಾರಜಯಸಿರಿದೊರೆಯ । [(12)
ಸಾರುವಂದದಿ ಧೈರ್ಯಗುಂದದೆಸಗಿದ ಕಾರ್ಯ ।
ವಾರೈದು ನೃಪತಿಲಕ ನೋಡಿ ಸಂತಸದಿಂದಲಿಂತೆಂದ ವಿನಯದಿಂದ ॥
ನಾರಿಯರ ಕುಲದರಸಿ ಪತಿಹಿತೈಷಿಣಿ ನೀನೆ ।
ಯಾರಿಂದಲುಂ ತೀರದೀ ಸಮಯ ಕುಪಕೃತಿಯ ।
ಪೋರಂತೆ ನೀನೆಸಗಿದುದರಿಂದಲಿನವಂಶಜ ಸುಚರಿತಮುರ್ದರಸಿಯ ॥ (13)

ಆದುದತಿ ಸಂತೋಷವದರಿಂದ ವರವೆರಡ ।
ಪೋದವೆತ್ತಿತ್ತವೆನು ಕೈಕೊಂಡು ಸುಖವ ಸಂ ।
ಪಾದಿಸುವುದೆನ್ನರಸಿ ಯೆಂದರಸನೊರೆಯಲ್ಕೆ ನಸುನಗೆಯೊಳಂವಂದಿಸಿ ॥
ಮೇದಿನೀಪತಿಯಿತ್ತವರಗಳೆರಡುಂ ಭವ ।
ತ್ಪಾದಾರವಿಂದಂಗಳೆಡೆಯಲಿರಲೆನಗೆ ಬೇ ।
ಕಾದ ಸಮಯದಲಿ ಬಿನ್ನಪಗೈದು ಕೊಳುವೆನೆಂದರಸಿ ವಿಜ್ಞಾಪಿಸಲ್ಕೆ ॥ (14)
ಸಂತಸಂಗೊಂಡರಸನೆಂಬುವಂ ಪಿಂತೆನ್ನ ।
ಮುಂತುಸುರಿದಂದಿಂದ ಮರೆದಿರ್ದೆ ಭಾಗ್ಯದುರು ।
ಸಂತೆಯಿಂದವಸರಕೆ ಬೈಚಿಟ್ಟುದಂ ನೆನೆದು ಮನದೆ ನಿಜಹಿತಕರವೆನೆ ॥
ಸಾಂ ತಳುವದುಸುರಿದಂ ಭರತಂಗೆ ರಾಜ್ಯಸಿರಿ ।
ಕಾಂತಾರವಾಸ ರಾಮಂಗೆನುತ ಯಾಚಿಪುದು ।
ಕಾಂತನಂ ಪೂರ್ವವರಬಲಮಿದೆಕೊ ಮನವಿಷ್ಟವಮುಪ್ಪವಿದನೆಸಗೆ ನಿನಗೆ ॥ (15)
ದಕ್ಕಿಣದ ದೆಸೆಯೊಳಾ ದಂಡಕಾರಣ್ಯದೊಳು ।
ಸೊಕ್ಕಿದಸುರೇಶ ಶತಮಾಯಂ ತಿಮಿಧ್ವಜನ ।
ನೊಕ್ಕಲಿಕ್ಕುವೊಡ್ಡೈದಲಿಂದ್ರನಾ ಶಂಬರನ ವೈಜಯಂತೀ ನಗರಕೆ ॥
ತಕ್ಕದಿರಲಸುರ ಬೆಂಬಲಕೆ ದಶರಥನೈದೆ ।
ಕಕ್ಕಸದ ರಣದಿ ತೇರಚ್ಚುಗಿಯೆ ಪತಿಯನ್ನು ।
ವಕ್ಕರಿಂ ಸಾಹಾಯ ಮೆಸಗಿ ಸಂಪಾದಿಸಿದ ಪ್ರೀತಿ ಮಾತ್ರೇ ಸಮಯದಿ ॥ (16)
ಉಪಕರಿಸಿತವ್ವೆ ಪದಿನಾಲ್ಕು ವತ್ಸರ ರಾಮ ।
ತಪಸಿಯಂತಾರಣ್ಯ ವಾಸಿಯಪ್ಪಂದ ದಿಂ ।
ಗುಪಿತದಿಂ ಬಿನ್ನವಿಪುದರಸಂಗೆ ನಿನ್ನಣುಗ ನರನಾಥ ನಪ್ಪಂದದಿ ॥
ತಪನ ವಂಶಾಗ್ರಣಿಯು ಕೊಟ್ಟ ಭಾಷೆಗೆ ತಪ್ಪ ।
ಕುಪಿತನಾಗಂ ಕಾಮಿಯಾದ ದೆಸೆಯಿಂ ತಾಯೆ ।
ಅಪರಿಮಿತ ಸೌಖ್ಯಮುದರಿಂದಹುದು ಮನ್ನಡಿಯು ಪ್ರಿಯದಿಂದ ಪತಿಕರಿಸಲು ॥ (17)
ಪೋಗು ಕೋಪಗೇಹಮನ್ನಳವಡಿಸು ವೈಕಾರ ।
ಬಗೆಯಲಂಕೃತಿಗಳಂ ತಿರೆಗೆ ಮೊಗವನ್ನಿಟ್ಟು ।
ಸೊಗಸಿರುವ ಭೂಷಣವಳಿಗಳಂ ತೆಗೆದಿಟ್ಟು ಮೌನವಮಂ ತೊಟ್ಟುಗೊಟ್ಟು ॥
ಬಿಗಿಯೆನಿಸಿ ಕೀರಶಾರಿಕೆಗಳನುಸರಿಸಿರುವ ।
ಬಗೆಬಗೆಯ ನುಡಿಗಳಂ ನುಡಿಸುವರ ಬೇಳುಹೆಗೆ ।
ವೊಗಗೊಡದೆ ಮನವ ಬಲುಸರಗೈದು ಮುಂತಪ್ಪ ಶುಭವ ಹಾನಿಪುದು ತಾಯೆ ।
ತನ್ನ ಜೀವನಕೆಂದಲತಿಶಯಮೆನುತ್ತರಸ । [(18)
ನಿನ್ನಲ್ಲಿ ಚಿತ್ತದೆರಕದೊಳಿರ್ದ ಕೋಪಿಸಂ ।
ಕನ್ನೆಯರ ರನ್ನೆ ಮೂರುತ್ತರಂಗೊಡ ಬೇಳ್ಪನುಡಿಗೆ ಹಿತವೆಂದೆಣಿಸುತ ॥
ನನ್ನಿ ನಿನಗೋಸುಗಂ ಪೊಗುವನಗ್ನಿಯನಿದಂ ।
ಮುನ್ನನಾಂ ಬಲ್ಲೆ ಬಂದಾತ ಮಣಿಧನಧೇನು ।
ಬಿನ್ನಣದರಾಜ್ಯ ಮೇನಿತೊಡದನೊಪ್ಪದಿರು ಮೃದುನುಡಿಗಳಾಡದಿಹುದು ॥ (19)

ಬಲು ತೆರದುಪಾಯಗಳ ಬೋಧಿಸಲ್ ಪ್ರಿಯನವಂ ।
ನಲವಿನಿಂ ನಿಟ್ಟಿಸದೆ ಶೋಕಲಾಲಸೆಯಾಗಿ ।
ಪಲವು ವಿಧಕಠಿಣದುಕ್ತಿಗಳಿಂದ ಲಾತನಂ ನಿರ್ಭತ್ಸ್ಯನೆಂಗೈವುತ ॥
ಒಲಿಯುತಿರಲರೆನಿಮಿಷ ಬೇಡಿದುದನಿತ್ತಪನಿ ।
ನ್ನೊಲುಮೆಯಂ ಪಡೆಯಲಿಚ್ಛೈಸಿ ಶಪಥಂಗೈವ ।
ನಲಿವೇಣಿಯಿದನರಿತು ಸ್ಮರಿಸು ಪೂರ್ವದಲಿತ್ತ ವರಗಳೆರಡಂ ಮರೆಯದೆ ॥ (20)

ನಾಡೊಡೆಯನಭಿಮತವ ತಿಳಿದು ನೀಂ ವರವೆರಡ ।
ಬೇಡು ಪದಿನಾಲ್ಕು ವರುಷಂ ರಾಮನೂರುಳಿದು ।
ಕಾಡಿಗಿರದೈದಲೆನ್ನಣುಗ ಭರತಂ ರಾಜ್ಯದಧಿನಾಥನೆನಿಸಲೆಂದು ॥
ಮಾಡದನುಮಾನವನ್ನಿತ್ತಪಂ ಬಯಸಿದುದು ।
ಕೊಡುವುದು ಮನದಿಷ್ಟ ತನಯ ಭೂನಾಥನಹ ।
ನಾಡೆಲ್ಲ ವಶವಾದ ಬಳಿಕ ಲಾರಿಂದೇನು ಬಹುದು ತಿಳಿಯಬ್ಜಾಂಬಕೆ ॥ (21)

ಚತುರ ದಶವರುಷ ವನದೊಳಗಿರ್ದು ರಾಮ ಬಂ ।
ದತಿಶಯಮದೇನ ಕಾಣ್ಬಂ ಮುಂದೆ ಲೋಕ ಸಂ ।
ತತಿ ನಿನ್ನ ಪುತ್ರನಾಧೀನವಾಗೊಪ್ಪುವುದು ದೊರೆತನಂ ರಕ್ಷೆಯಹುದು ॥
ಮತಿಹೀನೆ ನಾಂ ಪೇಳ್ದುಪಾಯಗಳೊಳೊಂದನು ।
ನ್ನತಿಗಳೆಯದೆಸಗಿ ಸುಖಮಂ ಪಡೆಯಲೆಂದಶ್ವ ।
ಪತಿಯಣುಗಿಗೊರೆದಳಾ ಮಂದರೆ ಮಹಾಮಾಯೆ ಮೂರ್ತಿಯಾದುಭವಿಸಿದಂತೆ ॥

ಮಂದರಾವಚನರಚನಾಕ್ರಮವ ಲಾಲಿಸುತ । (22)
ಗಂಧರ್ವಪತಿಯಾತ್ಮಜಾತೆ ವಿಸ್ಮಿತಳಾಗು ।
ತೊಂದೆರಡುಘಳಿಗೆ ಪರಿಯಂತ ಮೌನದೊಳಮರ್ತನೊಳ್ಳಾಲೋಚಿಸುತಲಿ ॥
ಬಂದುದೆಲ್ಲೀ ಮೇಧೆ ಈಕುಬ್ಜೆ ನಾಲ್ಮೊಗನ ।
ಸುಂದರಿಯಳಂಶವನ್ನಾಂತು ಭೂಮೀತಳಕೆ ।
ಬಂದಿರ್ಪಳಲ್ಲದಿರಲೀ ವಿವೇಕತೆ ದೊರೆಗುಮೆಂತು ವ್ಯಭಿಚಾರಿಸತಿಗೆ ॥ (23)

ಎನುತ ಸಂತಸ ಪೆರ್ಚುತಾ ಕುಬ್ಜೆಯಂ ತುತಿಸ ।
ಲನುಗೈದಳೀ ಪೂರ್ವವಿಧುವಕ್ತ್ರ ಕಾಂಚನವ ।
ಕೆನುವತಿಪ ನಾಸಿಕಂ ಸರಸೀರುಹದಳಾಕ್ಷಿಯುಗ ಸ್ನಿಗ್ಧಗಂಡಸ್ಥಲಂ ॥
ಮಿನುಗುತಿಹ ಪೃಗಕಂ ಲಿಕುಚಕುಚ ಶುಕ್ತಿಯು ।
ನ್ನನುಮಾಂತಕರ್ಣ ಶಾತೋದರಂ ಕರಿಕರಗ ।
ಳೆನಲೂರು ಕಹಳೋಪಮಿತಜಂಘೆಗಳಂ ದೆಸೆವ ಚೆಲ್ವನಾನೇಂಬಣ್ಣಿಪೆಂ ॥ (24)

ಸುತನ ಮಾತುಳನೆಡೆಗೆ ಕಳುಪಿ ಪತಿ ಯಾತ್ಮಜಗೆ ।
ವಿತತರಾಜ್ಯದ ಸಿರಿಯ ಕೈಕೊಳಿಸಲನುಗೈದ ।
ಕತಿಪಯೋಪಾಯಂಗಳಂತಂತೆ ಕುಬ್ಜೆಯರ ಕುಲದೊಳಧಿಕ ॥
ಮತಿವಂತೆ ನೀನೆಯೆನ್ನಯ ಭಾಗ್ಯದೇಳಿಗೆಯು ।
ಹಿತಕಾರಿಯತಿಪ್ರೀತೆ ಸುತಗೆ ಸಿರಿಯಡಸಿದೊಡೆ ।
ಸತತ ಸಂತೋಷಮಂ ಕೈಗೈದೆ ಕೊಡುವೆ ನಿನಗಧಿಕ ಸಂಪತ್ಸುಖಗಳಂ ॥ (25)

ಶಂಬರನ ಶತಮಾಯ ಕಾಲನೇಮಿಯ ಕಪಟ ।
ಡಂಭ ಮಾಯಾಸುರನ ಕೃತ್ರಿಮಂ ಮಾರೀಚ ।
ಜಂಭಮೊದಲಾದ ಕುಟಿಲೋಪಾಯ ಸಂತತಿಯನಾಂತ ಮತಿ ನಿನ್ನದೈಸ ॥
ಅಂಬುಜಾಸನ ಸಕಲ ಕೃತ್ರಿಮಗಳಂ ಸ್ವಗಾಮಿ ।
ದೆಂಬಂತೆ ರಥಘೋಣದಾಯತವಮಾಡಿ ನಿ ।
ನ್ನಿಂಬೆನಿಪ ಬೆನ್ನಿನೊಳ್ಪುದುಗಿಸಿದನಲ್ಲದಿರಲಿವಿತು ಮತ್ತ ಸಂಜನಿಕುಮೆ ॥ (26)

ಕುಟಿಲಗಳ ಮನೆ ಕಪಟಮಂದಿರಂ ಆಟೋಪ ।
ಮಠ ಕೃತ್ರಿಮದ ನಿಲಯ ಮಾಯಾಸಮೂಹ ಸಂ ।
ಪುಟದನೃತದಾಗಾರ ವಂಚನಾಲಯ ಮಹಾಮಿತ್ರಭೇದದ ತವರ್ಮನೆ ॥
ಪುಟಮಾಯಗಳ ತಾಣಮೆನಿಪ ಬೆನ್ನಿನ ಕೂಸೆ ॥
ಪುಟಮಿಡಿದ ಪೊಂಬಣ್ಣ ವಸನಮನಲಂಕರಿಸಿ ।
ಲಟಪಟನೆಗೈದಪೆ ಪುರಕೆ ಭರತಗೀ ರಾಜ್ಯಾಧಿಪತ್ಯ ಕೈಸಾರಲೊಡನೆ ॥ (27)

ಕೊಡುವೆ ಮಣಿ ಧನ ಧೇನು ನಗರಾಧಿಪತ್ಯಗಳ ।
ಪೊಡವಿಯಧಿಪತಿ ಯುಗಾಗಸಾದೊಡಂ ನೀಂ ಬೇಳ್ಡ ।
ಸ ಶಗರದ ಮತಿಯನಾಂ ತಿಳಿದೆ ಶಪಥಂಗೈವೆ ಮನವಿಷ್ಟಮನ್ನೀಯದೆ ॥
ತಡೆಯ ಪತಿಯಿದಿರಿನೊಳಗಸುಗಳಂ ತೃಣಕೆಂತ ।
ಕಡೆಯೊನಲ್ಬಿಡುವೆನಿದು ನನ್ನಿ ಯೆಂದೆನಿಸಿ ಮುಂ ।
ಗಡೆಯ ನಿಟ್ಟುಸುತಿರ್ಪುದೆನುತ ಹಯಪತಿಯಾತ್ಮಭವೆ ಕೋಪನುನಳಾದಳು ॥

ತೊಡವುಗಳನೆಲ್ಲಮಂ ಪರಿದಿಟ್ಟು ಕಚ್ಚುರದ । (28)
ಉಡಿಗೆಯನ್ನುಟ್ಟು ಕೆದರಿದ ಕೇಶಪಾಶಗಳ ।
ಗುಡಿಗಟ್ಟ ಮುಖವಿಧುಂತಾದಗೆ ಕಾಣಿಕೆಯಿತ್ತ ತೆರದಿ ಕೋಪಾಗಾರಮಂ ॥
ತಡೆಯದೊಳಪೊಕ್ಕು ಪಾಸಿಗೆಯ ಪರಿದೀಢಾಡಿ ।
ಪೊಡವಿಗಭಿಮುಖವಿಟ್ಟು ಕೆಡುಕುತೊಡಲಂ ಕುಬ್ಜೆ ।
ಯೊಡನೆ ರೋಷಾವೇಶಕಲಿತವಾಕ್ಯಂಗಳಂ ನುಡಿವಳಾತ್ಮೋತ್ಸವವನು ॥ (29)

ಏನಾದೊಡಂ ಪಿಡಿದಕಾರ್ಯ ಕೈಸಾರದೇಂ ।
ನ್ಯೂನಮಪ್ಪಂತರಸ ಯೋಚಿಸಿದನಾದೊಡಿಂ ।
ದೀ ನೆಲದೊಳಸುವ ಪೊರೆಯೆನು ಬಿಡುವೆ ಪ್ರಾಣಗಳ ಸಾಧನದಿಗರ್ಪಿಸುವೆನು ॥
ಆನುಪಿಡಿ ದನರ್ಥಮಂ ಜಗುಳಸಲ್ಕೃಪತಿ ।
ತಾನಾದೊಡಂ ಬಂದರಳವೆ ಮಂದರ ಪಿಡಿವ ।
ಮಾನಮಂ ನಿಜಮನೋರಥಮಾದೊಡಲ್ಲದಾನುಳಯೆನಿದು ಶಪಥಮಬಲೆ ॥ (30)

ಕೊಳ್ಳೆನಾಹಾರಮನ್ನುದಕಮನ್ನಿಟ್ಟಸೆನು ।
ಬಳ್ಳುರಸ್ನಂಗಳಂ ತಂದಿಟ್ಟರಿಟ್ಟಸೆನು ।
ಒಳ್ಳಿತಹ ಸವಿನುಡಿಗಳಾಡಿ ಬೆಲ್ಲಸಲದಂ ಪತಿಕರಿಸೆನೆನುವನುಳಸೆ ॥
ತಳ್ಳಂಕಮಿಲ್ಲದಲೆ ಭರತಂಗೆ ರಾಜ್ಯನಾ
ಡೊಳ್ಳರಾಮಗೆ ವನಂ ಸಿದ್ಧಮಪ್ಪನ್ನ ಕ್ಕೆ ।
ಕೊಳ್ಳೆನೊಂದನು ಕುಬ್ಜೆ ಮನದರ್ಥಮಿದು ಪುಸಿಯ ನುಡಿಯ ಹಿತಕಾರಿಯೆ ಕೇಳು ॥ (31)

ಪಲವುಮಾತಿನ್ನೇನು ಸುತಗೆ ಸಿರಿಸಂಪದಂ ।
ಕಲಿತವಾಗುವುದು ರಾಘವಗೆ ವಿಪಿನಾವಾಸ ।
ಸಲಿಗೆಯುಪ್ಪಂತೆಸಗಿ ಸಂತೈಸಿದೊಡೆ ನೃಪತಿಯಾನು ಸಂತಸದಲಿ ॥
ನೆಲದಲಿಹೆನಲ್ಲದಿರಲಾತನಿದಿರೊಳಗಸುವ ।
ಲುಲಿತವೆಂದೆನಿಸಿ ಶಮನಿಲಯಮಂ ಸಾರುವೊಡೆ ।
ಫಲಿತಾರ್ಥವೆಂದು ತಿಳ ಇನ್ನಿದಕೆ ಪುಸಿಯುನುಳ ತಪ್ಪಲೆನ್ನಂ ನೀಂ ಪಳ । (32)

ಎಂದು ತನೊಳ್ ತಾನೆ ಯತಿರೋಷದಾವೇಶ ।
ದಿಂದ ಪಲ್ಮೊರೆದು ಭುಜಗಳನೊದರಿ ಕೋಪಶಿಖಿ ।
ಮುಂದುಮುದ್ಯೈ ತರಲ್ಲೊಡವ್ರಗಳ ತ್ರೋಟಕಂಗಳ ತಡೆಯುದೀಡಾಡಿ ನೆಲಕೆ ॥
ಬಂಧುರವ್ಯಾಪಾದವೆಸಗೆ ಕುದಿವುತಲಾಗ ।
ಮಂದರೆಯು ಮೊಗನೋಡುತೊರಗಿ ಭೂತಳದಲ್ಲಿ ।
ಯಿಂದೀವರಾಕ್ಷಿ ಶ್ರೀರಾಮ ಪುರವರಸಂಗೆ ಕೃತಕವುಂ ಯೋಚಿಸಿದಳು ॥ (33)

(ಸಂಧಿ 5, ಪದಗಳು 203.)

## ಆರನೆಯ ಸಂಧಿ.

ಸೂಚನೆ ॥ ವಾಗಿಷುಗಳಲ್ಲೀಶನಂ ವ್ಯಥಿಸಿ ನಿಜಪುತ್ರ ।
ಗಾಗುವಂದದಿ ಸಿರಿಯು ಬೇಡಿ ರಘುವಲ್ಲಭನ ।
ಬೇಗದಿಂದಾ ರಾಮನೆಡೆಗೆ ಕಳುಪಲ್ ಬೆಸನ ಕೇಳದಳ್ ಭರತಾಂಬಿಕೆ ॥

ನಗರಾಹ್ವನೊಜೆ ಕೇಳ್ ರಾಮಾಭಿಷೇಕಕಂ ।
ಒಗುಮಿಗೆಯು ಹರುಷದಿಂದನುಗೆಯ್ಯಲೆಂದು ನಿಜ ।
ಬಗೆಯು ಜನಕಪ್ಪಣೆಯನಿತ್ತು ಸುದ್ಧಾಂತಕಂ ನಡೆಯೆ ದಶರಥನೃಪಾಲಂ ॥
ನಗುವ ಗೃಹಶಾರಿಕೆಯು ನಲಿವ ಸೋಗೆಯು ಬಳಗ ।
ಮಿಗೆ ಸೊಬಗನಾಂತು ನರ್ತಿಸುವ ಪಾಂಚಾಲಿಕೆಗ ।
ಳಗಣಿತದಿ ನೋಡುತಾನಂದಮಯನಾಗುತ್ತಲೊಳಪೊಕ್ಕ ನಿಜನಿಳಯಮಂ ॥ (1)
ಒಂದೆಡೆಯುಲಾಡುತಿಹರೊಂದೆಡೆಯು ಪಾಡುತಿಹ ।
ರೊಂದಡೆಯು ಹಾಸ್ಯರಸಮೆಸಗುತಭಿನಂದಿಸುವ ।
ರೊಂದೆಡೆಯು ಗಿಳಿ ಮಯೂರಾದಿಗಳ ಜೀವತತಿಯಾಟಂಗಳತಿಸೊಗಯಿಸೆ ॥
ಬಂಧುರದ ವಿಭವಮಂ ನೋಡುತೊಳಪೊಕ್ಕನಾ ।
ನಂದದಿಂದಿಂದ್ರಭವನಕ್ಕೆ ಮಾರುವಡಿಯೆನಿಪ ।
ಮಂದಿರದಮಧ್ಯದೊಳಗಾತ್ಮೇಶಿಯಂ ಕಾಣದರಸುತ್ತೈತಂದ ನರಸ ॥ (2)
ಮೂಡಲಿಪ ಗಿಳಿಗಳಭಿವಾದಿಪ ಮಯೂರತತಿ ।
ಯಾದರಿಪ ಪುತ್ಥಳಿಗಳನುದಿನಂ ನಗಿಸುತಿಹ ।
ನಾದರದ ಕಾದಂಬ ಗೃಹಚಕ್ರವಾಕಗಳ ನಿಟ್ಟಿಸುತ ನಸುನಗುತಲಿ ॥
ಮೇದಿನೀಶನು ನಿಜಸತಿಯುನಾವೆಡೆಯೊಳಂ ।
ಭೇದಿಸುತ ಕಾಣದನುತಾಪದಿಂ ಮುಂದೆಸೆವ ।
ದಾದಿಯಂ ನೋಡಿ ಬೆಸಗೊಂಡ ಗಂಧರ್ವೇಶನಣುಗಿಯಿರವಂ ತವಕದಿ ॥ (3)

ಬರುವ ಸಮಯದಿ ಬೇಗ ಕರದಿ ಶಾವ್ರುಗೆವಿಡಿದು ।
ಕರಿಗಮನೆ ಕಡೆವಾಗಿಲಲ್ಲಿರ್ದು ವಿದ್ಯುವಿನ ।
ಕರಲಾಘವನ್ನಿತ್ತು ತಕ್ಕೈಸಿ ಕರದೊಯ್ದು ನಸುನಗೆಯು ಪಸರಿಸುತಲಿ ॥
ಭರದಿಂದ ಕುಳ್ಳಿರಿಸಿ ಮುಖನೇತ್ರಗಲ್ಲಗಳ ।
ನಿರದೆ ಚುಂಬಿಸಿ ಗುಟುಕ ತಾಂಬೂಲ ನೀವುತೀ ।
ಪರಿಯುಲುಪಚರಿಸಿ ಕಂಗೆಸೆಯುಳ್ಳಂ ಕತದೊಳೆಂದರಸ ತಾ ಬೆಸಗೊಳಲ್ಕೆ ॥ (4)
ದೇವಸಂವರ್ತದಕಟಾಟಂಕ ದುರುಕೋಪ ।
ಭಾವದಿಂ ತೊಡವುಗಳ ತೊಡಕಗಳನುಳದು ರಾ ।
ಜೀವಾಕ್ಷಿ ತಿರೆಯೊಳೊರಗಿರ್ಪಳಾರೊಡನಿದನ್ನುಸುರದಲೆ ಮೌನವಿಡಿದು ॥
ದೇವಿಯು ಮನೋರಥವ ತಿಳಯಲಾರಿಂಗಳವು ।
ಕೋವಿದಾಗ್ರೇಸರ ಭವತ್ಪಾದದರುಶನದ ।
ಲಾವದಿಂ ನಿಜಮನೋರಥವ ವಿಜ್ಞಾಪಿಸುವರೊಂದೆಣಿಕೆ ಮನಕ ಜೇಯು ॥ (5)
ಕ್ರೂರತರನಿರ್ಘಾತಪಾತವಿಂದದ್ರಿಯು ನಿ ।
ವಾರಮಪ್ಪಂತಧಿಕಮಪ್ರಿಯದ ನುಡಿಗಳಂ ।
ಧಾರುಣೀಪತಿಹೃದಯು ಮುರುಗಿತದನೇನೆಂಬೆ ಮಾರನ ಉದ್ರೇಕಜನವ ॥
ನಾರಿಯರ ಬಲೆಗೆ ಸಿಕ್ಕಿದ ಪುರುಷನತ್ಯಧಿಕ ।
ವೀರನಾದೊಡಂ ನೀರಿನಿಂ ಕನೀಯುನಸಪ್ಪ ।
ನೋರಂತೆ ನನ್ನಿಯೆಂಬುದಕರಸ ದೃಷ್ಟಾಂತವಾಗಿ ಮರುಳಾಗಿ ಸೋಲ್ದು ॥ (6)
ಬಂದುದೇಂಕತದಿ ಕೋಪಂ ದೋಷವಾರಿಂದ ।
ಪೊಂದಿತಪರಾಧವಾರಿಂದಾಯ್ತು ನಿಜಪ್ರಾಣ
ಕೆಂದಧಿಕಪೆನಿಪರಸ ಮುನಿದೊಡೆನ್ನಸುವೆಂತು ಸನುಮತಿಸಿ ಸುಖದೊಳಹುದು ॥
ಎಂದು ತನ್ನೊಳ್ ತಾನೆ ತೊಳಲುತಲಿ ಸತಿಯಿರ್ಪ ।
ಮಂದಿರವ ಸಾರಿ ಸ್ವರ್ಗಚ್ಯುತಾಪ್ಸರನಾರಿ ।
ಯುಂದದಿಂ ಭೂತಳದಿ ಪೊರಗಿರ್ಪ ವಾಹೀಕನಂದನೆಯು ಕಂಡನರಸ ॥ (7)
ಸಗ್ಗಿಗರ ಪಿರಿಯನೊಳ್ ಮುನಿದು ಭೂಮಿತಳಕೆ ।
ನುಗ್ಗಿದಳೊ ನುಡಿವೆಣ್ಣು ಬಿಡುಗಣ್ಣರರಸನಿಂ ।
ದೊಗ್ಗಡದ ಶಚಿಯೊ ಬಗ್ಗನಪ್ಪುಳದು ಬಾದೈಕೆಸ್ವೈಟ್ಸನಾಗಿಯೊ ನೋಡಲು ॥
ತಗ್ಗಿದುದೊ ಮುಗಿಲೊಡ್ಡನುಳದ ಪೊಸಮಿಂಚಿದೇ ।
ನುಗ್ಗಡದ ಶೌರಿಯರಸಿ ಯರಸಿಯೊ ಕಿನ್ನರಿಯೊ ।
ಅಗ್ಗಳದ ಚೆಲುವಾಂತ ಸತಿಯು ಕಾಣುತ ನೃಪಂ ಮೂದಲಿಸಲನುಗೈದನು ॥ (8)
ಮನಸಿಜನ ಮದದಾನೆ ಮತ್ಪ್ರಾಣವಲ್ಲಭೆಯೆ ।
ಕಿನಿಸಿದಾರಿಂದಾಯ್ತು ಮೃದುಲತರಮಾಲತಿಯು ।
ನಸುಸರಿಪ ತನುಲತೆಯು ತಪ್ತನಾಗಿಹುದಿದೇಂ ಕಾರಣದಿ ತೊಡವುಗಳನು ॥
ಸನುಮತಿಸದುಳವೇಕೆ ನೆಲದೊಳೊರಗಿಹೆ ಲೋಕ ।
ನಿನಗದೇನಪಕಾರವೆಸಗಿದರ್ ಪೇಳೆನ್ನ ।
ಘನಕಸೂಯಂ ಪುಟ್ಟ ಕೊರಗುವಂದದಿ ಮೌನವಿಡಿದಿರ್ಪ ಯಾತಕರಸಿ ॥ (9)

ಬಡವರಂ ಧನಿಕರಂ ಮಾಡೆಂದರುಂ ಮಾಳ್ಪೆ ।
ಪೊಡವಿಪತಿಯುಂ ನಿಸ್ವನೆನಿಪೆಂದರೆನಿಪೆ ಮುಂ ।
ಗಡೆಯು ಶಿಕ್ಷಿಪ ಮಹತ್ತ್ರಪರಾಧಿಗಳ ಸಲಹವೇಳ್ಕೆನಲ್ ಕಾಯ್ವೆ ವಿನಯು ॥
ನಡೆದಿರ್ಪನಾದೊಡಂ ಪೊಯ್ಯೆನಲ್ ಪೊಯ್ದ್ದಪೆ ।
ನುಡಿದೆರಡನಾಡೆನೆನ್ನಾಣೆ ಯೆನ್ನಯ ಪ್ರಾಣ ।
ದೊಡತಿಮನದಿಷ್ಟಮಂ ಬೇಡು ಕಾಡದೆ ಬರಿದೆ ಮೌನದುಃಖವನಾಳದೆ । (10)

ನವಶಿರೀಷದ ಕೋಶವನು ಪೋಲ್ವ ನಿಜತನುವ ।
ನವನಿಯೊಳಗೀಡಾಡಿ ಪಾಂಸುಸಂವಳಿತಮೆನೆ ।
ನವಕಿಸಾಲಸುಪಾಣಿಯಿಂದಾಸ್ಯಶಶಿಯನುಂ ಮುಚ್ಚಿ ಬೈಚಿಟ್ಟಳಾತ್ರಳಿ ॥
ಖವಣಿಗೊಳ್ಳಲದೇಕೆ ಬನ್ನವಂ ನಿಟ್ಟಿಸಲು ।
ಯುವತಿಯನ್ನಯ ಚಿತ್ತ್ರಮನುತಾಪವಾಂತಿಹುದು ।
ತವಕದಿಂದೆನ್ನನೆರೆದುಳುಹು ಬೇಡಿದುದೀವೆನಿದು ಸನ್ನಿ ಯರಸಿ ಸರಸಿ ॥ (11)

ತನು ಧನಂ ಜೀವನಂ ನೀನಲ್ಲದನ್ಯರಿಂ ।
ದೆನಗದಾರ್ ತೆತ್ತಿಗರು ನಿನಗಿಂದಧಿಕವೇನು ।
ಮನವೊಲಿವುದಂ ಬೆಸಸು ಮಾಡದುಪಹತಿಯೆನ್ನಸುಗಳನ್ನಂಡಲೆಯದೆ ॥
ಎನಿತಿಷ್ಟಮುಂಟದಂ ಕೈಗೈವೆ ಬೇಡು ನಿನ ।
ಗನುಮಾನವೇಕೆ ನಚ್ಚಿದವ ಚುಚ್ಚುವುದೇನು ।
ವನಜಾಕ್ಷಿ ಯಿತ್ತ್ರಮಾತಂ ತಪ್ಪೆ ನಿದನೊಪ್ಪೆ ಸುಖಿಯುಪ್ಪೆ ಕುಶಲನಪ್ಪೆ । (12)

ಜಗತಿಯೊಳು ವಿಷಯಲಂಪಟರಿಗೆ ವಿವೇಕಗಳು ।
ಸೊಗಯಿಸುವುದಾದು ಸ್ಮರವಶನಾದ ಬಳಿಕಾತ ।
ಗೊಗುಮಿಗೆಯು ಬುದ್ಧಿಯುಂ ಮಸುಳ್ವುದು ದುರ್ಯಶವನಾಂತಪುದು ತಾಂ ತಪ್ಪದು ॥
ಬಗೆಗಗೇಚೋರ ಕೃತ್ಯಗಳ ನೆಸಗಲಿಚ್ಛೈಪರೆ ।
ನಗಣಿತದ ದುಷ್ಕೃತ್ಯಗಳ ಮಾಳ್ಪುದನುದಿನಂ ।
ಬಗೆಬಗೆಯ ತೊಳಲಿಕೆಯನೊಪ್ಪದಿಹುದಿಷ್ಟಮೆನೆ ಕಾಮಿಗಳ ಹೃದಯಮಬಲೆ ॥

ಕೊಂಕಣಂ ಸೌವೀರ ಸೌರಾಷ್ಟ್ರಮಾಗಧಂ । [(13)
ತೆಂಕವಂಗಾಂಗ ಪ್ರಾಚೀನ ವತ್ಸಲ ನಿಷ್ಕ ।
ಳಂಕ ಕೋಸಲ ಕಾಶಿಯಾವ ಭೂಮಿತಳದೊಳು ವಿತಜಾವಿಕ ಧನವನು ॥
ಶಂಕಿಸದೆ ಕೊಟ್ಟಪೆನು ವೃದ್ಧಕರುಣಾಪಾತ್ರ ।
ಕಿಂಕರನೆನುತ್ತ ಮಮತೆಯೊಳುಂ ಭವತ್ಪಾಣಿ ।
ಪಂಕಜದೊಳೆನ್ನುರವ ನೋಲಿದೊರಸಿ ಕೃತಿಯೆನಿಪುದರಸಿ ಮೋಹನದ ಸರಸಿ ॥ (14)

ಮನುಮಥನ ವರನಾಗಿ ಮಮತೆವೆತ್ತೀಪರಿಯು ।
ಇನಿನುಡಿಯುಲುಪಚರಿಸುವಿನಿಯನಿರವಂ ನೋಡಿ ।
ವನಿತೆ ಕ್ರೂರತೆವೆತ್ತ ನುಡಿಗಳಿಂದಿಂತೆಂದಳೆದೆ ಝಲ್ಲು ಝಲ್ಲೆಂಬೊಲು
ಎನಗದಾರಿಂದಲಪಕಾರ ಗೃಹರೋಗಾದಿ ।
ಜನಿತದಾಯಾಸಮಿನಿತಿಲ್ಲ ಕೊಟ್ಟಪರ್ಪ ವರ ।
ಮನವನಂಡಲೆಯುತಿಹವಿದನರಿತು ಶಪಥದಿಂದುಸುರೆನಲ್ ಬಿನ್ನವಿಪೆನು ॥ (15)

ಮಡದಿಯಾಡಿದ ನುಡಿಯನಾಲಿಸುತ ಭುಲ್ಲವಿಸಿ ।
ಪಿಡಿದೆತ್ತಿ ಕುಳ್ಳಿರಿಸಿ ಕುಸ್ತರಿಸಿ ಕೂರ್ಮೆಯಿಂ ।
ಪೊಡವಿಪತಿ ಮಾತುತ್ತರವನಿತ್ತ ಕೇಳೆನ್ನಮನದನ್ನೆ ಜೀವಾತುವೆ ॥
ನಡೆಯರಿತು ಮಗುಳದಂ ಕೇಳ್ವಿಯಾದೊಡೆ ಪ್ರಾಣ
ದೊಡತಿ ನಿನಗಿಂದನ್ಯಮೇನುಂಟು ಧರ್ಮದಿಂ ।
ದುಡಿವ ಸುಕೃತದ ಮೇಲನಾಣೆಗೀಯದೆ ಮಾಣೆ ಬೇಳ್ವ ಕೇಳುವುದು ಜಾಣೆ ॥
ಜೀವನಕ್ಕಿಂದಧಿಕ ಮೆನಿಸುವಂ ಶ್ರೀರಾಮ । [(16)
ಭಾವಿಸಲ್ ನೀನರಿವೆ ಯಾ ಮಹಾಪುರುಷನಿಂ ।
ದಾವವಸ್ತುವು ಲಕ್ಷ್ಯಮೆನಿಸದಾತನ ಮೇಲನಾಣೆಯನ್ನಿಟ್ಟು ಬೇಳ್ವ ॥
ಈವಸುಧೆ ದನ ಜೀವ ಮುಂತಾದುದಂ ಕೇಳ ।
ಲೀವೆನಿದು ಪುಸಿಯಲ್ಲವೆನ್ನ ಕುಲದಧಿನಾಥ ।
ಪಾವನಾರುಣನಾಣೆ ಬೇಳು ಬಿಡದೆನ್ನಾಣೆ ಕಾಣೆ ನಿನಗನ್ಯಮನಿತ ॥ (17)
ಈಶನಾಡಿದ ನುಡಿಯ ಕೇಳ ನುಡಿದಳ್ ಭೃಂಗ ।
ಕೇಶಿ ಸುರ ಗಾಂಧರ್ವ ಯಕ್ಷಕಿನ್ನರರುಂ ಧ ।
ನೇಶ ರವಿ ಶಶಿ ತಾರೆ ಹರಿಹರ ಮಹಾಸುರಗ್ ವಿಧಿ ಭುವನ ಸಾಕ್ಷಿಯಾಗಿ ॥
ಆಶರಾಂತಕ ನುಡಿಯ ಕುರುಪಿಟ್ಟು ವರಗಳನು ।
ಮೋಶನೆಡೆಯೊಳಗಿತ್ತ ಕಥೆಯನುಂ ಸ್ಮರಿಸದಿಹೆ ।
ಈಶ ಮತ್ತವನಾನು ವಿಜ್ಞಾಪನಂಗೈವೆ ಸರ್ವರುಂ ನೋಡುತಿರಲು ॥ (18)
ಮೊದಲು ದೇವಾಸುರರ ಕದನಸಮಯದಿ ನಿನ್ನ ।
ಬದುಕಿಸಲ್ ಮುರಿದಚ್ಚಿಗಿತ್ತಾನು ಕರವಜಯ ।
ಪದವ ಸಾರಿಸಲದಕೆ ಮೆಚ್ಚಿ ವರಗಳನೆರಡನಿತ್ತೊಡವ ನಿನ್ನಲ್ಲಿಯೆ ॥
ಸದನಗೈದಿಟ್ಟರ್ಪೆನೀ ಸಮಯದೊಳಗದಂ ।
ಬೆದಕಲನುಗೈದೆ ಯೆನಗಿತ್ತ ವಸ್ತುಗಳೆರಡೆ ।
ಮುದದಿಂದಪಾಲಿಪುದುಮೂಲೋಕಮೆಚ್ಚುವೊಲ್ಮನದೊಲುಮೆಗಿಂ ಬೆರ್ಚುವೊಲ್ ॥
ನುಡಿಯ ಸತ್ಯಂಗೆಯ್ವುದನುಮಾನಮೆನಿಸಿದರೆ । [(19)
ಬಿಡುವೆನಸುಗಳ ತೃಣೋಪಮವಾಗಿ ಭವದೀಯ ।
ದಡಿಯೆಡೆಯಲೆಂದು ವಾಗ್ಬಂಧನಂಗೈದು ಮತ್ತಾಸುದರ್ಳಪ್ಪಾರ್ಥದಿರವ ॥
ತಡೆಯದೀ ರಾಘವಗೆ ಯುವರಾಜಪಟ್ಟಕಂ ।
ದೊಡನೆ ನೇಮಿಸಿದ ವಸ್ತುಗಳಲ್ಲಿ ಭರತಂಗೆ ।
ಪೊಡವಿಪತಿಗಳ ಮುಂದೆ ಯುವರಾಜಪಟ್ಟಾಭಿಷೇಕಮಂ ಮಾಳ್ಪುದೊಂದು ॥
ಚೀರವಸನಗಳುಟ್ಟು ಮುನಿಗಳಂವದ ವೇಷ । [(20)
ಧಾರುಣಿಯೊಳಂ ರಾಮ ಪದಿನಾಲ್ಕುವರುಷ ಸಂ ।
ಚಾರಮಟವೀದೇಶದಲ್ಲಿರ್ಪ ತೆರದೊಳಂ ಮಾಳ್ಪುದೆರಡನೆಯ ವರದಿ ॥
ಧೀರ ಕುಲ ಶೀಲ ಸತ್ಯವ ಸಲುಹ ಧರ್ಮಮು ।
ದ್ಧಾರಮಂ ಮಾಡಿ ನಿಖಿಳಾವನೀಪಾಲರೊಳು ।
ಚಾರುಕೀರ್ತಿಯ ಪಡೆವುದೆಂದು ಮನದಿಷ್ಟಹನೊರೆದಳತಿಲಜ್ಜೆದೊರೆದು ॥ (21)

ಗರವೆರೆದ ಗಾಳಿ ಸೋಂಕಲು ಜೀವಸಂದೋಹ ।
ಪರವಶವನೈದುವಂದದಿ ಸತಿಯ ದುರ್ವಾಕ್ಯ ।
ಶಿರವನಾಲಿಸಿ ಮಹಾರಾಜ ಮೂರ್ಛಾಕ್ರಾಂತನಾಗಿ ಚಿಂತಿಸಿದ ಮನದಿ ॥
ಕರಣವೈಕಾರಿಕವೊ ಕನಸೊ ನೆನಸಿನ ಭ್ರಮೆಯೊ ।
ಬರಲಿದೇಂ ಕಾರಣಮೆನುತ್ತ ಕಂಗಳ ತೆರೆದು ।
ಪುರಶವಿಹ ಪತ್ನಿಯಂ ನೋಡಿ ವ್ಯಾಘ್ರಿಯ ಕಂಡ ಮೃಗದಂತೆ ಕಳವಳಿಸಿದ॥ (22)
ಮನದೊಳಗೆ ತೊಳಲುತಂ ಮತ್ತೆ ನಿಟ್ಟುಸಿರ್ವಿಡುತ ।
ಕನಲಿ ಕಂಗಳ ಕೆದಂ ಕಾಂತೆಯಂ ನೋಡುತಂ ।
ಪುನರಪಿ ಮಹಾಮೋಹಮಂ ಪೊಂದಿ ಮೈಮರೆದು ಮತ್ತೆ ಸಂಜ್ಞೆಯನು ತಳೆದು ॥
ವನಿತೆಯಂ ಧಿಕ್ಕರಿಸಿ ಪಾಪೆ ಕುಲಪಾಂಸನೀ ।
ಮನುಜಾಧಿರಾಮನಿಂದೆನ್ನಿಂವ ಲಾದರುಂ ।
ನಿನಗದೇನಪಕಾರ ಬಂದಿಹುದು ದುರ್ಮೇಧೆ ದುರ್ವರಾಕಿನಿ ಮರಾತ್ಮೆ ॥ (23)
ಪಡುವೆ ರಾಜ್ಯವ ಧನವ ಕೌಸಲೆ ಸುಮಿತ್ರೆಯರ ।
ನುಡಿಯಲೆಮ್ಮನು ರಾಮಗಪ್ರಿಯವ ಸತ್ಯದಿಂ ।
ಪೊಡವಿಯಂ ಮೆಚ್ಚಿಸುವ ಪಿತೃಮಾತೃವತ್ಸಲಂ ಹರಿದಶ್ವನುದಯಿಸದಿರೆ ॥
ತಡೆಯ ಮಳೆ ಸಸ್ಯದಿ ಲೋಕವಸುಗಳನೆಂತು ।
ಪಿಡಿದಪರು ರಾಮನನ್ನರೆನಿಮಿಷ ಕಾಣದಿರ ।
ಕೊಡಲುಳಿವುದೆಂತು ಧರ್ಮಾತ್ಮನಿಂ ನಿನಗದೇನಪಕಾರಮಾಯ್ತು ಪೇಳ ॥ (24)
ಮಾತೆಗಿಂದಧಿಕತರಮಾಗಿ ಸೇವಿಪ ನಮಿಪ ।
ನೀತೆರವನೆನ್ನೊಡನೆ ಪೇಳುತಿಹೆಯನುದಿನಂ ।
ನೀತಿ ತಪ್ಪಿದುದೇನು ನಿಜನಾಶ ಕುಲನಾಶಕೆಂದು ನಿನ್ನಂ ತಂದುದು ॥
ಖ್ಯಾತಿವಂತಂ ಗುರು ವಿನೀತ ದಾಕ್ಷಿಣ್ಯಪರ ।
ನೀತಿಜ್ಞಶಾಂತಿದಾತಂ ಕೃತಜ್ಞಂ ಸತ್ಯ ।
ವಾತ್ಸಲ್ಯ ಲೋಕಸಮ್ಮತ ರಾಮನೆನ್ನಿಂತು ಕಳುಪುವೇಂ ಪೇರಡವಿಗೆ ॥ (25)
ಲೋಕಮಂ ಸತ್ಯದಿಂ ದೀನರಂ ದಾನದಿಂ ।
ಪ್ರಾಕಟದ ಶುಶ್ರೂಷೆಯಿಂ ಗುರುಗಳಂ ಶರಾ ।
ನೀಕದಿಂದರಿಗಳಂ ಗೆಲಿದಿರ್ಪ ನತಿದಯಾಪರ ಸಾಧುಜನಸೇವಕಂ ॥
ಈ ಕುಮಾರನನಡವಿಯೆಡೆಗೆಂತು ಕಳುಪುವೆಂ ।
ಶೋಕವನಿದೇಂಕತದಿ ತಂದಿಟ್ಟೆ ಪಾಪಿಷ್ಠೆ ।
ಲೋಕರೊಳ್ ಪೇಳ್ವೆನೇನಪರಾಧಮಾತನಿಂದಾಯಿತೆಂದು ದುಶ್ಚರಿತ್ರೆ ॥ (26)
ಭರತನಿಂದಧಿಕತರಮೆಂದೆಣಿಸು ರಾಮನಂ ।
ದುರುಳಬುದ್ಧಿಯದೇನು ಬಿಡು ಸಾಧುಮಾರ್ಗವನು ।
ಸರಿಸು ಪಿತೃಮಾತೆಯರ ಕುಲವೆನ್ನ ಕುಲಮನುಂ ಅಕಳಂಕಮೆನಿಸು ನಿನ್ನ ॥
ಚರಣಕೆರಗುವೆ ಕುವರನಂ ಕಾಯ್ದು ಕೀರ್ತಿಯಂ ।
ಪರಿಸೆಂದು ದೈನ್ಯನುಡಿಗಳಲಿ ಪೇಳದ ಪರಿಯ ।
ಭರತರದ ನುಡಿಗಳಂ ಧಿಕ್ಕರಿಸುತಿಂತೆಂದಳಾಗಳ್ಕೆಯನಂದನೆಯೊಲು ॥ (27)

ಮೊದಲಾನಿಲಿಂಪರೆಡೆಯೊಳ್ನಗುತ ಮರಮಿತ್ತು ।
ತುದಿಯೊಳನುತಾಪಗೊಳ್ಳುವುದಾವ ಮೋಘ ಯ ।
ಭ್ಯುದಯ ಗತಜಲಸೇತು ಬಂಧದಿಂ ಫಲಮದೇನಿಹುದನ್ಯತ್ರ ವಿಫಲಮಲ್ತೆ ॥
ಸದಯ ರಾಜರ್ಷಿಗಳ ಸಭೆಯೊಳ್ಗಂ ನೀನೆಂತು ।
ಪದುಳದಿಂ ಕುಳ್ಳಿರ್ದು ಧಾರ್ಮಿಕತ್ವಾದಿಗುಣ ।
ಸದನ ಜಯಸಿರಿಯ ಪೊಗಳಸಿಕೊಳ್ವುದೆಂತು ನಿಜಭಾಷೆಗೂಣಯಬಂದೊಡೆ ॥
ಧುರದೊಳಗೆ ಜೀವಮಂ ಪೊರೆಯಲೋಸುಗ ಸ್ಯೆಕೆ [(28)
ಗೊರೆದಿತ್ತು ಸುತನ ಮಾತುಳನೆಡೆಗೆ ಕಳುಪಿ ಬಂ ।
ಧುರದ ಸಿರಿಯಂ ಪಿರಿಯಸುತನಿಗರ್ಪಿಸಿ ಸುಖದಲಿರ್ಪ ಕೌಸಲ್ಯೆ ಸಹಿತ ॥
ಪಿರಿದು ಪೋದುದು ಸಮಯ ಧರ್ಮಜ್ಞನಾನೆನ್ನು ।
ತೊರೆದಪೆಯ ದೊರೆಗಳದಿರಿನಲಿ ಯೊಮರ್ಬುದ್ಧಿ ।
ದೊರಕಿತೇಂ ಕಾರಣದಿ ರಘುಕುಲಕೆ ಕೆಳ್ಳಿಪವ ತರಲುದಿತವಾಯಿತ್ತೆನುತ ॥ (29)
ನುಡಿದ ಭಾಷೆಗೆ ಪುಸಿಯು ಯಾಚನೆಗೆ ಸಂಕಟಂ ।
ಕೊಡುವೆಡೆಯೊಳಳಮನಂ ಮಾಡದ ತಿಧರ್ಮದಿಂ ।
ಪೊಡವಿಯಂ ಪಾಲಿಸಿದರಿಕ್ಷ್ವಾಕು ಸಂತತಿಯ ಲುದಿಸಿದರರಸುಗಳನುಸಯದಿ ॥
ಕಡೆಗೆ ಭೂಪಶ್ರೇಷ್ಠನವತರಿಸಿ ಸತ್ಯಮಂ ।
ಕೆಡಿಸಿ ಮಗುಳುತ್ತರವನಿತ್ತು ಸತ್ಕೀರ್ತಿಯಂ ।
ಪಡೆವೆನೆಂದೆಣಿಸಿರ್ಪೆ ಪಡೆದರೇ ಸುಕೃತಿಗಳ್ ಕೃತಿಗಳೊಡನಾಡಿದವರು ॥ (30)
ಸಮಯ ಮುಲ್ಲಂಘಿಪರೆ ಸಾಧುಗಳು ಲೋಕದೊಳು ।
ಸುಮನಸರ ಮುಂದಳರ್ಕಂ ನೇತ್ರವನ್ನಿತ್ತ ।
ಮಮತೆಯಿಂ ಶೈಬ್ಯ ಪಾರಾವತಕ್ಕೋಸುಗಂ ನಿಜಮಾಂಸವಿತ್ತುದರಿಯ ।
ಕ್ರಮದಿಂದಲುದಧಿ ಮರ್ಯಾದೆಯಂ ಮೀರದಿಹ ।
ಸಮಲಮತಿಗಳು ಸತ್ಯಕಾಣಯಂ ಪುಷ್ಟದೊಲು ।
ಸಮತೆಯಿಂದಿಹರದಂ ತಿಳಿದುತಿಳಿದೀಪರಿಯ ಭ್ರಮೆಯ ನಾಳುವರ ದೊರೆಯ ॥ (31)
ಪುಸಿಯಾಗಲದು ಸತ್ಯಮಾಗಲದು ಧರ್ಮ ಸಂ ।
ವಶಮಾಗಲನೃತಮಾಗಲಿ ಕೊಟ್ಟಭಾಷೆ ಗಂ ।
ನುಸುಳು ಜನಿಸದ ತೆರದಿ ಪಾಲಿಪುದು ಮೋಹದಿಂ ಜಾಗೆನಿಸದೀಕ್ಷಣದಲಿ ॥
ಪೊಸನಂಜನೆಂಜಲಿಸಿ ಪಾದದೆಡೆಯೊಳ್ ಕೆಡಪ ।
ದಸುಗಳುಳಿಸೆಂ ರಾಮಗಭಿಷೇಕಮಾದೊಡೀ ।
ವಸುಮತಿಯಲರೆನಿಮಿಷ ಜೀವದಿಂದಿರೆನಿದಕೆ ಪುಸಿಯಿಲ್ಲ ರಸೆಯರಸನೆ॥ (32)
ಅರಸು ಶ್ರನೆನಣುಗಗಾಗಲ್ನೋಡಿ ಕೌಸಲ್ಯೆ ।
ಹರುಷದಿಂ ಹಿಗ್ಗುತಿರಲಾಕೆಯಿದರೊಳಗಾನು ।
ಕರಗಳಂ ಮುಗಿಯುತಲಿ ಬಾಳ್ವುದದರಿಂ ಮೃತಿಯೆ ಕುಶಲಮಿದು ಸತ್ಯಮೆನಗೆ ॥
ತರಣಿ ಭರತನ ಮೇಲನಾಣೆ ರಾಮನ ವಿಪಿನ ।
ಕರುಗಿಸದೆ ಮಮತೆಯಿಂ ಕೊಟ್ಟಭಾಷೆಗೆ ತಪ್ಪೆ ।
ಪೊರೆಯೆನಸುವಂ ಧರಾವಲಯದೊಳ್ ಸತ್ಕೀರ್ತಿ ಸ್ಫೂರ್ತಿಯಪ್ಪಂತೆಸಗುವೆಂ ॥ (33)

ಉರದಿರಿಸಿ ಭೂಷಣಾವಳಿಗಳನಿತಿತ್ತೊಡಂ ।
ಕುಪಿತ್ರದಿಂ ಧಿಕ್ಕರಿಸಲಾನೊಡಂಬಡೆ ರಾಮ ।
ವಿಪಿನಮಂ ಸಾರ್ವನ್ನ ಸತ್ಯಮಿದು ಮದ್ವಾಕ್ಯ ಮರಳ ನಾಂ ಪೇಳ್ವುದಿಲ್ಲ ॥
ಶಪಥಮೆಂದೊರೆದು ಮೌನದೊಳಿರ್ದ ಸತಿಯಿರವ ।
ನೃಪಲಲಾಮಂ ನೋಡಿ ವ್ಯಥಿತಮಾನಸನಾಗಿ ।
ತಪಿಸುತಿಂತೆಂದ ನಿಟ್ಟುಸಿರ್ವಿಡುತ ಧಿಕ್ಕರಿಸಿ ವಿನಯಾನತಿದೈನ್ಯತರದಿ ॥ (34)
ಅತಿಕ್ರೂರತರವೃತ್ತಿ ಯಾರಿಂದಲುಪದೇಶ ।
ಹಿತಮಿದೆಂದರಿವೆಂತು ಭರತಂಗೆ ರಾಜ್ಯಮಂ ।
ಪತಿಕರಿಸಿ ರಾಮನಂ ಕಾನನಕೆ ಕಳುಪೆಂದು ಪೇಳೆ ಮನ ಬಂದುದೆಂತು ॥
ಮತಿಯ ವಿಕಳತೆಯೊ ಗರಸೋಂಕಿದುದೊ ದುರ್ಮೇಧೆ ।
ಧೃತಿಯೊಳಂ ನಿರ್ಲಜ್ಜೆಯಾಂತೆಂತು ಭಾಷಿಸುವೆ ।
ಕ್ಷಿತಿಯೊಳೀ ದುರ್ವಚನ ಮಾರೊಡಂಬಟ್ಟಪರು ಪಾಪಿಷ್ಠೆ ಕುಲಪಾಂಸಿನಿ ॥ (35)
ಅರಿಯಾದಾದೆನು ಕುಲವಿನಾಶಿಯೆಂಬುದ ಮುನ್ನ ।
ತರುವೆಡೆಯ ಮತ್ಕೃತಿಯ ಮದ್ಭಾಗ್ಯಮುಯ್ಯಾಯ್ತು ।
ತೊರೆವುದೀ ದುರ್ವಿಷಮತರವಾದ ವಾಣಿಯಂ ರಾಮನಿಂದಧಿಕ ಭರತ ॥
ಧರೆಯನಾಳಲಿ ಗಹನಕೇಂ ನಿಮಿತ್ತದಿ ರಾಮ ।
ನರುಗಿಸೆಂದೊರೆವೆಯಾತನ ಕಳುಪಲೀ ಲೋಕ ।
ಹರುಷಿಪರದೆಂತು ಕೇಳದರಿಗುತ್ತರಮೆಂತು ಪೇಳುತೊಡಬಡಿವೆ ಜನರ ॥ (36)
ಬಂದಿಹರನೇಕಭೂಮಿಶಬಾಂಧವನಿಚಯ ।
ಬಂಧುರದ ಹರುಷದಿಂದವರೆಡೆಯ ಸುತನಿಗಾ ।
ನಂದದಿಂ ಯುವರಾಜಪಟ್ಟಮಂ ಕಟ್ಟುವಗೆ ನಿಶ್ಚೈಸಿ ಪೇಳ ಮಗುಳ್ ॥
ದಂದುಗಕ್ಕೊಳಗಾಗಿ ಸುತನ ವಿಪಿನಕೆ ಕಳುಪ ।
ತೆಂದಪರದೇನು ಮಜ್ಜೀವನವು ಚಿರಕಾಲ ।
ದಿಂದಿರ್ದು ವಿಫಲ ಮಾಯ್ತೆಂದು ಮತ್ತಾಸಭೆಗೊಳೇನೆಂದು ಕುಳ್ಳಿರ್ದಪೆ ॥ (37)
ಆಲಯದೊಳುಳ್ಳಮರಧೇನುವಂ ಕಾನನಕೆ ।
ಚಾಲನಂಗೈದು ನಾಲ್ದೆಸೆಗೆ ಬಾಯ್ಬಿಡುವನೋಲ್ ।
ಬಾಲಿಶಂ ಪಂಕ್ತಿರಥ ಸರ್ವಗುಣನಿಲಯ ರಿಪುವಿಲಯನಂ ಕಳುಪಿ ವನಕೆ ॥
ಬಾಲ್ಯಾದಿವೃದ್ಧತೆಯೊಳಂ ಬುದ್ಧಿಯಿಂ ಪುರುಷ ।
ಪಾಲಿಸಿದನೆಂತು ಮೇದಿನಿಯನೆಂದಸುಗಳ್ ।
ಜಾಲವಾಡಿದರದಕುತ್ತರಮನೇ ನೀವೆ ಸ್ತ್ರೀವಶತೆ ಪಡೆದ ಚಾಲ್ಮ ॥ (38)
ಸಕಲಸದ್ಗುಣನಿಲಯ ಜಾನಕೀಜಾನಿಯ ।
ನ್ನಕಳಂಕ ಪೂರುಷನ ನಚ್ಚಲೇಂ ಕಷ್ಟಮಂ ।
ದಖಿಲಭುವನೇಶರುಂ ಬೆಸಗೊಳಲ್ಕಂ ಮುನ್ನ ಕೈಕೆಗಂ ವರಮಿತ್ತೆನು ॥
ಪ್ರಕಟ ಸತ್ಯಕೆ ತಪ್ಪ ಬಾರದೆಚ್ನತರಣ್ಯ ।
ನಿಕಟಕಂ ಕಳುಪಿದೆನೆನುತ್ತೊರೆಯಲಾ ನುಡಿಗ ।
ಳಕಮೆನಿಪುದದು ಸತ್ಯಮಾಗದಪಹಾಸಕ್ಕೆ ಬೀಜಮಹುದೇನೆಂಬೆನು ॥ (39)

ಸತಿಯಂತೆ ಸಖಿಯಂತೆ ದಾಸಿಯಂತರಸಿಯುಂ ।
ತತಿಶಯಾದ ಭಗಿನಿ ಮಾತೆಯ ತೆರದೊಳನುದಿನಂ ।
ಹಿತವ ನಾಚರಿಪ ಕೌಸಲ್ಯೆಗಾನಪ್ರಿಯವನೆಸಗೆ ನಿನಗೋಸುಗದಲಿ ॥
ಸುತನ ನಟುವಿಗೆ ಕಳುಪಿ ಕೃತಕವನ್ನೆಸಗಿ ನಿಜ ।
ಕೃತಕೃತ್ಯನಂತೆಸಂಭಾವಣೆಂಗೈವೆ ನಾ ।
ಸತಿಯ ಮುಖವೇನೆಂದು ನೋಳ್ಪೆ ವಿಪರೀತಕರದುಃಖ ನಿರವಧಿಯಬಾಧಿಯ ॥

ನಿನ್ನೊಳನುರಾಗ ವೆಗ್ಗಳಿಸಿ ಮೋಸಕೆ ಸಿಕ್ಕ । [(40)
ಮನ್ನಿಸದೆ ಕೌಸಲ್ಯೆಯನು ಪೆರತಿಯೆಂದೆಣಿಸಿ ।
. . . . . . . . . . ॥
ಬನ್ನಬಡಿಸುತ್ತಲಿರ್ದಳಾ ಸಮಯದೊಳಗಣಾಗ
ನನ್ನುಮಟುವಿಗೆ ಕಳುಪಿ ಮಗುಳಾನು ತನ್ಮುಖವ ।
ನಿನ್ನೆಂತು ನೋಡುವೆಂ ಕೇಳಲೇಂ ಪೇಳುವೆಂ ದುಷ್ಕೃತಿ ಯನರ್ಥಕಾರಿ ॥ (41)

ಸುತವರಗೆ ಕಾನನಕೆ ಕೋಸಲಾಧಿಪತನುಜೆ ।
ಪತನಗೈದಪಳೆಸುವ ವೈದೇಹಿಪತಿಯುಳದು ।
ಕ್ಷಿತಿಯೊಳರೆನಿಮಿಷಮಿರ್ದಪಳೆ ಯಥಾವಿಧವನ್ನು ನೋಡುತಾಂ ತನುವಿಡಿವೆನೆ
ಮತಿಹೀನೆ ಪ್ರಿಯನ ಪೋಗಾಡಿ ನೀ ಸಂಪದವ ।
ಪತಿಗೊಳಸಲಿಚ್ಛೈಸಿ ಪಡೆದಪೆಯದೇನು ಸ ।
ದ್ಗತಿಯ ಜೀವವಕೊಳುವ ನೇಣಹಿತವೆಂದರಿದ ತೆರನಾಯಿತನರ್ಥಕಾರಿ ॥ (42)

ಕುಂಭಿನಿಗೆ ಜೀವನಾಸ್ಪದವೆನಿಪ ಶುಭ್ರಾಂಶು ।
ಬಿಂಬವದನನೆ ಸುತನ ನೋಡಿಸಲು ಲೋಕಪ ।
ನ್ನೆಂಬರತಿಬಾಲಿಕಂ ಮತಿಹೀನ ದುರ್ವಿಷಯವಶನಾಗಿ ಪ್ರತಿಭೆಪೋಗಿ ।
ಅಂಬುಜಾಂಬಕೆ ಕೈಕೆಗಾಳಾದನೆಸ್ನತ ವಿ ।
ಡಂಬನಂಗೆಯ್ವುದುಳದಪರೆ ಧಾರುಣಿಯನ್ನು ।
ಕೊಂಬ ಬಾಡಬನ ಥಿಕ್ಕೆಂಪಂತೆ ತ್ರಿಭುವನೀಜಾತನೇಕಾಪ್ತವಾಂತ ॥ (43)

ಬಂದುದಂತದ ಕಾಣದೀ ಮನೋವ್ಯಥೆ ಲೋಕ ।
ಬಂಧುವಿನ ಕುಲಕೆ ದುಷ್ಕೀರ್ತಿ ಯಮುನಂದನೆಯ ।
ತಂದು ಮನೆಯೊಳಗಿಟ್ಟು ಸುಖಿಯಪ್ಪೆನೆಂದೆಣಿಸಿ ಭ್ರಾಂತಿಯಿಂ ಮರುಳುಗೊಂಡು ॥
ಮುಂದೆಸೆವ ನೀಲಪನ್ನಗನ ಪೀಲನಗೈವೆ ।
ನೆಂದು ಕರದಿಂ ಪಿಡಿದ ಬಾಲನಂತಾಯಿತು ಯೆನ ।
ಗಿಂದು ಪೂರ್ವಾರ್ಜಿತದ ದುಷ್ಕರ್ಮ ನಾಂಗದಿಂದಡಸಿತು ಭವದೂಪದಿ ॥ (44)

ಕಾಮುಕಂ ದುರ್ವ್ಯಸನಿ ಕಾಪುರುಷ ಪೆಂಡತಿಯ ।
ಪ್ರೇಮಮಂ ಗಳಸುವರೆ ಸಮ್ಮಹಾರಾಮನಾ ।
ರಾಮನೆಸ್ಸೃದ ದುರ್ಮನೀಷಿ ಬಮಕಿದನೆಂತು ಚಿರಕಾಲವೆಂದು ಜನರು ॥
ಸೀಮೆಯೊಳಗಾಡದುಳ್ಳವರೆ ಮದ್ವಂಶಭವ ।

ಹಿತಮಹಿತ ಮೆಂದರಿಯದಾವದಾನುಸುರಿದೊಡೆ ।
ಪತಿಕರಿಸಿ ಮಸ್ತಕದೊಳಾಂತು ಪೂಜಿಸುವ ನೀ ।
ಸುತನ ಸದ್ಧರ್ಮರೂಪನನೆಂತು ತೊರೆದಪೆಂ ಜೀವಮೆಂತುಳವುದೆನಗೆ ॥
ಪ್ರಥಿತಸಾಧುಗಳೆನ್ನ ನೆಣಿಪರಗ್ಗದ ಮಹೀ ।
ಪತಿಗಳೆಡೆಯೊಳಗೆಂತು ಜಸಮಪ್ಪುದಾರ್ಯಜನಂ ।
ಗತಿಯು ಬಿಟ್ಟೀ ನೆಲದೊಳರ್ದೇನುಫಲ ಮೂಢೆ ದುರ್ವಿನೀತಗಳನಾಡೆ ॥ (46)

ಕೌಸಲೆ ಸುಮಿತ್ರೆ ಜಾನಕಿ ರಾಮ ಲಕ್ಷ್ಮಣರ
ಪೌಂಸಲಾಗ್ರ ಕೀರ್ತಿಯುಮು ಪೊಂದಿದ ಜನಪ್ರ ।
ಕಂಸಮನ್ನುಳಿಸಿ ಸುತನಸುತ ರಾಜ್ಯವನಾಳ್ವರೆಚ್ಛೈಪೆ ದುರ್ವಿವೇಕ ॥
ರಂಶೆಯಂತೊಡಬಟ್ಟರಾಜಸುತೆಯೆನ್ನುತರಿ ।
ರಂಸೆಯಿಂ ಭ್ರಮೆಗೊಂಡು ಕೈವಿಡಿಮ ಕಡೆಯೊಳತಿ ।
ಹಿಂಸೆಗೊಳಗಾದೆ ಕೈಕಯವಂಶಪಾಂಸಿನಿ ಕೃತಘ್ನಿ ಕಪಟದ ಮಂದಿರೆ ॥ (47)

ಭರತ ನಿನ್ನಯ ನುಡಿಯನೊಪ್ಪಿ ರಾಜ್ಯವನಾಳ್ವ ।
ಹರುಷಕೊಡಬಟ್ಟನಾದೊಡೆ ಗತಾಯುಷ ಪಿತ್ರಗೆ ।
ಪರಕೃತ್ಯಮನ್ನೆಸಗಬೇಡ ಪಾಪಿಯು ಕೂಡದಿರಲು ಪ್ರಿಯನೆನಗೆ ನೋಡ ॥
ಕರುಣಮೆಳ್ಳನಿತಿಲ್ಲ ವಿನಯನಂ ಪೋಗಾಡಿ ।
ಧರೆಯು ಪಾಳಿಪೆನೆಂಬೆ ಯಿಕ್ಷ್ವಾಕುಸಂತತಿಯು ।
ತರಿಯುತೆಳೆಸುವೆ ವಿಧವೆಯರು ಸ್ವೈರಿಪರಧಿಕತರಕ್ರೂರಮಶ್ಚರಿತೆಯಂ ॥ (48)

ಶಿಬಿಕಾಧಿರೋಹಣದಿ ಪಾರಣದ ಮಸ್ತಕದಿ ।
ವಿಬುಧಹಯಮಂ ಪೋಲ್ವ ಘೋಟಕದಿ ದಿವ್ಯರಥ ।
ವಿಭವದಿಂ ಸಂಚರಿಪ ತಳರಡಿಯು ತಂಗದಿರಮುಖದ ಮೃದುತರಮೂರ್ತಿಯು ॥
ಸಭಯು ಕಂಟಕ ವೃಷತ್ತ್ರರದ ಪಂಥಾನದೊಳ ।
ಗಬುಜಾಕ್ಷನೆಂತು ಸಂಚರಿಪನೀ ದುರ್ಬುದ್ಧಿ ।
ಲಭಿಸಿತೆಂತಮರನಿಭಸಮ್ಯಗಾಕಾರನ ನೀಂ ಕಳುಪೆಂಬೆ ಕ್ರೂರೆ ಮೂಢೆ ॥ (49)

ಚಾರುತರ ಷಡ್ರಸೋಪೇತ ಮೃಷ್ಟಾನ್ನಮ ।
ನ್ನೋರಂತಶಂಪೂರ್ವಮೆನೆ ಸೂಪರೆಡೆಮಾಡು ।
ತಾಗೆಂಗಗಣೆಯು ಸಮಯಮಂ ನೋಳ್ಪರಾಣ್ಮಸಾದನುದಿನಂ ಪ್ರೀತಿಯಿಂದೆ ॥
ಆರಾಮದೊಳ್ ತಿಕ್ತಕಟುಕಷಾಯಕವ ನಾ ।
ಹಾರಮಂ ಕೊಂಬ ದಿವ್ಯಾಂಬರಾಲಂಕೃತಂ ।
ಚೀರವಸನವೆಳೆಂತು ದಿನಗಳೆವ ಸುಕುಮಾರ ಮಾರಸನ್ನಿಭಶರೀರ ॥ (50)

ಪರರ ದೋಷಮನೆಣಿಸ ಮರೆವ ನಪರಾಧಗಳ ।
ಪೆರರ ಗುಣವಂ ನುತಿಪ ಪೊಗಳದೊಡೆ ನಾಣ್ಚುತಿಹ ।
ಪರಿಕಿಪೊಡೆ ಸರ್ವಜೀವನದಯಾಪರ ಲೋಕಕಾಂತ ನಿಕ್ಷ್ವಾಕುಕಾಂತ ॥
ವರಧರ್ಮರೂಪನಂ ಕಾನನಕೆ ಕಳುಪೆನ್ನು ।
ತೊರೆವ ನಾಲಗೆ ಶತಚ್ಛಿದ್ರಮಾಗದೆ ಮಹಾ ।
ನರಕ ನಿನಗಲ್ಲದೇಂ ಸುಖಮಹುದೆ ದುರ್ಮೇಧೆ ಕೇಕಯಾನ್ವಯ ಪಠಾಕೆ ॥ (51)

ಮುಂದು ಸುಂಗುವ ಕಾಳರಾತ್ರಿಯಂ ಸತಿಯೆಂದು ।
ಹರುಷದಿಂ ನಿಳಯದೊಳಗಿಟ್ಟು ಕಾತರವಟ್ಟು ।
ತೆರಳ ಮನೆಗಟ್ಟೆ ಪೊರವಂಜು ಬರೆ ಮುಂಗಾಣದಲೆಸಿಕ್ಕಿ ಕೆಡೆವಂದದಿ ॥
ದೊರೆದುದು ಸ್ವಯಂಕೃತಂ ಶರೀರಪತನಕೆ ಮೂಲ ।
ಕರವಾಗಿ ಗಾನಸುಖಕರಿಯದೇಣವು ಸೋಲ್ದು ।
ಬೆರೆಸಾರದಲೆ ಸೊಕ್ಕುತಸುವ ನೀಗುವ ತೆರದಲೇಂ ಪೇಳ್ವೆಮತಿಯು ಗತಿಯು ॥(52)
ಪದವಿ ಭರತಂಗಾಗಲೆನಗಿಪ್ಪ ರಾಮ ತಾಂ ।
ಪದುಳದಿಂ ನಿಜಗೃಹದೊಳಿರಲಿ ಮಜ್ಜೀವನವ ।
ಸದಯಹೃದಯದಿ ಕಾಯ್ದು ಜಸಗಳಸುಪೊಡೆ ನುಡಿಯ ನಂಗೀಕರಿಪುದು ॥
ಸುದತಿ ಕರಗಳ ಮುಗಿದು ಚರಣಕೆರಗುವೆ ಸೆರೆದ ।
ಬುಧರೆಡೆಯುಲೆನ್ನ ಕುಲ ಭವದೀಯ ವಂಶಕ ।
ಭ್ಯುದಯಮಪ್ಪಂತೆ ಪಾಲಿಸೆ ಮುಂತೆ ಮೂಲೋಕ ಮೆಚ್ಚುಗು ಮಹೇಶನಂತೆ ॥ (53)
ಕಾಮಿನೀವಶನಾದನಾವನಾಗಲಿ ಮನೋ ।
ಭ್ರಾಮಕತ್ವದಿ ತೊಳಲಿ ಲಘಿಮನಪ್ಪಂತೆನ್ನ ।
ನಾಮಕೂಣಯಮಪ್ಪುದಿದು ತಪ್ಪದಖಿಳಾಮರೇಶನಪ್ಪಂಗಾಗಲಿ ॥
ಈ ಮಹೀಜಂತುಗಳಗೇಂ ಸ್ವತಂತ್ರವು ಕರ್ಮ ।
ದಾಮದೊಳ್ಬಂಧಿಸಿಯೆ ಸುಖದುಃಖದನುಭವವ ।
ರಾಮಪುರದರಗನೆಸಗುವನರಿಯದೀ ಪಿಥವ ಸೆರಳುವರಸೇಕವರಿಯು ॥ (54)

(ಸಂಧಿ ೬, ಪದ 257.)

## ಏಳನೆಯ ಸಂಧಿ-

ಸೂಚನೆ॥ ಧರ್ಮಾಪವಾದಕರತರದುಷ್ಟನುಡಿಗಳಂ ।
ಮರ್ಮಭೇದನಗೈದು ಕೇಕಯಾತ್ಮಜೆ ಪತಿಯ ।
ಶರ್ಮಗೊಡದಲೆ ರಾತ್ರಿಯಾಮ ಪರಿಹರಿತ್ರಮೆನಿಸಿದಳ್ ಮತ್ಸರದೊಳು ॥
ಮನದನ್ನೆ ಕೇಳ್ಚರಣಕೆರಗಿದಿನಿಯನ ನೋಡು ।
ತಿನಿಸು ಕರುಣಂ ಪುಟ್ಟದತಿಕ್ರೂರತರವಾದ ।
ವಿನಯವರ್ಜಿತಭಾಷೆಯಿಂದ ಧಿಕ್ಕೃತಿಗೈದಳೇನೆಂಬೆ ಡಾಕಿವಿಯೊಲು ॥
ಘನಕಲಚ್ಚೆಯು ಭೀತಿಯುಳದ ಮಾನಿನಿಯುರಿಗೆ ।
ವನಧಿಮೇಖಲೆಯೊಳದಿರೇನಹುದು ಧರ್ಮಜ್ಞೆ ।
ಜನಪನ ತೃಣೋಪಮಿತವಾಗಿ ಕಂಡಳದೇನ ಪೇಳ್ವುದುಚ್ಚಾವಚವನು ॥ (1)
ಮುಗುಳೆದುರ್ವಚನ ಮನ್ನುಚ್ಚರಿಪ ಮಾನಿನಿಯ ।
ಮೊಗವನೋಡುತ ಕ್ರೋಧ ಬೆರ್ಚುತಾ ಜನನಾಥ ।
ಪೊಗೆಸುತ್ತಿದುರಿಯಂತೆ ಕನಲಿ ಕಿಡಿಗಳ ಸುಗುಳ ಕಂಗಳಂ ಮರಳನುಡಿದ ॥
ಸುಗುಣ ಸತ್ಯವ್ರತ ಸದಾಚಾರನೀತಿಪರ ।
ನಗಣಿತ ಗುಣಾಢ್ಯನಮಿತಾಹ್ಲಾದಕರನಾದ ।
ಮಗನ ನಾರಣ್ಯಕೆಂತು ಕಳುಪುವೆ ಪಾಪಿ ದುಷ್ಕೃತಮನೇನನೆಸೆದೆ ॥ (2)

ಚಿರಕಾಲ ಸುತರಿಲ್ಲದಲಿ ತೊಳಲಿ ಬಳಲುತಂ ।
ಪರಿಪರಿಯ ಯಾಗಪೂಜಾವಿಧಾನಗಳಿಂದ ।
ಸುರರ ಮೆಚ್ಚಿಸಿ ಪಡೆದೆ ಸುಗುಣರತ್ನಾಕರನ ಕುವಲಯಾನಂದಕರನ ॥
ಪರಮಪುರುಷನ ಜಿತಕ್ರೋಧನ ಜಿತೇಂದ್ರಿಯನ ।
ಸರಸಿಜಾಕ್ಷನ ಶೂರ ಕೃತವಿದ್ಯ ಸುವ್ರತನ ।
ಹರಿನೀಲನಿಭಶರೀರನ ನೆಂತು ಕಳುಪುವೆಂ ದಂಡಕಾವಿಪಿನದೆಡೆಗೆ ॥ (3)

ನೀಲಮೇಘಶ್ಯಾಮ ರಾಮನಭಿರಾಮನಂ ।
ಕಾಲಕಂಧರಧನುರ್ಭಂಗ ನುತ್ತುಂಗನಂ ।
ಲಾಲಿತಾಮರಧರಾಮರನಿಕರಪೂಜ್ಯನಂ ದುರ್ವಿನೀತತ್ಯಾಜ್ಯನಂ ॥
ಬಾಲಪ್ರವಾಳಪದ ನಿಖಿಲಸೌಖ್ಯಾಸ್ಪದ ವಿ ।
ಶಾಲಾಕ್ಷ ನೌದಾರ್ಯದಕ್ಷ ಬುಧಲಕ್ಷನಂ ।
ಬಾಲಿಶೆ ದುರಾತ್ಮೆ ಕಾನನಕೆಂತು ಕಳಪುವೆಂ ಸರ್ವಾಪದಂಗಳೆಡೆಗೆ ॥ (4)

ಹುಸಿ ಕ್ರೂರ ಕಾಠಿಣ್ಯ ಕಪಟ ವಂಚನೆ ಮಾಯೆ ।
ನುಸುಳು ನಿರ್ದಯ ಪಾಪ ಮಶುಚಿ ಸ್ವಾರ್ಥಪರತ್ವ ।
ರಸೆಯೊಳಗಂ ನಾರಿಯರ ಕುಲದಲವತರಿಸಿರ್ಪುವೆಂಬುದದು ಲೋಕವಾದ ॥
ಅಸಮಸಾಹಸ ನೃಶಂಸತೆ ದುಷ್ಟಚಾರಿತ್ರ ।
ಪಸರ ಸೀನೆಂದರಿಯದಾದೆ ಮೋಸಕೆ ಸಿಲ್ಕಿ ।
ಬಸಿಲದೊರೆಯೊಳ್ ತೃಷೆಯ ಕಳೆಯಲಾಪೇಕ್ಷಿಸಿದ ಹರಿಣದಂತಾದೆ ಯಾಕಟ ॥ (5)

ಇಂತಮಿತದುಃಖಸಂತಾಪದಿಂ ಭೂಪನತಿ ।
ಚಿಂತಿಸುತ್ತಿರಲತ್ತಲರವಿಂದ ಬಾಂಧವ ನ ।
ನಂತಪದವಿನ್ಯಾಸದಿಂದಲಸಿ ಪಶ್ಚಿಮದ ಶಿಖರಿಯೊಳ್ ವಿಶ್ರಮಿಸಲು ॥
ಕಾಂತೆಯ ದುರಾರಾಧ್ಯತೆಯ ನೋಡಬಾರದಿ ।
ಸ್ವಾಂತೆನುತಪಾಂಸುಲೆಯ ತೆರದೊಳಾರಾಜೀವ ।
ಸಂತೆ ಕಂಗಳ ಮುಗಿದವಲ್ಲಿ ನಿಟ್ಟುಪಗೆ ಸಾಧುಗಳು ದುಷ್ಕೃತಿಗಳ ॥ (6)

ಕತ್ತಲೆಯ ನೀಲಪಟಮುಟ್ಟು ನಕ್ಷತ್ರಗಳ ।
ಮೊತ್ತದ ವರಾಟಮಾಲಿಕೆಯ ಗಳದೊಳಗಿಟ್ಟು ।
ಮತ್ತೆ ಶೋಕಯುತನುಜೆಯುಪಯಶಂ ಲೋಕಮಂ ಮುಚ್ಚಿದೊಲ್ನಾಲ್ದೆಸೆಯನು ॥
ಕತ್ತಲಾವರಿಸಿ ಬಟೆ ಕಂಡು ಮರುಗುತಲಾ ನೃ ।
ಪೋತ್ತಮಂ ಬಾನೆಡೆಯಲಿಟ್ಟು ನಿಜದಿಟ್ಟಿಗಳ ।
ಮತ್ತೆ ಸಂಪ್ರಾರ್ಥಿಸಿದ ನಿರುಳೆಂಬ ದೇವತೆಯ ನಿರುತವಿಹುದಗಲದೆಂದು ॥ (7)

ನಿಬಿಡತರಹೃದಯವ್ಯಾಕುಲದಿಂದಲವನೀಶ ।
ನಬಲೆಯನ್ನೀಕ್ಷಿಸುತ ಮತ್ತೆ ಕರಗಳ ಮುಗಿದು ।
ತಬುಬಾಕ್ಷಿಯನು ಬಹುವಿಧದಪ್ರಾರ್ಥನೆಗೈದ ದೈನ್ಯಪ್ರಲಾಪದಿಂದ ॥
ಪ್ರಬಲತರರಾಜ್ಯಲಕ್ಷ್ಮಿಯನಾಂತು ಸುತಸಹಿತ ।
ವಿಭವದಿಂದಿರು ಯಥೇಪ್ಸಿತಭೋಗಭಾಗ್ಯಮಂ ।
ಲಭಿಸಲೆನಗಿಷ್ಟಮೆನೆ ಜ್ಯೇಷ್ಠತಮ ರಾಮನಂ ಕಳಪದಿರು ಕಾನನಕ್ಕೆ ॥ (8)

ಕಾಲವನೆನ್ನಂ ಸಲುಹಿ ಕೀರ್ತಿಯಂ ಗಳಿಸು ನಿ ।
ನ್ನೊಲವಿಡಿದು ನಡೆವೆನಿದಕಾಂ ಮುಸಿಯೆ ವಿಬುಧಜನ ।
ದೊಲುಮೆ ಯಶಾಂತಭಿರಾಮ ರಾಮನಂ ಕಾಣದಿರಲರೆನಿಮಿಷದೊಳಗೆ ಕಡೆಗೆ ॥
ತೊಲಗದಿರದೀಜೀವ ಸಗ್ಗದೊಳಗಾದೊಡೆ ।
ನ್ನಲಘುತರಸುಖ ಲಭಿಸದದರಿಂದೆ ನೀ ದಯಾ ।
ಕಲಿತೆಯಾಗುತ್ತಲೆನ್ನ ನುಡಿಯ ನೊಪ್ಪಂಬಡೆಯಲಪ್ಪುದತಿಸೌಖ್ಯ ನಿನಗೆ ॥ (9)

ಎಂದನೇಕವಿಧ ಪ್ರಪಂಚಮಂ ವಿಸ್ತರಿಸಿ ।
ಬಾಂಧುರಸ್ನೇಹದಿಂದೊಡವೆರೆದ ನುಡಿಗಳಂ ।
ಚಂದದಿಂದೆನಿತು ಕಸ್ತರಿಸಲವರಿಂದಧಿಕಕ್ರೂರತರವಾದ ಗರದ ।
ದಂದುಗದ ಬಾಸೆಯಲಿ ಗಾಸಿಗಿಕ್ಕುತ ಬರ
ಲ್ಕಂದುತಂ ತೊಳಲಿ ಬಳಲುತ ದೀನನೆಂದದಿಂ ।
ದೆಂದು ಭೂವಿಹಾರವಾಣ ಮೂರ್ಛೆಯಂ ಪೊಂದುತಿರಲಿಟ್ಟಸುತ ಮತ್ತೆಂದಳು ॥ (10)

ಸತ್ಯವೇ ಪರಬ್ರಹ್ಮ ಧರ್ಮಂಗಳೆಲ್ಲವುಂ ।
ಸತ್ಯವನ್ನಾಶ್ರಯಿಸಿ ಕೊಂಡಿರ್ಪವದರಿಂದ ।
ಸತ್ಯಮೇವಾಕ್ಷಯಂ ಪರಲೋಕಮನ್ನೀವ ಪೆಂದೊಗೆಯೆ ಪಿರಿಯರರಿಯ ॥
ಸತ್ಯರನುಸರಿಪ ಪಂಥಾನವನು ಕೆಡಿಸುತಲ ।
ಸತ್ಯಾನುಮೋದಮಂ ಮಾಳ್ಪರಿಚ್ಛೈಸಿ ದು ।
ಷ್ಕೃತ್ಯಮ ನೊಡಂಬಟ್ಟು ಕೊಟ್ಟನುಡಿಯಂ ಬಿಟ್ಟು ಬಳಲಿದರದೇನು ಬಹುದು ॥ (11)

ಸಕಲಧರ್ಮಗಳು ಸತ್ಯವ್ರತ ಸದಾಚಾರ ।
ನಿಕರಕ್ಕೆ ತವರೆನಿಪ ರವಿವಂಶದೊಳ್ ಪುಟ್ಟಿ ।
ಒರೆಯೆನಿಸಿ ಸತ್ಯಭಾಷೆಯನುಳಿದು ಪಿತೃಗಳಂ ನಿರಯಗತರೆನಿಸಿ ಸಾಧು ॥
ನಿಕಟದೊಳಗೆಂತು ಕಾಳ್ಪರ್ಪ ಪಾಪವ ಗಳಪ ।
ಯುಕುತಿಯನ್ನಾರೊರೆದ ರರಸ ಭಾಷೆಯನೊರಸೆ ।
ನಿಖಿಲಲೋಕಾಪವಾದಂ ನಿರಾಸವು ಜನಿಪುದಲ್ಲದೇಂಫಲವು ದೊರೆಗು ॥ (12)

ಧರ್ಮಾನುಚರಣೆಯಂ ಚಿತ್ತವನುಸರಿಸಿದೊಡೆ ।
ಕೂರ್ಮೆಯಿಂ ಪಿತೃಮಾತೃಕುಲವ ಸಂರಕ್ಷಿಪೊಡೆ ।
ಧಾರ್ಮಿಕಶಿರೋರತ್ನ ನೆನಿಸುವೊಡೆ ನೀನಿತ್ತನುಡಿ ಸಫಲಮೆಂದೆನಿಪೊಡೆ ॥
ಪೆರ್ಮಗನ ದಂಡಕಾವನಕೇಗಲೀ ಕಳುಪಿ ।
ನಿರ್ಮಲಸುಕೀರ್ತಿಯಂ ಗಳಿಸಿ ಜಗತೀನಾಥ ।
ಶರ್ಮದಿಂದಿಹುದೆನ್ನಮತವಿದಕೆ ಪ್ರತಿಕೂಲವಾಗೆ ಲಘುವಹುದು ಮೇಗೆ ॥ (13)

ಎಂದಧಿಕ ಕ್ರೂರವಾಣಿಯನೊರೆದ ದುಸ್ಸತಿಯು ।
ಬಂಧುರದ ಧೈರ್ಯ ನಿರ್ಲಜ್ಜ ನಿಶ್ಶಂಕೆಯು ।
ನ್ನಂದು ನಿಟ್ಟುಸಿ ನೃಪತಿ ಭ್ರಾಂತಮಾನಸನಾಗಿ ಬಳಲಿ ತನ್ನೊಳಗೆ ತೊಳಲಿ ॥
ಕಂದಿದಾನನದಿಂದ ಕಂಗಳೊಳ್ ಸುರಿವ ಜಲ ।
ಬಿಂದುಗಳನೊರಸುತಂ ಕೃಚ್ಛ್ರದಿಂ ಧೈರ್ಯಮಂ ।
ತಂದು ಮುಂದಿಹ ದುಷ್ಟೆಯಂ ನೋಡಿ ಧಿಕ್ಕರಿಸಿ ಜರೆದನತಿರಭಸದಿಂದ ॥ (14)

ಕುಲಗೇಡಿ ಪಾಪಿ ರಕ್ಕಸಿ ಕ್ರೂರೆ ದುಷ್ಟಾತ್ಮೆ ।
ನೆಲೆಗೊಂಡುದೆಂತು ಘಾತಕಬುದ್ಧಿ ಯಾರಿಂದ ।
ಕಲಿತವಾದುದು ನಿನ್ನ ಸುತನೀಕ್ಷಣ ತ್ಯಜಿಸೆ ರಾಮಗಂ ಪಟ್ಟಗಟ್ಟಿ ।
ನೆಲದೊಳುಳ್ಳರ ಪ್ರೀತಿಯಂ ಗಳಿಸಿ ಸುಖವಿರ್ಪ ।
ನಲಘುವುತಿಗಳು ಮೆಚ್ಚುವಂತೆ ಮುಖಮಂ ಮುಂತೆ ।
ನಲವಿಂದ ನಿಟ್ಟಿಸೆಂ ದುಷ್ಕೃತಿಯನೀ ಲೋಕ ಮೂಲೋಕ ಗೆಯ್ಯದಂತೆ ॥ (15)
ಎನುತನೇಕವಿಧಪ್ರಲಾಪದಿಂದರಸು ಬಿ ।
ಲ್ಕನಿಗಿಂದ ತೊಳಲಿ ಬಳಲುತಲಿರ್ದನನ್ನೆಗಂ ।
ಇನ ಪೌರಹೂತೀದಿಶಾಚಕ್ರವಾಕ್ರಮಿಸಲಾ ನಿಶಾನಾಶಮೆನಿಸೆ ॥
ಅನಿತರೊಳ್ಕೇಕಯಾತ್ಮಜೆಗಮಿತತರಕೋಪ ।
ಜನಿಸಲೀಶಾನನೊಡನಿಂತೆಂದಳೀಂ ಪಾಪ ।
ಮನೆಯಾದೆ ಕುಲಧರ್ಮವನ್ನುಳಿದೆ ನೀಂ ಗಳಿಸಿದವುಳ ಜಸವನ್ನು ಕಳೆದೆ ॥ (16)
ಕಡುಪ್ರೊಡಲ ನಿಜಮೆಂದು ವಿಷಯಸುಖಮಂ ನಚ್ಚಿ ।
ನುಡಿಯ ಪುಸಿಯಂ ಚುಚ್ಚಿ ಸಾಧುಜನರಿಗೆ ನಾಚ್ಚಿ ।
ಕಡೆಗಂ ನೃಪಾಯುಷ್ಯ ಕಾಲಸೂತ್ರಕೆ ಸಾರ್ಚೆ ಬಾಳ್ದೇನು ಫಲ ಧರೆಯೊಳು ॥
ಪೊಡವಿಯಂ ಭರತಂಗೆ ಕೊಟ್ಟು ರಾಘವನ ಬೇ ।
ರಡವಿಗೀಕ್ಷಣ ಕಳಪಿ ನಿರ್ವಿವಾದಂಗೈನು ।
ಪೊಡವಿಪತಿ ನೀಂ ಕೃತಾರ್ಥತೆವಡೆವ ಸುಖಮಿಹುದು ಪಲವೆಣಿಸಲೇನಪ್ಪುದು ॥ (17)
ಬಿರುನುಡಿಯ ನಾಲಿಸುತ ಭೀತಿಯಿಂದ ನೃಪಾಲ ।
ಕರಗಿ ಕೊರಗುತಲೊರೆದ ಕೇಕಯಾತ್ಮಜೆಯೊಳಂ ।
ಧರೆಯ ನಿನಗಿತ್ತು ಬಂಧಿತಧರ್ಮಪಾಶದಿಂ ಬೇಯುತ್ತಿದಂತಾದುದು ॥
ಮರುಗಿ ಮಾಡುವುದೇನು ಪೂರ್ವಕೃತ ಕರ್ಮವ ।
ನ್ನೊರಸಿದಗೆ ಪೋಪುದೆ ಪಿರಿಯಸುತನಂ ನೋಳ್ಪ ।
ತೆರಗುತಿದೆ ಮನಮೆನ್ನೊಳಾಡುತತಿಮೋಹದಿಂ ಮೈಮರೆದು ಮರುಗಲಿತ್ತ ॥ (18)
ಅರವಿಂದ ಸಖನುದಿಸಲಾಗ ಮೈತ್ರಾವರುಣಿ ।
ತ್ವರಿತದಿಂ ಸ್ನಾನ ಸಂಧ್ಯಾಕೃತ್ಯಗಳ ರಚಿಸಿ ।
ಪರಮಹರುಷದಿ ದ್ವಿಜೋತ್ತಮರ ನೊಡಗೊಂಡಖಿಲ ವಸ್ತುನಿಚಯಗಳು ಸಹಿತ ॥
ಸುರುಚಿರಾಲಂಕಾರದಿಂದಮರಪಟ್ಟಣವ ।
ಕಿರಿದೆನಿಪಯೋಧ್ಯಾಭಿಧಾನ ನಗರಿಯ ಪೊಕ್ಕು ।
ಬರುತಲಂಕೃತಿವೆತ್ತ ರಾಜವೀಧಿಯನೋಡು ತೈತಂದು ನೋಲವಿನಿಂದ ॥ (19)
ಕತ್ತುರಿಯ ನಾರಣೆಯ ಕಮನೀಯ ಕಾರಣೆಯ ।
ಯೆತ್ತಿಹಪತಾಕೆಗಳ ಎಡಬಲದ ನೀಕಗಳ ।
ಮುತ್ತಿನಾರತಿಗಳಂ ಪಿಡಿದು ನಿಜ ನಿಲಯಗಳ ಮುಂದೆ ನಿಂದಿರುವಚೆಲುವ ॥
ಕತ್ತುರಿಯ ಗಂಧಿಯರ ಕನಕಲತಿಕಾಂಗಿಯರ
ವೊತ್ತವಮಂ ನೋಡುತ್ತ ಮತ್ತೆನಲವೇರುತ್ತ
ಚಿತ್ತರದ ರಾಜವೀಧಿಯೊಳಾದ್ವಿಜೋತ್ತಮಮಂ ನೆಡೆದನರಮನೆಗೆ ಮುದದಿ ॥ (20)

ದೀನಾನುಕಂಪಿ ರಘುವೀರಂಗೆ ಸಿರಿಲಕುಮಿ ।
ತಾನೊಲಿದು ಬಪ್ಪಳೀಉತ್ಸವವ ನೋಡುವರೆ ।
ಮಾನಿನಿಯರರಸುಗಳು ಜಾನಪದ ಹರುಷದಿಂದಲ್ಲಲ್ಲಿ ಕರವ ಪಿಡಿದು ॥
ಕಾನಕಾಂಬರವು ಪ್ರಸೂನಮಾಲಿಕೆಗಳಾ ।
ಮ್ಲಾನಹರುಷದೊಳತ್ತು ಕಾಣಲುಜ್ಜುಗವೆತ್ತು ।
ನಾನು ನೀನೆಂದೊವರುವನಿತ ನಿಟ್ಟಿಸಿ ಮುನಿಪ ಸಂತಸದಲೈತಂದನು ॥ (21)

ಪೊಡಮಡುವರಂ ಪರಸಿ ಪಾಡುವರ ನಯವೆರಸಿ ।
ನುಡಿಗಳಿಂದುಪಚರಿಸಿ ನುತಿಪರಂ ಸಂಭ್ರಮಿಸಿ ।
ಕೊಡುತ ಮನದಿಷ್ಟವಂ ಕಡೆಗೊಳಿಸಿ ಕಷ್ಟಮಂ ಮುನಿತಿಲಕ ಕೃಪೆಯೊಳೈದಿ ॥
ಪೊಡವೀಶನರಮನೆಯ ಕಕ್ಷಾಂತರಂಗಳಂ ।
ಕಡೆದು ಬರಲಿದಿರೊಳ್ ಕಾಣುತ ಸುಮಂತ್ರನಂ ।
ತಡೆಯದೆ ಮದಾಗಮನವಂ ನೃಪತಿಗರುಹೆಂದು ಪೇಳ್ದಂ ದೀನಬಂಧು ॥ (22)

ದಧಿಲಾಜಘೃತ ಕ್ಷೌದ್ರ ಸರ್ವಬೀಜಂಗಳಂ ।
ವಿಧುನಿಕಾಶಚ್ಛತ್ರ ವಿಶದವಾಲವ್ಯಜನ ।
ಕುಧರಾಭವಾರಣಂ ಶ್ವೇತಪುಂಗವ ತ್ರಿಣತ ರಹರಿದಿವ್ಯರಥವು ॥
ಸುಧೆಯ ಪೋಲ್ವಧರೆಯರು ಸುರುಚಿರದ ವೇಶ್ಯೆಯರು ।
ಬುಧರು ಸಿಂಹಾಸನವು ಪೀಠಮೌದುಂಬರಂ ।
ಭಿದುರಾದಿ ರತ್ನಮಂ ಕೂರಶಿಬಿಕಾದ್ಯಖಿಳವಸ್ತುನಿಚಯಂಗಳ ಪಿಡಿದು ॥ (23)

ನಿಗಮಸಾಂಗೋಪಾಂಗವೇತ್ತೃಭೂಸುರರುಗಳ್ ।
ಮಿಗೆ ಪುಣ್ಯಪಶುಪಕ್ಷಿಸುರುಚಿರ ಸುಧೇನುಗಳ್ ।
ಬಗೆಬಗೆಯ ಪೌರಜನ ಜಾನಪದ ಪಾರ್ಥಿವರ್ ಸಕಲಾಗಮಜ್ಞಜನರು ॥
ಅಗಣಿತಸುವಸ್ತುಗಳನರ್ಪಿಸುತ ರಾಘವನ ।
ಸೊಗಸಿನತಿಶಯವ ನಿಟ್ಟಿಸುವ ರಭಿಲಾಷೆಯಿಂ ।
ಜಗತೀಶ ಲೋಕ ಕಾದಿದೆ ಯೆಂದು ಬೇಗದಿಂ ನೃಪತಿಯೆಚ್ಚರಿಸು ಪೋಗಿ ॥ (24)

ಎನುತೊರೆಯೆ ಮೌನಿವರನಾಜ್ಞೆಯಿಂದ ಸುಮಂತ್ರ ।
ಜನಪತಿಯ ಶಯ್ಯಾಗೃಹದ್ವಾರಕೈತಂದು ।
ವಿನಯದಿಂ ನುತಿಗೆಯ್ಯಲನುಗೈದನಿಕ್ಷ್ವಾಕುವಂಶಚೂಡಾಮಣಿಯನು ॥
ಇನ ಪೂರ್ವಶೈಲೀಶಿಖಾಗ್ರ ಭೂಷಿತನಾದ ।
ಮುನಿವರರ್ಜಾನಪದ ಸಾಮಂತರೈತಂದು ।
ವನಜಾಕ್ಷ ರಾಮನಭ್ಯುದಯಮಂ ನೋಡುವುಜ್ಜುಗದಿಂದಮಿರ್ಪರರಸ ॥ (25)

ಮಾತಲಿಯ ನುತಿಗೆಯ್ಯೆ ಮೇಘವಾಹನನು ಷಾ ।
ಣ್ಮಾತುರನ ನೊಡಗೊಂಡು ದಿತಿಜರಂ ಗೆಲಿದಂತೆ ।
ನೀತಿಯುತನೆನ್ನ ನುಡಿಯಿಂದ ಬೇಗದಲುಪ್ಪವಡಿಸಿ ಯೀ ಲೋಕವನ್ನು ॥
ಜಾತ ಸಂಭ್ರಮರೆನಿಪುದಮರೇಂದ್ರನಾ ಸುಧಾ ।
ಸೂತಿಸಹಿತೈದಿ ಪೊಂಬೊಡೆಯನಂ ಪ್ರೀತಿಯಿಂ ।
ಸಾತಿಶಯದಿಂದೆಚ್ಚರಿಪೊಲಾನು ಭವದೀಯ ಚರಣಕ್ಕಂ ಬಿನ್ನವಿಪೆನು ॥ (26)

ಸುರಪನೀಯಲಿ ಜಯದ ಸಗ್ನಿ ಶುಭಭಾವಮಂ ।
ತರಣಿಸುತ ಶೌರ್ಯಮಂ ನಿಋತಿ ಯತಿಧೈರ್ಯಮಂ ।
ವರುಣನಾಜ್ಞಾಸತ್ವಮರುತನತಿ ಬುದ್ಧಿಯಂ ಧನದ ನವಧಾನ್ಯತೆಯನು ॥
ಹರ ನಿಖಿಲಮಾನ್ಯತೆಯ ನಿತ್ತು ಸಲಹಲಿ ಜಗ ।
ದ್ಭರಿತ ವಿಕ್ರಮ ಪಂಕ್ತಿರಥ ರಾಜರಾಜೇಶ ।
ಕರುಣದಿಂದುಪ್ಪವಡಿಸೆಂದು ನಾನಾವಿಧದಿ ತುತಿಸಿದಂ ಸೂತ ನಯದಿ ॥ (27)

ಎಂದು ನಾನಾವಿಧದ ನುಡಿಗಳಂ ತುತಿಗೆಯ್ಯ ।
ಲಂದರಸ ನಾಲಿಸುತ ಲತಿದೈನ್ಯಕರಮಾದ ।
ಮಂದ ಬಾಷಣೆಯಿಂದ ಸೂತ ನೊಡನಿಂತೆಂದ ನೀಯರುಂತುದ ವಾಣಿಯಿಂ ॥
ಬಂಧುರದ ಸಂಕಟಂಗೊಳಪೆ ಯಾತಕೆ ಲೋಕ ।
ಬಾಂಧವನ ಕುಲಕಳಂಕೆಯ ನೆನಲ್ ಸೂತ ಭಯ ।
ದಿಂದ ಬೆರೆಸಾರಿ ಕಂಪಿತನಾಗಿ ಬೆಸಗೊಂಡನಾ ಕೇಕಯಾತ್ಮಜೆಯನು ॥ (28)

ಏನಿದಚ್ಚರಿ ತಾಯಿ ಜನನಾಥ ನೆನ್ನೊಡನೆ ।
ದೇನು ಕಾರಣ ಕೋಪತರ ನುಡಿಯ ಬೆಸಸಿದಂ ।
ನಾನೇನು ವಿಪರೀತಕರಮಾದ ದುರ್ಗತಿಯ ನನುಸರಿಸಿ ಬಿನ್ನವಿಸಿದೆ ॥
ನೀನೊರೆಯ ಬೇಹುದೆನಲರಸ ನೀ ರಾತ್ರಿಯೊಳು ।
ಸೂನುವಂ ನೆನೆನೆನೆದು ನಿದ್ರೆಯನ್ನಾಳದಲೆ ।
ಮ್ಲಾನಮಾನಸನಾಗಿ ತೊಳಲುತಿಹ ರಾಮನಂ ಕರತಹುದೆನುತ್ತೊರೆದಳು ॥ (29)

ತ್ವರಿತದಿಂದೈದಿ ರಾಘವನ ನೃಪಸನ್ನಿಧಿಗೆ ।
ಕರತಹುದೆನುತ್ತೆ ಕೇಕಯರಾಜ ಸಂಭೂತೆ ।
ಯೊರೆಯಲಾ ಸೂತ ಸಂತಸದಿಂದ ಮಂಗಳಂ ದೊರೆಕೊಳ್ಳುಗೆನುತ್ತ ಪೊರಟು ॥
ಬರುತ ಜನಸಂಬಾಧಮಂ ಕಳೆದು ಶ್ರೀರಾಮ ।
ಪರಮಮಂಗಳಮೂರ್ತಿಯಂ ನೋಡಲಭಿಲಾಷೆ ।
ವೆರಸಿ ಭೂಧವನ ಪೊಗಳುತ ಹರ್ಷದಿಂದೈದಿ ಕಂಡನವನಿಪರ ಮುದದಿ ॥ (30)

ಉದಿಸೆ ಬಾಸ್ಕರ ಪುಷ್ಯಯೋಗ ಸಮನಿಸೆ ದ್ವಿಜರು ।
ಮುದದಿಂದ ರಾಮಾಭಿಷೇಕಮಂ ನಿಚ್ಚೈಸುವ ।
ರದುಭುತದ ಹರುಷದಿಂ ಮಂತ್ರಿಗಳ್ ಪುರೋಧಸರು ಸಕಲಸಂಭಾರ ಸಹಿತ ।
ಉದಧಿಯೂರ್ಧ್ವವು ತಿರ್ಯ ಪ್ರಾಕ್ಪಶ್ಚಿಮಾದಿ ದಿ ।
ಗ್ವಿದಿತ ಲಹರೀಜಲವ ಕೊಂಡು ಗಂಗಾಯಮುನೆ ।
ಸದಮಲದ ಸಂಗತೋದವ ಪಿಡಿದು ನಡೆತಂದರಾ ನೃಪನ ಮಂದಿರಕ್ಕೆ ॥ (31)

ನೆರೆದ ವಿಪ್ರ ಸಮೂಹ ಜಾನಪದ ನೃಪತಿಗಳು ।
ಪರಿಪರಿಯ ಜನರೆಲ್ಲ ಸಂಭ್ರಮದೊಳೈದಿ ಧವ ।
ಳರಮನೆಯ ಬಾಗಿಲೊಳು ನಿಷ್ಕ ನಡೆತಹ ಸೂತನಂ ನೋಡುತಿಂತೆಂದನು ॥
ಬರವ ನರುಪುವುದರಸಿಗೆನಲಾ ಸುಮಂತ್ರ ಬಂ ।
ಧುರದ ಹರುಷ ದೊಳೈದಿ ದತಿಶಯ ಶಯನಾಗೃಹದ ।
ಪೊರೆಯೊಳಗೆ ನಿಂದು ನುತಿ ಗೈದ ನಮರೇಶನಂ ಮಾತಲಿಯು ತುತಿಸುವಂತೆ ॥ (32)

ಸೋಮ ಸೂರ್ಯರ್ಗಂ ಪಾಶಿ ಸುರಪ ನಗ್ನಿಯು ಧನದ ।
ಭೀಮ ಋಷಿನಿವಹಂಗಳೊಲಿದೀಗೆ ಮಂಗಳವ ।
ತಾಮಸಿಯು ರಾತ್ರಿ ಯೈದಿದಳಹಸ್ಕರ ಪೂರ್ವಶೈಲಾಗ್ರ ದೊಳ್ ತೊಳಗಿದಂ ॥
ಪ್ರೇಮದಿಂ ಭೂಸುರ ಜರ್ನಪತಿಗಳೈದೆ ಸು ।
ತ್ರಾಮ ಪಾಲಿತ ನುದಯಮಂ ಬಯಸಿ ಬಂದಿಹರು ।
ತಾಮರಸಗೋತ್ರಭೂಷಣ ಮಹಾರಾಜ ನೀನೆಚ್ಚರಂಗೊಳ್ವುದೆನುತ ॥ (33)

ಶ್ರುತಿಗೈದ ಸೂತಭಾರತಿಯ ನಾಲಿಸುತರಸ ।
ನತಿಶಯ ಕ್ರಮದಿಂದ ಲಿಂತೆಂದ ಮಂತ್ರಿ ನಿಜ ।
ಸುತನ ನಿಟ್ಟಿಸುವ ಕಾಂಕ್ಷೆ ಯೊಳಿರುಳು ನಿದ್ರೆಯನ್ನಾಳ ದೆಚ್ಚತ್ತಿರ್ಪನು ॥
ಮತಿಯುತನೆ ಬೇಗ ರಘುನಾಥನಂ ಕರತಂದು ।
ಹಿತವನಾ ಚರಿಸೆನಲ್ ನೃಪನಾಜ್ಞೆಯ ಹುರಿಳ ।
ಜತೆಯೆನಿಸಿ ರಾಮ ನಿರ್ವಡೆಗೆ ಸತ್ವರದಿಂದ ಲೈತಂದ ಮಂತ್ರೀಶನು ॥ (34)

ಹರುಷರಸ ತುಳುಕ್ಕಾಡುತೈತರುತ ಸೂತ ರಘು ।
ವರನ ಶುಭವಿಭವಮಂ ಹಾರವಿಸಿ ನಗರದೊಳ್ ।
ಪರಿಪರಿಯಲಂಕಾರವೆತ್ತಿಪಾಯನವಿಡಿದು ಸಕಲಜನ ಸಂತಸದಲಿ ॥
ಅರವಿಂದಬಾಂಧವನ ಕುಲಶಿಖಾಮಣಿಯ ಬಹು ।
ಪರಿಯಿಂದ ಶ್ರುತಿಪುದಂ ಕೇಳುತಾನಂದದಿಂ ।
ತ್ವರಿತದಿಂದೈತರುತ ರಾಜಪಥಮಂ ಕಳೆದು ಕಂಡನರಮನೆಯ ಸಿರಿಯ ॥ (35)

ಸುರಚಾಪ ದೋಲೆಸೆವ ತೋರಣಗಳೋರಣದ ।
ಪರಿತ ಮುಕ್ತಾಫಲದ ತಳ್ಕುಗಳ ಪಳ್ಕುಗಳ ॥
ಸಿರಿಕರವ ಬಜ್ಜರದ ಕಂಬಗಳ ಸಕಲರುಚಿಗುಂಫಗಳನಾಂತು ತೋರ್ಪ ॥
ಅರಮನೆಯೊಳೊಪ್ಪುವರಸಂಚೆಗಳ ಸಂಚುಗಳ ।
ಮೊರೆವ ಗಿಳಿವಿಂಡುಗಳ ಕಲಕಂಠ ದಂಡುಗಳ ।
ಪರಮೆಗಳ ಕಲರುತದ ಪರಭೃತದ ಸುಲಲಿತದಲೆಸೆದುದಾ ನಿಲಯ ಮುದದಿ ॥ (36)

ಕುರುವಿಂದಖಚಿತಕರುಮಾಡಗಳ ಬಜ್ಜರದ ।
ಸರಸಸೋಪಾನಗಳ ರುಕ್ಮದ ಕವಾಟಗಳ ।
ಮೆರೆವ ಗಾರುತ್ಮತೋಪಲಲೋವೆಯಿಂದೆಸೆವ ಶಿಖರ ಪುಷ್ಕರ ಚುಂಬಿಯ ॥
ನೆರವಿಗಳ ನೋಡುತ್ತಲೊಳಪೊಕ್ಕನಿಕ್ಕಡೆಯ ।
ಲಿರುವ ಭೂಸುರರಾಜಮಂಡಲವ ನಿಟ್ಟಿಸುತ ।
ಹರುಷದಿಂ ಚಾತುರ್ಯತೋಜ್ವಾಲಯಂ ಕಣ್ಗೊಪ್ಪುತೋಜ್ಜಗದಿಂದಲೈತಂದನು ॥ (37)

ನಲಿವ ನೋಗೆಯ ಸಂತತಿಯುಲಿವ ಕೋಗಿಲೆ ಮುಂತೆ ।
ಲಲಿತಗಿರಿಯುಲಿ ಪಿಂತೆ ಕಲಮಧುರರವದಂತೆ ।
ಚೆಲುವಸಿತ್ರಪುಟಪತ್ರಿಯನೋಲವಿಂದಲುಪಚರಿಪ ಪಾಂಚಾಲಿಕಾನಿಚಯಮಂ ॥
ಕಲಿತಾವಸರ ಹಾಸ್ಯಲಾಸ್ಯದ ಜನಂಗಳಂ ।
ಪಲವುವಿಧಮತಿಪಾಠಕರ ನೆರವಿಗಳ ನೋಡು ।
ತಲಘುಮತಿ ಶ್ರೀರಾಮನಿಪ್ಪಮಂದಿರದೆಡೆಗೆ ತ್ವರಿತದಿಂದೈತಂದನು ॥ (38)

ಆಸುಮಂತ್ರಂ ನೆರೆದ ಜನಸಂಗಮನ್ನುಳಿದು ।
ವಾಸವಾಲಯಕೆ ಸಾಲ್ಮಡಿಯೆನಿಪ ಗೃಹಮಂ ವಿ ।
ಲಾಸದಿಂದೊಳಪೊಕ್ಕು ತ್ವರಿತದಿಂ ದೈತರಲ್ ಕಕ್ಷ್ಯೆ ಪ್ರದೇಶದಲ್ಲಿ ॥
ಪ್ರಾಸಮುದ್ಗರಪರಶುಧಾರಿಗಳ್ ಜವ್ವನದ ।
ಲೇಸೆನಿಪ ಧರ್ಮಕುಂಡಲಮಾಲ್ಯಯುತರಿರಲ್ ।
ವಾಸರದಿ ವೇತ್ರಧರಯುರೆನಿಪ ವೃದ್ಧರ ನೆರವಿಯಂ ಕಂಡ ಮಂತ್ರಿ ಮುದದಿ ॥ (39)

ಬರಲಮಾತ್ಯನ ಕಾಣುತಾದ್ವಾರಪಾಲಕ ।
ರ್ಭರದಿಂದಲೆದ್ದು ಕರಗಳ ಮುಗಿಯುಲಿಟ್ಟಸುತ ।
ದೊರೆಯೊಳಿಸ್ನಾಗಮನಮಂ ಪೇಳ್ವೆವೆಂದೊಗೆಯೆ ಲಧಿಕಸಂತೋಷದಿಂದ ॥
ಚರರೈದಿ ಬಿನ್ನವಿಸಲಾ ವಾಣಿಯಂ ಕೇಳ ।
ಕರುಣದಿಂದಪ್ಪಣೆಯನೀಯಲುಪಜೀವಿಗಳ್ ॥
ನೆರವಿಾಲನಾಜ್ಞೆಯಿಂದೈತಂದು ಮಂತ್ರಿಗಂ ಪೇಳ್ದರತಿಮೋದದಿಂದ ॥ (40)

ಪರಿವೃಢನ ಕಾಙ್ಬರು ತ್ವರೆಕದಿಂದಲೊಳಪೊಕ್ಕು ।
ಪರಿಪರಿಯ ಚಿತ್ರಪುತ್ಥಳಿಕೆಗಳ ಮೃದುನುಡಿಗ ।
ಳೊರೆವ ಸಾರಿಕೆಗಳಂ ನರ್ತಿಪ ಮಯೂರಗಳ ನುಣ್ದನಿಗಳಂ ತೋರುವ ॥
ಪರಭೃತಗಳಂ ಮನೋಹರ ಕಾಮಿನೀಜನವ ।
ಸರಸತರ ಹಾಸ್ಯಂಗಳೆಸಗುವರ ವಾಮನಕ ।
ನೆರವಿಯಂ ನೋಡುತಚ್ಚರಿಯಿಂದಲೈತಂದ ರಘುನಾಥನಂ ನೋಳ್ಪರೆ ॥ (41)

ಥಳಥಳಪ ರತ್ನಮಯಸಿಂಹಾಸನಾಗ್ರದೊಳ್ ।
ತೊಳಪ ಮಣಿಗಣಖಚಿತದಿವ್ಯಭೂಷಣವಿಟ್ಟು ।
ಲಲಿತಹಾಟಕವಸನ ಮುಟ್ಟಲಂಕೃತಿವಟ್ಟು ಶಿವವಯಸ್ಯೋಪಮದಲಿ ॥
ನಳನಮಿತ್ರನ ತೆರದಿ ಮಂಡಿಸಿರೆ ಪಾರ್ಶ್ವದೊಳ್ ।
ನಳಿನಮಂದಿರೆಯಂತೆ ಸೀತೆ ವಾಲವ್ಯಜನ ।
ತಳೆದಿರಲುಖಂಡ ತೇಜೋರಾಶಿಯಂ ಕಂಡು ಸೂತ ಮುಂಕೊಂಡು ನಮಿಸೆ ॥ (42)

ತುತಿಸಿ ವಂದಿಸಿ ವಿನಯದಿಂ ನಿಂದ ಸೂತನಂ ।
ಪತಿಕರಿಸಿ ಕುಶಲಮಂ ಕೇಳ್ದಾಗ ಬಂದ ಸಂ।
ಗತಿಯ ಬೆಸಗೊಂಡೊಡಾ ಸೂತನುರುವಿಭವದಿಂ ವಿಜ್ಞಾಪಿಸಂ ಗೈದನು ॥
ಕ್ಷಿತಿವರಂ ಕೇಕಯಾತ್ಮಜೆಯೊಡನೆ ಕುಳ್ಳಿರ್ದು ।
ಮತಿಶಯಪ್ರೀತಿಯಿಂ ತಾತಪಾದಂ ನಿಮ್ಮ ।
ಪ್ರಥಿತಸನ್ಮೂರ್ತಿಯಂ ನೋಳ್ಪೊಡಭಿಲಾಷೆಯಿಂದಟ್ಟಿದಂ ನರವರೇಣ್ಯಾ ॥ (43)

ಎನೆ ಕೇಳಿ ಸಂತಸದಿ ಸೀತಾಮುಖವ ನೋಡಿ ।
ವಿನಯದಿಂ ನಸುನಗುತೆ ರಾಮನೆಂದಂ ತನ್ನ ।
ಜನನಿಯೆಸಗಭ್ಯುದಯಮಂ ಬಯಸಿ ತಾತನಡಿಗೆಳ್ಚರಿಸೆ ತೋಷದಿಂದೆ ॥
ಮನವೊಲಿದು ಯುವರಾಜಪಟ್ಟಮಂ ಕಟ್ಟುವರೆ ।
ನಸುಮತಿಸೆ ಸೂತನಂ ಕಳುಪಿರ್ಪ ಕತದಿಂದ ।
ಮುನಿಗಳನುಮತದಿಂದ ಬಹುದು ಸಿರಿ ಬೇಗದಿಂ ತಾತನಂ ಕಾಣ್ಬೆಮುದದಿ ॥ (44)

ಎಂದು ಸನ್ಮಾನದಿಂದೊರೆದ ಪತಿವಾಕ್ಯಗಳ ।
ಚಂದವಂ ನಿಟ್ಟಿಸುತ ಧರಣೀತನೂಜಾತೆ ।
ಬಂಧುರಸ್ನೇಹದಿಂದ ದ್ವಾರಕೈತಂದು ಮಂಗಳಾಚರಣೆಗೈದು ॥
ವೃಂದಾರಕೇಂದ್ರನಂ ಬೊಮ್ಮ ಪಟ್ಟವ ಕಟ್ಟಿ ।
ದಂದದಿಂ ನೃಪಕುಲಾಗ್ರಣಿ ರಾಜ್ಯಸಂಪದವ ।
ಪೊಂದಿಸುವ ನಿಖಿಲಭೂಪಾಲಮನುಮುನಿಜನರ ಸಮ್ಮತ ದೊಳೀ ದಿನದಲಿ ॥ (45)
ವ್ರತಯುಕ್ತ ದೀಕ್ಷೆಯುತ ಅಜಿನಧರ ನಿರ್ಮಳನ ।
ಕತಿಪಯ ವ್ಯಜನಾನ್ವಿತನ ಮೃಗಶೃಂಗದಿಂ ।
ಯುತಪಾಣಿಪಂಕಜನ ರಘುಕುಲಾಗ್ರೇಸರನ ಸಿಂಹಾಸನಾಗ್ರದೊಳಗೆ ॥
ಅತಿಶಯದಿ ಮಂಡಿಪುದ ನಿಟ್ಟಿಸುತ ಭಜಿಸುವೆಂ ।
ಕ್ಷಿತಿಯರಸ ವಜ್ರ ಮೂಡಲು ತೆಂಕ ಯಮ ಪಾಶಿ ।
ಮತಿಯುತಂ ಪಶ್ಚಿಮದಿ ಯುತ್ತರದಿ ವೈಶ್ರವಣ ಕೊಡುಗೆ ಪದಕಂ ವಿಜಯಮಂ॥
ಧರಣೀತನೂಭವೆಯು ಬೀಳ್ಕೊಂಡು ಕೌತುಕದ । (46)
ಕರದಿಂದ ದ್ವಾರಗಳ ಕಳೆದು ಮಧ್ಯಮಕಕ್ಷ ।
ಪೊರೆಯಲಿ ನಮಿತಹಸ್ತನಾಗಿ ವಂದನೆಗೈದ ಸೌಮಿತ್ರಿಯಂ ನೋಡುತ ॥
ನೆರೆದಿಹ ಸುಹೃಜ್ಜನರನೊಡಗೊಂಡು ಗುಹೆಯಿಂದ ।
ಸ್ಫೊರಡುವ ಮೃಗೇಂದ್ರ ನಂತೈತಂದು ಮಂತ್ರಿಸಹ ।
ಮೆರೆವ ಪೊಂದೇರನೇರ್ದಂ ಪೂರ್ವಶಿಖರಿಯಂ ಪೂಷ ಭೂಷಂಗೆಯ್ಯಲು ॥ (47)
ಘನರವವನನುಕರಿಪ ರತುನಮಯಚಕ್ರಂಗ ।
ಳನುವಿನಿಂ ಕಲಭನಿಭಗಾಂಧರ್ವಕಲಿತದಿಂ ।
ದಿನಪಶೋಭಾತಿರಸ್ಕೃತಕಾಂಗಮನೇರ್ದು ಒಲವೈರಿ ಯೈತಪ್ಪೊಲು ॥
ಇನಕುಲಾಗ್ರೇಸರಂ ಗೃಹವನುಳಿದೈತರಲು ।
ವಿನಯದಿಂ ಸೌಮಿತ್ರಿ ಛತ್ರಚಾಮರಗಳಂ ।
ಘನಚಾಪತೂಣೀರಗಳನಾಂತು ಪಿಂದೆಸೆಯ ಸೇವಿಸುತ ಬರಲು ಮುದದಿ ॥ (48)
ತರದಿನುಗ್ಗಡಿಪ ಮಾಗಧರಿಂದೆ ಕಾಂಸ್ಯಾದಿ ।
ಪರಿಪರಿಯ ವಾದ್ಯಗಳ ಬಾಜಿಸುವ ಜನರಿಂದ ।
ಪರಕೆಗಳನೀವ ಭೂಸುರಸಮೂಹಂಗಳಿಂ ಪಾಡಿಸುವ ಶೂರರಿಂದ ॥
ಕರಿಹರಿಸ್ಯಂದನಗಳಮಿತವೈಭವದಿಂದ ।
ಸಿರಿಕರದ ರಾಜವೀಥಿಯನಲಂಕೃತಿಗೈವ ।
ತರಸ ಮುಗಿಲೊಡ್ಡನೊತ್ತರಿಸಿ ಬಹ ಶಶಿಯಂತೆ ಪೊಳಪಿಂದಲೈತರುತಿರೆ ॥ (49)
ಎಡಬಲದ ಪ್ರಾಸಾದದಗ್ರದೊಳ್ ನಿಟ್ಟಿಸುವ ।
ಮಡದಿಯರು ಹರುಷದಿಂ ಕುಸುಮವೃಷ್ಟಿಯ ಕರೆಯ ।
ಎಡಿಗಡಿಗೆ ನಲವಿನಿಂ ಪಾಡಿಪೊಗಳುತ ಕೆಲರು ನುಡಿಯೆ ಪರಿಪರಿಯ ನುಡಿಯ ॥
ಪೊಡವೀಶನರ್ಧಾಂಗಿ ಕೌಸಲ್ಯೆ ಸಂಭ್ರಮಂ ।
ಪಡೆದು ವಿಪ್ರೌಘಕಂ ಬೇಡಿದಿಷ್ಟಂಗಳಂ ।
ಕೊಡುವಂತೆ ಸಿಂಹಾಸನಾಗ್ರದೊಳ್ ಸುರಪನಂತಿಹುದೆನುತ ಕೆಲರಾಡಲು । (50)

ಅರಸಾಗಲೀ ಮಹಾರಾಜನಂಬುಧಿಯಾಯಾಗ ।
ನಿರದೋಷಧಿಗಳ ವರ್ಚಿಸುವಂತೆ ಲೋಕಮಂ ॥
ನಿರವಧಿಕಹಾರ್ದದಿಂ ಪೊರೆದಪಂ ಕುಸ್ಸಿಸ್ಥ ತರ್ಣಕರ ಮಾಳ್ಕೆಯಂತೆ ।
ಪಿರಿಯರಸುಗಳ ನೇಮಕಧಿಕತರಮೆಂದೆನಿಸಿ ।
ಸಿರಿಯುಬ್ಬಿಲೀತನಂ ನೋಡಿ ಚಾತುರ್ವರ್ಣ್ಯ ।
ಪುರುಷರೋತ್ಸವಗೊಂಬರಾ ದಿಲೀಪಾದಿ ನಿಜರಾಜರಧಿ ಸೆಳಸಿದಂತೆ ॥ (51)
ಜವ್ವನಿಗರುಂ ಮನೋಜನ್ಮನೆನೆ ನೇಣ್ಮಯ್ಯ ।
ಬಾವ್ವೀಶರಿಂಗೆ ಬುಧಜನರಿಗಿಂಗಡೆಲ್ಲಯು ।
ಯುವ್ವನಾಹಂಕಾರ ಜನಕೆ ಜಿಡುಗಣ್ಣೊಡೆಯನಾರ್ತರಿಗೆ ಪಾರಿಜಾತ ॥
ಪುವ್ವಿಲ್ಲ ಮಾತ್ರುಳಂ ಕುವಲಯಕೆ ಶರಜನ್ಮ ॥
ಯುವ್ವೆಯುಹುದದರಿಂ ಸದಾನಂದಮೊಂದೆನುತ ।
ವಿವ್ವಿದ ದೊಳತ್ತೆರದ ಸೌಧಾಗ್ರದೊಳ್ಪೇಳ್ವುದಾಲಿಗುತ ನಡೆತಂದವು ॥ (52)
ಆವನೀ ಚೆಲುವಿಕೆಯು ನೋಡದಿಹ ಕಂಗಳಂ ।
ದಾವನನ್ನೀ ಮಹಾಪುರುಷ ನಿಟ್ಟಿಸದಿರುವ ।
ನಾವನಾಗಲಿ ನಿಂದ್ಯ ನಿಜಮನೋರಥ ವಂದ್ಯ ಧೀಯುತರೊಳತಿಮಾನ್ಯನು ॥
ಪಾವನೀಕೃತಮೂರ್ತಿ ಪಟ್ಟವಣೆಯಗ್ರದೊಳ ।
ದಾವ ಮಾಹೂರ್ತದಲಿ ಮುಂಡಿಸುವ ವಿಭವಮಂ ।
ನಾವೆಲ್ಲರುತ್ಸವದಿ ನೋಳ್ಪೆವೆಂದಾಡುವುದನಾಲಿಸುತಲೈತಂದನು ॥ (53)
ತೊಳಪ ಪಾರ್ವಣವಿಧುವ ಕಂಡ ಜೀವಂಜೀವ ।
ಬಳಗಮೆನಲಿನಿರಸವ ನಿಟ್ಟಿಸಿದ ಜಿಡುಗಣ್ಣ ।
ಕುಳಮೆಂಬೊಲಾಲೋಕನೋತ್ಸುಕದಿ ನೋಳ್ಪಜನದೃಜನ್ನಿಜಯು ತುರಳದಂತೆ ॥
ಬಳಿದುದೇನೆಂಬೆ ಘನರವವೆಂಡಿ ಮುಂಬಂದು ।
ಲಲಿತ ತಾರಾವಾಸವಹಾಂತ ಯೋಗಿಯು ಚಿತ್ತ ।
ನಿಲಯದಂದದೊಳಾತ್ಮಭಾವಮಸ್ಯೆದಿಸುವುದನ್ಯಕರಣಂಗಳನ್ನು ॥ (54)
ಇಂತನಂತೌತ್ಸುಕ ದೊಳಟ್ಟಿಸುತ ಪೊಗಳುತಿಹ ।
ಸಂತರಂ ನೋಡುತ್ತ ಲತಿಹರುಷದಿಂದ ಭೂ ।
ಕಾಂತನಾಲಯಕ್ಕೈದಿ ಬರ್ಪಡೆಯಲಾ ರಾಜಮಾರ್ಗದೊಳಖಿಲ ಜನರು ॥
ಮುಂತೆಸೆದರತುಳಲಂಕೃತಿ ವೆತ್ತು ಕರಗಳೊಳ ।
ಗಾಂತುಫಲ ಪುಷ್ಪಗಳ ಕರಮಿತ್ತು ಪೊಗಳ್ದರ್ ।
ಪಿಂತಣ ದಿಲೀಪ ರಘುರಾಮ ನಿಮ್ಮಡಿ ಯೆನಿಸಿ ವಿಜಯನಾಗೆಂದುಲಿದರು ॥ (55)
ನಟನಾವಿಲಾಸಗಳ ನರ್ತನದ ಹಾಸಗಳ ।
ಪಟುಮೃದುಂದುಭೀರವದ ಘೋಷಗಳ ಹೇಷಗಳ ।
ಚಟುಲಾಶ್ವ ಸಂತತಿಯು ಲುಳಿತಗಳ ಮಣಿಗಳ ನಣಕಿಸುವ ಚೆಲುವಿನಿಂದ ॥
ವಿಟದಗ್ಧರ ಚೆಲುವ ಮಾತುಗಳ ರೀತಿಗಳ ।
ಕುಟಿಲ ಕುಬ್ಜಕರಂಗಭಂಗಗಳ ಭಂಗಿಗಳ ।
ನಿಟಿಲಾಕ್ಷಸಖನೋಡುತ್ತೈತಂದ ನಲವಿಂದಮಾರಾಜಸದನದೆಡೆಗೆ ॥ (56)

ಸುರಪಥಸುರಾಕಾರ ತೋರಣದ ಮೇಲ್ಕಡೆಯು ।
ಹರನಿಲಯವೆಂಬಂತುದಾರ ಸೌಧಾಗ್ರಗಳ ।
ಳಿರುವ ಮೃಗನಯನೆಯರಪಾಂಗಪ್ರಭಾಹಾಸ ಮುಂಕೊಂಡು ಬರಲು ॥
ಅರಸನುರುಕೀರ್ತಿಪ್ರತಾಪ ವಿಶ್ವಾಕಾರ ।
ವೆರಸಿ ಮೂರ್ತೀಭವಿಸಿದಂತಖಿಲಜನವೆಲ್ಲ ।
ವೆರರತುನಬಜ್ಜರದ ಮೈದೊಡವನಾಂತಂತೆ ತೋರ್ದರಚ್ಚರಿಯ ಪರಿಯ ॥ (57)
ಶ್ರೀನಿಲಯಮೆಂತಖಂಡ ವೈಭವವ ಭೂ ।
ಜಾನಿಯಾಲಯವನ್ನು ಕಾಣುತ್ತ ತೇರಿಳಿದು ।
ಭಾನುವಿಕ್ರಮನೈದುತಿರುವೆಡೆಯ ಕಕ್ಷಾಂತರಸ್ಥಾನುಚರನಿವಹವು ॥
ಸಾವೆಂದವೆತ್ತ್ರಗಿ ಸರಭಸಂ ಪೊಗಳುತಿರೆ ।
ಮಾನಿನಿಯರಾಚಾರಲಾಜಗಳ ಸೂಸುತಿರೆ ॥
ಮಾನಸೋತ್ತಮ ನೋಡಿ ಮನ್ನಿಸುತಲೊಳಪೊಕ್ಕು ನೃಪರಗ್ರಗಣ್ಯನೆಡೆಗೆ ॥ (58)
ಕಂದನ ಸುಕಂಡ ಜನಜಂಗುಳಿಯ ಮಾಳ್ಕೆಯೊಳ್ ।
ಮಂದೇಹವೈರಿಯಂ ನಿಟ್ಟಿಸಿದ ದ್ವಿಜಗಣದೊ ।
ಲಿಂದುವಂ ಕಂಡುದಧಿಯಂತೆ ಪರಮಾನಂದವೆತ್ತಖಿಳಜನರು ಮುದದಿ ॥
ಬಂಧುರಸ್ನೇಹದಿಂ ಬಹುವಿಧದಿ ನುತಿಗೆಯ್ಯ ।
ಲಿಂದಿರಾವರ ರಾಮಪುರದರಸ ಕರುಣದಿಂ ।
ದಂದು ಮನ್ನಿಸುತ ಲೈತಂದು ಗುರುವಂ ಕಂಡ ಮುಂದೆ ಮಾನಸ ರೀತಿಯಿಂ ॥ (59)

(ಸಂಧಿ 7, ಪದ 316.)

## ಎಂಟನೆಯ ಸಂಧಿ.

ಸೂಚನೆ॥ ಜನಕನಾಜ್ಞೆಯ ನುಪರಿ ಮೌಳಿಭೂಷಣಮೆನಿಸಿ ।
ಜನನಿಯಂ ಕಾಣ್ಬೊಡುದ್ವೇಗದಿಂದ ಶ್ರೀರಾಮ ।
ಜನಪರಂ ಮನ್ನಿಸುತ ಗಂಧಗಜಗತಿಯಿಂದ ಲೈತಂದ ಹರುಷದಿಂದ ॥

ಒಡನೆ ಬಹ ಮಂತ್ರಿಗಳ ಮಾಗಧರ ವಂದಿಗಳ ।
ಗಡಣಮಂ ಕಕ್ಷಾಂತರಂಗದೊಳ್ ನಿಲಿಸಿ ಮುಂ ।
ಗಡೆಯ ವಂದಿಪ ನುತಿಪ ದ್ವಾಃಸ್ಥರಂ ಮನ್ನಿಸುತ ಶುದ್ಧಾಂತಕೈದಿ ಮುದದಿ ॥
ಪೊಡವಿಪತಿಯಂ ಕಂಡು ಪೊಡಮಟ್ಟು ಮಾತಾಂಘ್ರಿ ।
ಜಡಜಗಳಗಭಿನಮಿಸಿ ನಿಂದಿರ್ದ ತನಯನಂ ।
ನುಡಿಸದಲೆ ಮೌನದಿಂ ದಿಟ್ಟಿಸಿದನೇನೆಂಬೆ ನಗರಾಟ್ತನೂಸಂಭವೆ ॥ (1)
ವಿಕಲವಾದಿಂದ್ರಿಯದ ಪೂರ್ಣನಯನಂಗಳಂ ।
ಸಕಲವದನದೊಳುದುರ್ವಖರ್ವಬೆಮರ್ವನಿಗಳಂ ।
ಪ್ರಕಟಿಸುತ ಮುಂಬರಿವ ನಿಟ್ಟುಸಿರ ಸಂಬಾಧದಿಂದ ಪೊಯಿವಳ್ಳೆಗಳಲಿ ॥
ನಿಕಟಪೀಠಾಗ್ರದೊಳಿರ್ಪ ಬೊಪ್ಪನ ನೋಡಿ ।
ಚಕಿತಮಾನಸನಾಗಿ ಪಿತನದೇಂ ಕಾರಣದಿ ।
ಭ್ರುಕುಟಿಯಂ ಬಂಧಿಸಿದನೆನ್ನ ಮನ್ನಿಸದೆಂದು ತನ್ನೊಳಾಲೋಚಿಸಿದನು ॥ (2)

ಕೊಂದಿಡುವ ಕಡುಗೋಪವಿಡಿದ ಸಮಯದೊಳಾನು ।
ಬಂದು ವಂದಿಸೆ ನಗುತಲಪ್ಪುದರ್ಪ್ಪಿ ಮನ್ನಿಸುತ ।
ಚಂದಚಂದದ ನುಡಿಯುಲುಪಚರಿಪ ಕರುಣಾಳು ಕ್ರೂರತರಮಾಗಿರ್ಪುದು ॥
ಇಂದಿದೇಂ ಕಾರಣಮೆನುತ್ತ ಚಿಂತಿಸಿ ಭಯದೊ ।
ಳೆಂದು ರಘುವೀರ ಭರತಾಂಬಿಕೆಯು ಪೊರೆಗೈದಿ ।
ಬಂಧುರದ ವಿನಯದಿಂ ಬೆಸಗೊಂಡ ನಿಜಜನಕ ಚಿತ್ತಾನುತಾಪವನ್ನು ॥ (3)
ಏನಿದಚ್ಚರಿ ತಾಯೆ ಭೂ ಭೃಚ್ಛಿರೋರತ್ನ ।
ನೇನುಕಾರಣ ಕುಪಿತನಾಗಿ ಬೆರಗಿಂದದೇ ।
ನೂನ ಕಿಲ್ಬಿಷಮುತ್ತಸಿತಂತರಂಗವಮಶುಭವಾರ್ತೆಗಳ್ಬಂದುಃಖ್ಯುತದು ॥
ನ್ಮಾನಸಮೆಂದಿನಿಸಿದವ್ರೊ ನಿಜಬದ್ಧಶಾಸನ ।
ಕ್ಕೂನಮೇಂ ನೋಂಕೆದುದೊ ವಿಹಿತಪ್ರತೀಪಮನೃಪ ।
ರೇನಾದೊಡಂ ಕ್ರೂರತರಕಾರ್ಯಮೆಸಗಿದಗೊ ವಿಸ್ತರಿಸು ಕರುಣದಿಂದ ॥ (4)
ಕರುಣಾರಸಕೆ ಪಾತ್ರ ಭರತನರಿಬಲದರ್ಪ ।
ಹರನೆನಿಪ ಶತ್ರುಘ್ನರೆಡೆಯಿಂದಶುಭವಾರ್ತೆ ।
ದೊರಕಿದುದೊ ಮಾತುಳರ ದೆಸೆಯಿಂದಲಪರಾಧಲೇಶಮೇಂ ಜನನಮಾಯ್ತು ॥
ಚರಣಸೇವೆಯೊಳು ಮನ್ಮಾತೆಯರಾದ್ಯಖಿಳ ಜನ ।
ನೆರವಿಯಿಂ ದುಷ್ಕೃತವು ನೋಂಕೆದುದೊ ವಿಸ್ತರದೊ ।
ಳೊರೆಯದೇಂ ಕಾರಣವಿ ಮಾನವಿಂದಿಹ ನಯ್ಯ ವಾಂಛಲ್ಯ (ಚಾಂಚಲ್ಯ) ಮುಣ್ಕೆ ಮನದಿ॥
ಪಳಿವಾತಿನಧಿಕತೆಯ ಗುರುವಚನ ಗೌರವವ । [(5)
ನಿಳೆಗೊಡೆಯ ನಾಜ್ಞೆಯನದಾರಾದೊಡಂ ಮೀರಿ ।
ಬಳಸುವರೆ ನಿವೃತ್ತಿಯ ದುವೃತ್ತಿ ನೋಂಕದೇಂಕತವಿ ಕೋಪಂ ಬಂದುದು ॥
ಪೊಳದುದೇನುದ್ಧತಾಮಯದ ಸಂಕಟ ಮನದಿ ।
ನಿಳಯದೊಳ್ ವಿಸ್ತರಿಸೆ ತತ್ಪ್ರತೀಕಾರಮಂ ।
ಘಳಲನೆಸಗುವ್ರೊಲೊರೆಯವೇಳ್ಕೆಂದು ನಯವಿನಯ ವಚನದಿಂ ಬಿನ್ನವಿಸಿದಂ ॥
ಪಿರಿಯ ಗುರು ದೊರೆ ಸುರಪಸನ್ನಿಭಂ ಸರ್ವಜನ । (6)
ರೊರೆಯೆ ಪ್ರತ್ಯಕ್ಷ ದೇವಸ್ವರೂಪಂ ಖತಿಯೊ ।
ಳರಿಸೆ ಮನಮಂ ನೋಡುತಾವವಂ ಸುಖವಡೆವ ನೀಜಗದ ಜೀವರಲ್ಲಿ ॥
ಆರುಪಿದೊಡೆ ಭವದೀಯಚರಣಾನುಶಾಸನವ ।
ಶಿರಸಾಭಿನಂದನಂಗೈದು ನಾರ್ಥಂಗೈವೆ ।
ನೊರೆಯವೇಳ್ಕೆಂದಮಿತ ನಮ್ರವಚನಗಳಿಂದಲುಪಚರಿಸಲಿಂತೆಂದಳು ॥ (7)
ಮುಳುಗಿತಾಶಾಸಮುದ್ರದಿ ಲಜ್ಜೆದಾಕ್ಷಿಣ್ಯ ।
ಮಿಳಿತ ಮಾಯಿತ್ತೆತಪ್ಪಸಿರಿ ಬಿಸಿಲ್ಮೊರೆಯೊಳಗೆ ।
ಗಿಳಿತಮೆನಿಸಿತು ಮನೋರಥ ಕಾಳಕೂಟ ನಿಭಕಾನಾರದೊಳ್ಪ್ರೀತಿಯು ॥
ಬೆಳಗೆ ಪುಳಕಾಂಕುರಂ ಮನದಿ ಕಾಕುಣಿಯೆನು ।
ತ್ತುಳಸದುದ್ಧತ ದುರಾಧರ್ಷಹರ್ಷೋನ್ನತದೊ ।
ಳಳ ನೀಲವೇಣಿ ಮುಂತಪ್ಪ ಕಜ್ಜವನೊಪ್ಪಮೆಸಲುಸುರ್ದಳೀ ವೇಳ್ವೆನು ॥ (8)

ಶರೀರಸಂಭೂತ ರುಜೆಯಿಲ್ಲ ಮುಂದೊಂದ ।
ಹಾರೈಪ ಬಗೆಯಿಲ್ಲ ನರಿಭಯು ಕದಾಚಿತ್ತು ।
ಸಾರಲಿಲ್ಲೈ ಪುತ್ರ ಮಿತ್ರ ಭೃತ್ಯ ದೋಷಕೃತ್ಯವಂ ನೆನೆಯಲಿಲ್ಲ ॥
ತೀರಾಯುಕರದಾಧಿಯುಡಸಿರ್ಪುದಿಟ್ಟಿನಲ ।
ಪೂರುವವಮದೇನೆಂದೊಡದಕೆ ರಾಪೆನಿಸಿರ್ಪ ।
ಕಾರಣಂ ನೀನಲ್ತೆ ನೃಪತಿಯ ಮನೋರಥವ ಪ್ರಾಸಲ್ ನಿರುತ್ತರವಹುದು ॥ (9)

ಮೊದಲು ದೇವಾಸುರರ ಕದನದೊಳ್ ಸಂಪ್ರೀತಿ ।
ಯುದಯಿಸಲ್ಕೆನ್ನಲ್ಲಿ ಕರುಣಿಸಿದ ವರಮೆರಡ ।
ಕೆದು ಸಮಯ ಗೆಯ್ಯವೇಳ್ಕೆಂದು ಯಾಚಿಸಿದೆನವನೀಶ ಮಕುಟಮಣಿಯ ॥
ಸದಯಾಂಬುರಾಶಿಯಾಡಿದುದ ಕೋಟಿಯ ಜನಿಸ ।
ಲೊದವ್ವುದು ದುರಿತವಿದೊಪ್ರೊಡೆ ನಿನ್ನದಾಕ್ಷಿಣ್ಯ ।
ದದುಭುತದ ದಯದಿಂದ ಬಿನ್ನಹಾದಂ ನೃಪತಿ ಯುಕುತಿ ಮುಂ ತೋರದನಘ ॥

ಖರಕಿರಣನುರುಬೆಯಿಂ ಗಿರಿಶಿಖರ ಸಿಡಿವಂತೆ । (10)
ಕರಕರದ ನುಡಿಯನಾಲಿಸಿದನಾತುರದಿಂದ ।
ಕರಗಿತತಿಧೈರ್ಯ ನಿರ್ಗಮದ್ಗರಳದರುಶನದೆ ನಿಖಿಲ ಪ್ರಾಣಿಗಳು ತನುವ ॥
ಮರೆದಚೇತನರಪ್ಪ ತೆರದಿಂದ ಬಿವೆಮಸುಕ ।
ದರೆನಿಮಿಷ ಚಿತ್ರಪುತ್ಥಳಿಯಂತೆ ತನ್ನೊಳಗೆ ।
ಪರಿಕಿಸಿಟ್ಟಿಸಿ ಮತಿಯಗತಿಯಿಂವಲಿಂತೆಂಪನೆನುಪಮಂ ನಾತಯೊಡನೆ ॥ (11)

ಶೀತಕಣದಿಂ ದ್ವಾದಶಾತ್ಮಂಗೆ ಭೀತಿಸಂ ।
ಜಾತ ಸಮನಿಪ್ಪುದುಂಟೆ ಯಿತರತುಷಿತ ಶಿಥರಾ ।
ನೀತಾನುತಾಪಕರವೆನಿಪ್ಪುದಚ್ಚರಿಯಾಗಿ ತೋರಿತೀಯುಪಸರದೊಳು ॥
ತಾತನಾಡಿದ ನುಡಿಗೆ ಜಾತುಜಿತು ಪುಸಿಯುಂಬ ।
ಮಾತುಂಟೆ ನೂರಂಚಿನಲಗು ಮಾಹೇಂದ್ರ ।
ದಾತುರಕ್ಕಳ್ಕ ಬಳ್ಕುವುದು ದುಷ್ಕಾಲಗತ್ತಿ ಮತಿಗಗೋಚರಮಂಬಿಕೆ ॥ (12)

ನೆನೆದ ಬಯಕೆಯ ಸಲಿಪ ನಾವನುತ್ತಮಸುತಂ ।
ಮನವೊಲಿದು ಬೇಳ್ದುದಂ ಮಾಳ್ಪನವ ಮಧ್ಯಮಂ ।
ಕನಲಿಸುತ ನುಡಿಯ ಪಾಲನೆಗೆಯ್ಯದಾತ್ಮಭವ ನಾತನೆ ಕನೀಯಸಾತ್ಮ ॥
ವನಧಿಮೇಖಲೆಯಣುಗಿ ಸೌಮಿತ್ರಿ ಧನರನ್ನ ।
ವನು ಬಿಟ್ಟು ಗರವಸೇವಿಸು ತುರ್ಚಿಪನ ಪೊಗ ।
ಲೆನೆ ಜನಪಕೊಪ್ಪುವಂ ತಪ್ಪೆನುಡಿದೆರಡಾಡೆ ನಿಮ್ಮ ಸತ್ಯಮಂಬಿಕೆ ॥ (13)

ಸಂದೇಹಮಿನಿತಿಲ್ಲಮಯ್ಯನ ಮನೋರಥವ ।
ನಂದದಿಂ ಬಿತ್ತರಿಸೆ ಕೈಗೈವೆನಿದು ಸತ್ಯ ।
ಮೆಂದೊಡಂಬಡುತ ದಸುಗೈವೇಳ್ಕುಮೆಂದಿಗುಂ ರಾಮನೆರಡಂ ನುಡಿವನೆ ॥
ಕುಂದದುಸುರೆನಲ್ಪತಿಯಣುಗಿ ನಸುನಗುತ ।
ಳೆಂದಳ್ ಮನೋರಥಂ ಫಲಿಸಿತೆಂಬಾನಂದ ।
ದಿಂದ ಮುಂದಣ ಕಜ್ಜ ಮೋರೆಪೋರೆಗಳಾಗದೆಂದುಮಾಯದ ವಿಸಯದಿ ॥ (14)

ಪಿಂತೆ ನಿರ್ಜರರಸುರರಾಜಿಯೊಳ್ ಸಂಪ್ರೀತಿ ।
ಪಂಕ್ತಿರಥಗುದಿಸಲ್ಕೆ ಪಾಲಿಸಿದ ವರಗಳ ।
ನ್ನಿಂತಿರಿಸಿ ನೃಪತಿಯೊಳಗಾಂ ಬೇಡದಿರ್ದೆ ನೀ ಪರಿಯಂತ ವಸ್ತುಗಳನು ॥
ಅಂತರಂಗದ ಪಾಣೆಯುಲ್ಲ ಸಾಕ್ಷಿಕಸುರರ
ಸಂತೆಯಿಾ ಯವಸರದೊಳಾಂ ಕೇಳ್ದಿನೆತೆ ತನಯ ।
ನೀಂ ತಿಳದೊಡಾಲಿಪುದು ವೃದುದಾಂತ ನಿಜವನುಡಿವಾತರೊಳಗ್ಗಳಸಲಿ ॥ (15)

ರಾಮಚಂದ್ರಗೆ ಯೌವ ರಾಜ್ಯಾಭಿಷೇಕವಂ ।
ನೇಮಿಸಲ್ನೆರೆದಿರ್ಪ ಸಂಭಾರದೊಳಗಿಂದು ।
ವಾಮಕಾತ್ಮಜ ಭರತಗೀ ರಾಜ್ಯಪದವಿಯಂ ಕರುಣದಿಂದಿತ್ತು ಬಳಿಕ ॥
ಈಮಹಿಯನುಳದು ಪದಿನಾಲ್ಕು ವರುಷಂ ಮುನಿ ।
ಸ್ತೋಮದೊಡವೆರೆದು ವನ್ಯಾಹಾರನಿಯಮದಿಂ ।
ರಾಮ ನಿರವೇಳ್ಕಂತು ಕೃಪೆಗೆಯ್ಯೆ ಭವದೀಯಭಾಷೆ ಸತ್ಯವಹಂತುದು ॥ (16)

ಮದ್ವಚನ ರಚನೆಗಳ್ ಶ್ರುತಿಕಲಿತ ಮಾಗಲ್ ಭ ।
ಯಾದ್ವಯಂ ಜನಿಸಿದುದು ಧರ್ಮಲೋಪದೆ ನಿರಯ ।
ಮದ್ವಯಂ ಸತ್ಯವೆನಿಸಲು ಶೂರ ನೀನಾಗೆ ನಿನ್ನದಾಕ್ಷಿಣ್ಯಮಡಸಿ ॥
ಹೃದ್ವನಜದೊಳ್ಕದಕ್ಕದಕೊಂಡು ಬೇಳ್ದೊಡಾ ।
ಖದ್ವಚ್ಛರೋರತ್ನ ಮೌನವಿಡಿದಿಹನಿದು ರ ।
ಘೂದ್ವಹನೆ ನೀಂ ದಯದಿ ಪಾಲಿಸಲ್ವೇಳ್ಕುಮೆನೆ ನಸುನಗುತಲಿಂತೆಂದನು ॥ (17)

ತರುಣಿ ಪರಿಮಾಳಕಲನಂಗೈದು ಭೂಭಾರ ।
ದಿರವ ಮೊದಲಂ ಪ್ರೊರೆವುದೆಂದು ಸುಖರೂಪವಂ ।
ತರಳಂಗೆ ನೇಮಿಸಿದಿರುಭಯಮಂ ಪರಿಕಿಸಿದೊಡೆನ್ನಲ್ಲಿ ವಾತ್ಸಲ್ಯವು ॥
ಭರಿತವಾಗಿದೆ ತಾಯೆ ನೋಯದೆನ್ನಯ ಮನಂ ।
ಹರುಷಗೊಂಬುವದಿಂದೆ ಬೇಗಲಪ್ಪಣೆಗೊಡಲು ।
ಚರಿಪೆನಟವಿಯೊಳು ಪದಿನಾಲ್ಕು ವರುಷಂ ಪಿತನ ನುಡಿಯ ಸತ್ಯಗೈವರೆ ॥ (18)

ರನೆಯುರಗನುಕ್ತಿಯಂ ಪಾಲಿಸುವ್ರೊಡಾಂ ಚೀರ ।
ವಸನಂ ಜಟಾಧಾರಿ ಯೆನಿಸಿ ವನವಂ ಪೊಗುವೆ ।
ಪುಸಿಯೆನೊಂದಂ ತ್ರಿಳವ್ರೊಡಿಚ್ಛೆಪೆ ಪಿತನೆನ್ನ ನುಡಿಸದಿಹುದೇಂ ಕಾರಣಂ ॥
ಪೊಸತೆನಿಪುದಿದಕೆ ಮುನಿಸಂದಾಳಗಲ್ಗದೀ ।
ವಸುಮತಿಯನುಳದು ಮುನಿಯಾಕೃತಿಯೊಳೀ ದಿನವೆ ।
ವೆಸನಗೊಳದೈದುವೆಂ ಸುಖಿಯಾಗಿ ಸಂತಸದೊಳಹುದಿನಿಸ ಮನಕೆ ತರದೆ ॥ (19)

ಧನಕನಕರಾಜ್ಯಮಂ ವಸ್ತುವಾಹನನಿಚಯ ।
ಮೆನಿತುಂಟದಂ ಪ್ರಿಯದೆ ಭರತಗಾಗಿತ್ತವೆಂ ।
ಜನಪಗುರುಪಿತ ಹಿತಕೃತಜ್ಞ ನೇಮಿಸಿದುದಂ ಮಾಡದಾನತಿಗಳೆವೆನೆ ॥
ಕಿನಿಸಿಂದ ಪೊಗವನಿಳೆಗರ್ಪಿಸುತ ಕಂಬನಿಯ ।
ನನುವಿನಿಂದೊಂದ ನಡಿಗಡಿಗಮರ್ಚಿಪುದು ।
ಕಸಲಿಪುದು ಮನ್ಮನವಿದೊಂದನಾಂ ಬೆಸಗೊಳಲು ಪ್ರತಿಪದಂ ಪದವೆನಿಪುದು ॥

[(20

ಭರತನಂ ಬಾಗರೆಯಲಟ್ಟುವುದು ಚಾರರಂ।
ದೊರೆಯೊರೆಯುದಿರ್ದೊಡಾಂ ಪೋಗುವೆ ವನಕ್ಕೆಂದು।
ಹರುಷಗೊಳಸಲ್ ಛಪಚ್ಛತ್ರವಂ ಮತ್ತಿದಕ್ಕೊಣೆಯಂ ಜನಿಸದೆನುತ ॥
ಸುರನಾಥನಂದನಂ ಪೇಳಲಾನಂದದಿಂ।
ತರುಣನಂ ಕರೆಯಲಟ್ಟಿಹೆನಪ್ಪನೀರಥಿಗಳ।
ಪೊರಮಡುವುದುಚಿತಮಾಲಸ್ಯಮಿಲ್ಲದೆನುತ್ತಮೊರೆದಳಾ ಭರತಾಂಬಿಕೆ ॥ (21)

ನಿನ್ನ ಮುಂಗಡೆಯಲೀ ಮಾತನುಸಿರಲ್ಕರಸ।
ಖಿನ್ನತೆಯನಾಂತಿಹಂ ವನಕೆ ನೀಂ ಗಮಿಸದಿ।
ರ್ಪನ್ನ ಸ್ನಾನಾಸ್ನಪಾನಂಗೊಳ್ಳದನುತಾಪಗೊಳುತಿರ್ಪನಿದು ಸತ್ಯಮ್ ॥
ಎನ್ನುವೀ ದಾರುಣದ ವಾಣಿ ಶ್ರುತಿಪಥಮಂಟು।
ವನ್ನೆಗಂ ಹಾ ಕಷ್ಟಮೆನುತ ಭೂತಳಕುರುಳ।
ಬನ್ನಬಡುವಯ್ಯನಂ ಪಿಡಿದೆತ್ತಿ ಸಂತೈಸಿ ರಾಮ ಮಾತೆಯೊಳೆಂದನು ॥ (22)

ಧನಕಾಂಕ್ಷೆ ರಾಜ್ಯಬಭಿಲಾಷೆಗಳ ನುಳಿದು ಸ।
ನ್ಮುನಿಹೃದೋಪಮಮೆನ್ನ ಮನಮಾರಣ್ಯಾವ ಗಮನ।
ದನುಮಾನಮೆಳ್ಳನಿತ ಸೋಂಕದಂಬಿಕೆ ತಾತನಪ್ಪಣೆಗೆ ನೂರುಮಡಿಯೂ ॥
ಬಿನದಂ ಭವದ್ವಾಕ್ಯಮಿಂದಾನುಪೋಗಿ ನಿಜ।
ಜನನಿಗಾನತನಾಗಿ ಸೀತೆಯಂ ಸಂತೈಸಿ।
ಮನದ ಹರುಷದೊಳೈದೆ ಬಂದು ವಂದಿಸಿ ಪೋಪೆನಿದಕೆ ಸಂಶಯಗೊಳದಿರು ॥ (23)

ಈ ರಾಜಧಾನಿಯಂ ಮೊದಲರಸುಗಳ ತೆರದೊ।
ಳಾರಾಜಿಸುತ ಮಖಿಲ ಲೋಕಮ ಪೊರಯಿಪಂ।
ತಾರಾಜನೆನಿಸಿರಲಿ ಭರತ ನಿನವಂಶಜರ್ಸಕಲಮುನಿ ಮಾಳಿಯಿಂ ॥
ನೀರಾಜಿತಾಂಘ್ರಿ ಪದರೆನಿಸಿರ್ಪರಾತಂದ।
ಲಾರಾಜನಾರೈವ ನೆಲಕ್ಕೈದೆ ಪೋಪೆನೆನ।
ಲಾರಾಜ ನಾಲಿಸುತ ಘನರವವನುರೆಕೇಳದಗಸಂಚೆಯಂತಾದನು ॥ (24)

ಎಂದೊರೆದಚೇತನದ ಪಿತಗೆರಗಿ ಬೇಗ ಬಲ।
ವಂದು ಕೇಕಯಸುತೆಗೆ ನಮಿಸಿ ಕಕ್ಷಾಂತರಗ।
ಳೊಂದೊಂದ ಕಳೆಕಳೆದು ಬರುತ ನಮಿಸುವ ಭೃತ್ಯಮಿತ್ರಾದಿಗಳ ನೇಹದಿ ॥
ಬಂಧುರದ ವಚನರಚನೆಗಳಲುಪಚರಿಸಿ ನಡೆ।
ತಂದು ರಾಜ್ಯಾಭಿಷೇಕಾರ್ಥಸಂಭಾರಕಂ।
ವಂದಿಸಿ ಶಶಿಪ್ರಭಾಛತ್ರಚಾಮರಗಳಂ ಮನ್ನಿಸದೆ ಮಮತೆವಿಡಿದು ॥ (25

ಬರುತಿರಲು ಪಿಂತೆ ಮೊರೆವುತ್ತಮುರಗೇಶನಂ।
ತರಿನಿಕೃಂತನ ಸುಮಿತ್ರಾತನಯ ನೈದುತಿರೆ।
ನೆರೆದ ನೃಪಮಂಡಲಂ ವಿಪ್ರಬಾಂಧವನಿಚಯಲೋಕ ವಿಸ್ಮಯಮಾಗುತ ॥
ದೊರೆತನದ ಚಿಹ್ನೆಯೆಳ್ಳನಿತಿಲ್ಲ ವಾಜ್ಞೆಯುಮ।
ಪೆರಸಿ ತ್ವರಿತದೊಳೈನುತಿಹುದಿದೇಂ ಕಾರಣಂ।
ತಿರೆಗಚ್ಚರಿಯು ಬೀರುತ್ತಿದೆ ಎನುತ ಸಲ್ಲಾಪಗೈದು ಚಿಂತಿಸುತ್ತಿರ್ದುದು ॥ (26

ಕರಗತದ ರಾಜ್ಯದಭಿಷೇಕಸಂಭಾರಮುಂ।
ಬೆರತಾದುದೆಂದು ಮನ ಕುಗ್ಗಿದುದೆ ಮಾಲಿನತೆಯು।
ಪೊರೆದುದೇ ಮುಖಮೈಕೆಲಿಂದ ತಂಗದಿರಗೇಂ ಕಲೆಗೂಣಾಯುಂ ಬರ್ಪುದೇ।
ಎರಗಿದರನುಪಚರಿಸಿ ಸ್ನೇಹಿತರ ಸಂತೈಸಿ।
ಪುರಜನವ ಮನ್ನಿಸುತ ಸಂತೋಷಚಿತ್ತದಿಂ।
ದೊರೆಯುಂತೆ ತಾಯ್ವನೆಗೆ ನಡೆತಂದನೊಲವಿಂದ ಚಿಂತೆ ಲೇಶಂ ತೋರದೆ॥ (27)

ಜಡೆಮುಡಿಯುನಾಡದೊಡೆ ಬೇಸರಂಗೊಳಸದೊಡೆ।
ತುಡುಕದೆ ವಿಷಾದಮಂ ತನ್ನಮಾತಾಧಿಕ್ಯ।
ದೆಡೆಯುಲ್ಲಿ ಕಂಡೆಮ್ಮನಾರೈವ ಸ ರತರುವನೈದೆ ಕಾನನಕೆ ಕಳಪಿ॥
ಮಡದಿಯುಳ ನುಡಿವಿಡಿದು ಮುಂದಾವಗತಿಗಳಂ।
ಪಡೆದವೆನೆನುತ್ತರಸನೇಂ ಗೈದನೆಂದೆನು।
ತ್ತಡಿಗಡಿಗೆ ಶುದ್ಧಾಂತದಬಲೆಯರ್ ಕರುಗಾಣದೆಳಗಂದಿಯುವ್ರೊಲಾದರು॥ (28)

ಮರುಗಲಂತಃಪುರಸ್ತ್ರೀಣವೆಡಬಲದಲ್ಲಿ।
ದೊರೆಯುನುರೆ ಬರುನುಡಿಯ ನಾಡುವವರಂ ನೋಡಿ।
ಕರಿಗಮನನವಿಂ ಪೊರೆಗೆ ಬಂದಮಾತ್ಯಾದಿಗಳನುಪಚರಿಸಿ ನಿಳಯುದೆಡೆಗೆ॥
ಬರಲು ಪೊರವಾಗಿಲೊಳದರ್ಸ ವೃದ್ಧರ್ ನಮಿಸೆ।
ಹರುಷದಿಂ ನೋಡುತ್ತಮೆರಡನೆಯ ಬಾಗಿಲೊಳು।
ಧರಣೀಸುರಾದಿಗಳ್ ಪ್ರಾಜ್ಞರಿರೆ ವಂದಿಸುತ ಸಂತವಿಸಿ ಮುಂತೆ ನಡೆದು॥ (29)

ಪೋಗಲಂತಃಪುರದ ಬಾಗಿಲೊಳ್ ಸ್ತ್ರೀಬಾಲ।
ರಾಗಾಹಿತ ಶ್ರೀಕರಿದಿರೆದ್ದು ಮೃದುಕಲಿತ।
ವಾಗಿರ್ಪ ನುಡಿಗಳಂ ನುತಿಸುತಿರಲನಿತರೊಳಗೀ ವಾರ್ತೆಯಂ ತಿಳಪಲು॥
ಪೋಗಿ ಕಂಡರ್ ಪೀರಮಧ್ಯ ಮಧ್ಯಾಸೀನ।
ವಾಗಿ ವಾಚ್ಛಿಯುಮದಿಂದಂತರಾಯಾಪಹೃ।
ದ್ಯೋಗರುದ್ಯೋಗದಿಂದಿರುವ ನಿರ್ಮಲೆಯನುರುಮೌನಿ ಮಸ್ತಕಮಣಿಯನು॥ (30)

ಎಡದ ಮಡದಿಂದೊತ್ತಿ ನಾಲ್ಕುದಳಗಳನಾರ।
ರೆಡೆಯುಲ್ಲಿ ದಕ್ಷಿಣಾಂಘ್ರಿಯನಿಟ್ಟು ದಶದಳದ।
ಜಡಜಮಂ ಬಲಿದು ಪವಿನಾರುಸಂವರ್ತಿಕಾಬಂಧನಂಗೈದು ಬಳಿಕ॥
ತೊಡರಿಸುತಡ್ಡಳವ ನಭ್ರಭೂಶಿಖಿಗಳಂ।
ಪಿಡಿವು ರುದ್ರಸ್ಥಾನ ಮರುತ ವೃಜ್ಮನಗಳಂ।
ತುತುಸೆ ಸರಸ್ವತಿಯು ತನ್ನಯಾವಸ್ಥೆಯಿಂದಿಹ ದೇವಿಯುಂ ಕಂಡನು॥ (31)

ಕುಸುಮಾಕ್ಷತಂ ಲಾಜೆ ದಧಿ ದೂರ್ವೆಘೃತಗಳಂ।
ಲಸಿತ ಜಲಪೂರಿತಸ್ವರ್ಣಕುಂಭಂಗಳಂ।
ಕುಸಮಚೆರುಗಳಲಿ ಕ್ರತುಭುಗನಿಗರ್ಪಿಸುತ ಭೂಸುರರ್ವೆರಸಿ ಬಳಿಕ॥
ನಿಶೆಯೊಳಗೆ ನಿವರ್ಾಯುವೆಸೆವ ಋಜ್ಮಂತ್ರದಿಂ।
ಶಶಿಧರನ ಸತಿಗೆ ವಂದನೆಗೈದು ಸಾಮ್ರಾಜ್ಯ।
ದೆಸಕಕಕ್ಕೆ ನಿರ್ವಿಘ್ನಮಪ್ಪಂತೆ ಮಾಡಿ ಸಿರಿಯರಸನಂ ಜಾನಿಸುತಿಕೆ॥ (32)

ಅನಿತರೊಳು ರಾಮಾಭಿಗಮವಾರ್ತೆಯಂ ದೂತಿ।
ಯನುಸರಿಸುತೆಚ್ಚರಿಸೆ ಜನನಿ ಜನಿತಾನಂದ।
ಮನಸಿನಿಂದೀಕ್ಷಿಸುತಲಿಪ್ಪನ್ನ ಮಹಿತೋನ್ನತಾರ್ಣವಂ ಬರೆ ಕೊರ್ೕಡಕೆ ॥
ಘನರವದೆ ಸಂತುಷ್ಟಿಯಾಗಿರಚ್ಚಿ ಜ್ಯೋತಿ।
ಮಿನುಗೆ ಪ್ರತಿಪದ್ದೃಷ್ಟಿಯಿಂದವಾನಂದಿಸುವ।
ಮುನಿಯಂತೆ ಬೆರದಿರ್ದಳಾತ್ಮಭವನಂ ನುಡಿಸಲೆಚ್ಚರಿಕೆ ಮೈದೋರದೆ ॥ (33)

ಬಂದೆರಗಿ ಭಕ್ತಿಯಿಂ ಕೈಮುಗಿದ ಸುಮನಸಾ।
ನಂದನನ ನಂದನನ ನಿಟ್ಟಿಸುತ ಸುಮವಾಲೆ।
ಯಿಂದಧಿಕ ಮೃದು ರುಚಿರ ವೆತ್ರಬಾಹಾಲತಿಕೆಗಳಲಪ್ಪಿ ಮುದ್ದಿಸುತ್ತ ॥
ಮುಂದುವರಿದಾನಂದನೊಗೆಯೆ ಮಸ್ತಾಗ್ರಮಂ।
ಚಂದದಿಂದಾಘ್ರಾಣನಂ ಗೈದು ತುಷ್ಟಿವಡೆ।
ದಂದದಿಂದಂಕದೊಳ್ ಕುಳ್ಳಿರಿಸಿ ಪರಸಿದಳ್ ರಘುವಂಶವಾರ್ಧಿಶಶಿಯ ॥ (34)

ವರವೃದ್ಧರಾಜರ್ಷಿ ಧರ್ಮಿಷ್ಠರಿಂದಧಿಕ।
ತರಕೀರ್ತಿ ಸಂಪದಾಯುಷ್ಯಗಳನೈದಿ ನೀಂ।
ದೊರೆಮಾಳ್ಪ ಯೌವರಾಜ್ಯಾಭಿಷೇಕಮನಾಂತು ಹರಿವಿಷ್ಟರದೊಳೆಸೆವುತ ॥
ಇರುವುದಂ ನೋಡಿ ಸಂತಸಗೊಂಬೆನೆಲೆ ಮಗನೆ।
ಪರಿಪರಿಯ ಭಕ್ಷ್ಯಭೋಜ್ಯವನುಂಡು ಸಂತೋಷ।
ಕೆರಗೊಳವುದೆನಲವ್ವೆಗಭಿನಮಿಸಿ ಮೆದು ಮಧುರವಾಣಿಯಿಂದಿಂತೆಂದನು ॥ (35)

ಕ್ಷೇಮಂಕರಂ ಭವತ್ಕರುಣಾಕಟಾಕ್ಷದಿಂ।
ಕಾಮವೆನೆ ಕೈಗೂಡಲಹುದಾದೊಡವಸರದಿ।
ಭೂಮಿಪಾಲಂ ಸತ್ಯಸಂಧಮಸ್ತಕಮಣಿಯುದಾರತೇಜೋರಾಶಿಯು ॥
ನೇಮಿಸಿದ ತತ್ವಮಂ ವಿಸ್ತರಿಸಿ ತ್ವತ್ಪಾದ।
ತಾಮರಸಕೃತರಲಿಂದೈತಂದೆ ನೋಡೆನುತ।
ರಾಮಪುರನಾಯಕಂ ಮಾತೆಯೊಳ್ ಪೇಳ್ವುದಂ ಮುಂದೊರೆವೆನಗಸಂಭವೆ ॥ (36)

(ಸಂಧಿ 8, ಪದ 353.)

## ಒಂಬತ್ತನೆಯ ಸಂಧಿ.

**ಸೂಚನೆ** ॥ ತಾತನಾಡಿದ ನುಡಿಯ ಸತ್ಯಮೆಂದೆನಿಸುವರೆ।
ಮಾತೃಯ ಮನೋರಥಂ ಜಾತುಚಿತ್ತುಸವಿಕಲ್ಪ।
ರೀತಿ ಯನುಸರಿಸಿಡಂತುಪಚರಿಸಲನುಗೈದನನುಜನಂ ರಘುವೀರನು ॥

ಭರತಗೀರಾಜ್ಯಾಧಿಪತ್ಯಮಂ ದಯೆಗೈದು।
ಸುರುಚಿರದ ವನ್ಯಮೂಲಾಹಾರ ಯಮಿಗಳಂ।
ಪರಿಪಾಲನಂಗೈಯೆ ಪದಿನಾಲ್ಕುವತ್ಸರಂ ವಾತ್ಸಲ್ಯದಿಂದಮೆನಗೆ ॥
ದೊರೆ ನಿಯಾಮಕಗೈದಕತದಿಂ ಫಲಾಹಾರ।
ನಿರುಗೆಯಾಗಿರಲದಂ ಬಿಟ್ಟು ಸಿದ್ಧಾನ್ನಮಂ।
ವರಿಸಲೆಂತಹುದವ್ವೆ ಯೆಂದನಾ ರಘುವರಂ ಶೈಲಾಧಿರಾಜತನುಜೆ ॥ (1)

ಶೀತಾಳು ಕಮಲೋಪವೀತಮೆನಿಸಲಾಮೊಗಂ ।
ವೇತಾಳಸೋಂಕನನುಕರಿಸಿ ಒರೆ ಶುಭರದಂ ।
ಸೋತಾಳಿಯಿಂದದೊಳ್ಕೆಡೆದಳೆಪ್ರಿಯವಾಣಿ ಶ್ರುತಿಕಲಿತಮೆಂದೆನಿಸಲು ॥
ಭೀತಾಳಿಯೊಳ್ಕುರುರ ನಿಕರದಂದದಿ ಸೋಡಿ ।
ಮಾತಾಡಲಮ್ಮದುಮ್ಮಳಗೊಂಡು ರಘುವರಂ ।
ಆ ತಾಳದೆತ್ತಿ ಕುಳ್ಳಿರಿಸಿ ಸಂತೈಸುತಂ ಮಗುಳೆ ಮೃಾಸದೊಳ್ವರ್ದನು ॥ (2)

ಏಸಿ ಬಜ್ಜಣೆಗಳಂದಖಿಲೋಪಚಾರಗಳ ।
ರಾಸಿಗಳ ಸೆಸಗಲೆಚ್ಚತ್ತು ನಿಟ್ಟಿಸುತಾಗ ।
ಳಾಸತೀಮಣಿ ರಾಮಚಂದ್ರನೊಡನಿಂತೆಂದಳೆಲೆಮಗನೆ ಪತ್ರಿಯ ದೆಸೆಯಿಂ ॥
ಈಸು ಸುಖಮಂ ಪಡೆಯದಾದೆನ್ನೈ ನಿನ್ನಿಂದ ।
ಲೇಸನಾರ್ಜಿಪೆನೆನ್ನುವಾಸೆಯಿಂದಿರೆ ಬಂದು ।
ದೀ ಸಮಯದೊಳಗತುಳ ದುಸ್ತರ್ಕ್ಯ ವಿಘ್ನವುನ್ನೇನೆಂಬೆ ಕೃತಕೃತ್ಯಮಂ ॥ (3)

ಕಲಿತಮಂತ್ರೌಷಧಿಗಳೆಲ್ಲ ಸಫಲಗಳಂದ ।
ವಲಘು ಸಂಕಲ್ಪಸಿದ್ಧಿಗಿತಾತ್ಮಸಂತೋಷ ।
ಕಲಿತನಿಧಿ ಕಂಗೆಸೆದುದೆತ್ತುವೆನೆನುತ್ತತುಳ ಸಂಭ್ರಮಂಗೊಳುವೆಡೆಯೊಳು ॥
ಬಲಿತಚಿಕುರಂಗಳಂ ಕದರಿ ಕೆಂಗಿಡಿಗಣ್ಣ ।
ನಲುಗಿಸುತ ಪಿಡಿಯಲವ್ವಳಸುವ ಪಿಶಾಚಿ ಬಂ ।
ದಲೆವಂತೆ ಕೈಕಾಮಹಾಭೂತವಾಕ್ಯಮಿಸಿತಸ್ಮನ್ಮನೋರಥವನು ॥ (4)

ನಿರತಿಶಯ ಸುಖವನನುಭವಿಪೆನೆಂಬಾಸೆಯಲಿ ।
ಚಿರಕಾಲ ತಪವಿರ್ದು ಪಡೆದು ಪುತ್ರರ ಹರುಷ ।
ತರಗೊಂಬ ಸಮಯದೊಳಗನಿಷ್ಟ ಸಂಭವಿಸಲಾನೆಂತು ಪೊರೆದವೆನಸುವನು ॥
ತರುಣರಂ ಪಡೆವುದತಿದುಃಖಾಕರಂ ಮಕ್ಕ ।
ಳಿರಿಯದಳಗನಿತೆ ಪುಸಿ ಶೋಕಮೆಂಬೀಗಾದೆ ।
ಪರಿಕಿಸೆ ನಿಜವಾಯ್ತು ಹಂಕಾರಮುಂ ಪೋಯ್ತು ವಿಧಿಕೃತವಿೂರದಾಯ್ತು ॥ (5)

ತನಯಗತಿಶಯರಾಜ್ಯ ಸಿರಿಯಡಸೆ ತನ್ಮಾತೆ ।
ತನುಭಾವವಂ ಮರೆದು ತನ್ನವರ ಮುಂಗಡೆಯ ।
ಲನುದಿನಂ ಬಿರುನುಡಿಯ ನಾಡುತಿರಲಾಂ ಕೇಳ್ದನಾಥೆಯಂದದಿ ತೊಳಲುತ ॥
ತನುವ ಪೋಷಿಪುದಕೆಂದಧಿಕ ಸುಖ ನಿನ್ನೊಡನೆ ।
ವನದಿ ತಾಪಸಿಯೆನಿಸಿ ದಿನವ ಕಳೆದವೆನೆಂದು ।
ಮನದ ಸಂಕಟದಿಂದ ಮಗನೊಳಂ ಪೇಳ್ದದಂ ವಿಸ್ತರಿಸಲೆಂತಪ್ಪುದು ॥ (6)

ಹರಿಯಶಾವನೋಸ್ಮಾದಿ ಮೆರೆವ ಸೀಧುರಸಾಪ್ತ ।
ಚರಣದಪ್ಸ್ಕಾಳ ಸನ್ಮೈತ್ರಿ ವೈಕಾಚವಿಧ ।
ಕೊರೆಯ ಲಿಂತಹುದವಿತ ವೈಭವದ ದುರ್ಮೇಧೆ ಸಿರಿಯಡಸೆ ಪರರನೆಂತು ॥
ಅರಿದಪಳೆ ನರರೆಂದು ದುರುಳೆಯಾಜ್ಞಾಕಲಿತ ।
ಪುರಜನಪರಿಜನರ್ಕಾಣದೆಡೆಹುತಮೆನ್ನ ।
ಪೊರೆದವರದಾರೆಡರ ತಿಂತಿಣಿಯೊಳಂತಿರಲಕ್ಕು ಪರಿಪಂಕ್ತಿಗಳೊಳು ॥ (7)

ಪತ್ತಾರುಸಾಗಿರದ ವರುಷ ತಪದಿಂ ಬಯಸಿ ।
ಪೆತ್ತು ನೇತ್ರೋತ್ಸವಂಗೊಳುವೆಡೆಯೊಳನಿತೀ ವಿ।
ಪತ್ತಡಸಲೆಂತಸುವ ಪೊರೆದಪಂ ಮೃಗಿಗಳನ್ನಲೆವ ಕಾಠಿಣ್ಯ ಶುನಿಯು ॥
ಪೊತ್ತದೊಳ್ ಮಸೆಗಟ್ಟ ಬಾಳ್ವುದೇನಯ್ಯ ನೃಪ ।
ಸತ್ತಮನೆ ನೀಚತೆಂದತಿನೀಚಕರಮೆನಿಪ ।
ತತ್ತರದೊಳಾನಿರ್ಘ್ನದನುಚಿತಂ ನಿನ್ನೊಡನೆ ಕರೆದೊಯ್ವುದಧಿಕ ಲೇಸು ॥ (8)

ಎತ್ತಣಿಂದೆಯ್ತಂದುದಿಂದ್ರಜಾಲೋಪಮಿತ ।
ಮಿತ್ತು ಕೈಕಾವಚನ ರೂಪಾಂತು ಕಾಲಕೂಲ ।
ಪೆತ್ತುದಂ ನೃಪಕೇಳ ಬಳಕಪ್ಪಣೆಯನಿತ್ತು ನಿಷ್ಕೃಪೆಯೊಳೀವೃತ್ತಮಂ ॥
ಎತ್ತಲಾದುದು ಕನಸು ಲರಿವೆನೇ ಕರ್ಮಫಲ ।
ಪೊತ್ತರಿಸಲನುಭವಿಸದನ್ನ ತೀರದು ಭಾಷೆ ।
ಪೆತ್ತು ಭರದಿಂ ಮನೋರಥವಾದುದೇಂ ಪೇಳ್ವ ವಿಧಿವಶವ ಮೀರಲಳವೆ ॥ (9)

ಅವಧಿಯಿಲ್ಲದನಂತಚಿಂತಾಪ್ರಳಾಪದಿಂ ।
ದವಿರಳದ ದೈನ್ಯಗೊಳುತಿಹ ಮಾತೆಯಂ ನೋಡು ।
ತವಸರದ ವಾಣಿಯಿಂ ಸೌಮಿತ್ರಿಯಿಂತೆಂದ ತಾಯೆ ಕರಗತದ ಸಿರಿಯು ॥
ನವಸಿ ವನಕೈದುವುದನೌಚಿತ್ಯಮುದಪನಿಂ ।
ಯುವತೀವಶಂವದಂ ದುರ್ನೀತಿ ಜರಠ ಮೇ ।
ಲವಿವೇಕದಿಂ ನುಡಿದ ನುಡಿ ಸತ್ಯಮೆಂದಾರೊಡಂಬಡುವರೀನೆಲದೊಳು ॥ (10)

ಉದಿತ ದಕ್ಷಂ ದಾಂತ ಶಾಂತ ಸರ್ವಾಲಪ್ಪದಿ ? ।
ವಿದಿತಾಗಮಾರ್ಥ ಪಿತೃಮಾತೃವತ್ಸಲ ಮೃದುಲ ।
ಸದಯನಾಗಸರಹಿತ ರಘುವೀರನಂ ವನಕೆ ಪೋಗೆಂದನೆಂತು ನೃಪತಿ ।
ಅದುಭುತೋನ್ಮತ್ತ ಪ್ರಳಾಪದಿಂದೀಧರಾ ।
ಭ್ಯುದಯಗಳನುಳದಟವಿಗೈದುವುದಿದೇಂ ಭರತ ।
ಪದವಿಗೈತಹನೆಂತು ಸ್ತ್ರೀವಚನಕಳ್ಕುವುದು ವೀರಮತವಲ್ಲಂಬಿಕೆ ॥ (11)

ಮರದಿಷ್ಟಮಂ ಮದನಪಾರವಶ್ಯತೆಯಿಂದ ।
ಮರೆದು ಕೃತ್ಯಾಕೃತ್ಯಮತಿಯನುಚ್ಛೃಂಖಲತೆ ।
ವೆರೆದವಂ ಗುರುವಾದೊಡಾತನಂ ಶಿಕ್ಷಿಸುವ್ರೊಡಿದು ಧರ್ಮಸಿದ್ಧಾಂತವು ॥
ಭರತನಂ ತಂದಿಟ್ಟು ದುಷ್ಕಾರ್ಯ ಕರಣಿಗಳ ।
ನೊರಸಿ ನಿರ್ಮಾನುಷ್ಯವೆನಿಪೆನೀ ಧರಣಿಯಂ ।
ತ್ವರಿತದಿಂ ತೋರ್ಪೆನಿಂದಗ್ರಜನ ಪದಯುಗಕೆ ಭುಜಬಲಪರಾಕ್ರಮವನು ॥ (12)

ಅಬಲಾವಚನದಿಂದ ಕರಗತದ ದೊರೆತನವ ।
ನಬಲಾಗತಮೆನಿಸಿ ಪೋದೊಡೆಮ್ಮಂ ಲೋಕ ।
ಮಬಲಾಖ್ಯಗೈದಿಹರೆ ನೆರೆದರಿಗಳಂ ತರಿದು ಕೈಗೈವೆ ನರಸುತನವ ॥
ಅಬಲಾನನೋದ್ಯುಕ್ತ ಮಾತುಳನ ನೊಡವೆರೆದು ।
ಸಬಲಾಖ್ಯಹೊಂದೆನಿಸಿ ಭರತನೈತಂದೊಡಂ ।
ಶಬಲಾಳಿಯೆನಿಸುವೆಂ ಶಾಕಿನೀಗಣಕೆಂದು ಪಲ್ಮೊರೆದು-ಗರ್ಜಿಸಿದನು ॥ (13)

ಇಂತನಂತ ಕಠೋರ ತರ ನುಡಿಗಳಿಂದ ಕ ।
ಲ್ಪಾಂತರುದ್ರನ ತೆರದಿ ಕೋಪಿಸುವ ಸೌಮಿತ್ರಿ ।
ಯಂತರಂಗಾ ಕ್ರೋಶಮಂ ತಿಳಿದು ಘಸಿನಗೆಯೊಳಾತನೊಡಂಬಡಿಪೊಡೆ ।
ಚಿಂತಿಸುತ ತನ್ನೊಳಗೆ ತಾನೆ ದುಃಖಾಸ್ಪದಕೆ ।
ಶಾಂತಿ ವೇದಾಂತಬೋಧೆಯೊಳಲ್ಲದುಳಿದವೈ ।
ತ್ಯಾಂತದಿಂ ಕಡೆಗೊಳಸಲೆಂದು ಲಕ್ಷ್ಮಣನೊಡನೆ ಮೃದುತರವೊಳಿಂತೆಂದನು ॥ (14)

ಹಾಲಾಹಲದಿ ಪುಟ್ಟ ಹತ್ತಿ ಸತಿಯರ ಚಿತ್ತ ।
ಮೇಲಾನುಸರಣೆಯಿಂ ವರ್ಧಿಷ್ಣುವಾಗಿ ಯುವ ।
ಲೀಲಾನುಕಾರಮಂ ಪಡೆವಗ್ನಿಯೊಲ್ ಪ್ರಾಧತರವೆನಿಪ ಪಾಪಂಗಳ್ ॥
ಮೇಲಾದ ವೃತ್ತಿಗೊಳಿಸುವ ಕ್ರೋಧಮಂ ನಚ್ಚಿ ।
ಬಾಲಾನುಲಾಪದಿಂ ದುನ್ಮತ್ತನೆನಿಸಿ ಭೂ ।
ಪಾಲತೆಯ ಪಡೆವೆನೆಂಬುತ್ಸವದಿ ತೊಳಲುತಿಹ ಮರುಳೆ ಮತ್ತದನರಿಯದೆ ॥ (15)

ಕೋಪಗೊಂಬುದೆ ಸಕಲ ಪಾಪಕ್ಕೆ ಕಾರಣಂ ।
ಕೋಪವೆಂಬುದೆ ಸಾಧುಸಂಗಪ್ರತಾರಣಂ ।
ಕೋಪವೆಂಬುದೆ ಸಕಲ ಸನ್ಮಾರ್ಗದ್ವಾರಣಂ ಚಿತ್ತವೈಕಲ್ಯಕರಣಂ ॥
ಕೋಪವೆಂಬುದೆ ನಿರಯಸೌಖ್ಯಗಳನೊಳಕೊಂಬ ।
ಕೋಪವಶುಭಾಗಾರವಪಯಶೋಮಂದಿರಂ ।
ಕೋಪವಾದ್ಯಂ ಬಧಿರಮೂಕಜಡತಾನಿಲಯ ವಿಲಯಶ್ರೇಯಃ ಶ್ರೇಣಿಕೆ ॥ (16)

ಶಮನಿಂದ ಭೇದವೀ ಕ್ರೋಧಮದರೊಳ್ ಜನಿತ ।
ಕಮನ ತೃಷ್ಣಾದ್ಯಖಿಲ ಪಂವಾರವೊಡವೆರೆದು ।
ಕ್ರಮದಿಂದ ಪುರುಷನಂ ಮೋಹಿಸುತ ಸನ್ಮಾರ್ಗಸರಿಗೆಳಿಪ ಕೆಂಗೆಂಡದ ॥
ಧಮನಿಯಂ ಸುಖವೆಂದು ಮುದ್ದಿಸಲೆತ್ತಣಗೆ ಸುಖ ।
ಸಮನಿಪ್ಪುದೆ ದೀಪಕಳಿಕಾಸ್ವಾದನಂಗೈವ ।
ಭ್ರಮೆಗೊಳ್ವ ಖದ್ಯೋತದಂದಪ್ಪುದಲ್ಲಪೀ ರೋಷ ಹರ್ಷಮನೀವುದೇ ॥ (17)

ಎಲುಮಜ್ಜೆ ಮಾಂಸಾಂತ್ರ ಮೇದಸ್ಸುರಕ್ತಸಂ ।
ಕಲಿತ ಸರ್ವಾಶುಚಿನಿಧಾನ ಮೂಳ್ಪುಪಕೃತಿಯ ।
ನಿಲದನಿತ ಗಣಿಸದ ಕೃತಘ್ನ ಜಲಬುಲ್ಬುದಪ್ರಾಯಮೀದೇಹ ಬಳಿಕ ॥
ಹಲವುಸುಖಕಂ ಗಾಳ ಮೇಘಾಳಿ ಮಿಂಚುಗಳ ।
ಸಲಲಿತಪ್ರಿಯಮಿದಂ ನಚ್ಚಿ ಮತಿಯಂ ಚುಚ್ಚಿ ।
ಕೊಲೆಗೆಳಸುತಿಹುದಾವ ಮೇಧೆಯೀ ದುರ್ಬೋಧೆಯೆಂತು ಸಂಜನಿಸಿತಕಟ ॥ (18)

ತಾರುಣ್ಯ ಯೌವನಾದಿಗಳೆಲ್ಲ ವೀಚಿಕಾ ।
ಕಾರ ಸ್ತ್ರೀ ಭೋಗಾದ್ಯನೇಕಸುಖಮುಂ ತಡಿ ।
ತ್ಸ್ವರ ಸ್ವೀಕಾರ ತಪ್ತಾಯಸೋಪರಿಪತಿತಕಂಕಣಕ ಮಾಯುಸ್ಸಿದಃ ॥
ತೋರುವೀ ವಿಶ್ವಮೆಲ್ಲಂ ಸ್ವಪ್ನ ಗಂಧರ್ವ ।
ವೀರ ನಗರೋಪಮಿತಮಿದ ಸತ್ಯಮೆಂದೆಣಿಸಿ ।
ಧಾರುಣಿಯೊಳುಂ ಸುಖವ ಬಯಸುವರು ದಪ್ಪಾಹಿ ಹರಿದಂಶಮಂ ಗ್ರಹಿಪೊಲು ॥ (19)

ಬಾಲತನದಿಂದೊಂದು ನಿಮಿಷ ಯೌವನದಿ ಸ್ತ್ರೀ ।
ಲೋಲನೆಂದೆನಿಸಿಪ್ಪರ್ ದರೆನಿಮಿಷ ಧನಧಾನ್ಯ ।
ಜಾಲದಾಢ್ಯತೆ ವೆರೆದನೆಂದು ಬೀಳುವ ಹೆಮ್ಮೆಯೊಮ್ಮೆ ಮತ್ತೊಂದುನಿಮಿಷ ॥
ಮೇಲಿದಾರಿದ್ರ್ಯಮರೆನಿಮಿಷ ನರೆಜರೆಯಿಂದ ।
ಸೋಲಿರುವತನುವಿನಿಂದರೆನಿಮಿಷ ಶೇಷಗಳ ।
ಲಾಲಿಸುವ ಖಿಜನಂತೆ ತೋರುತಡಗುವ ಸುಖವ ಬಯಸುವರೆ ಬುದ್ಧಿಪರರು ॥ (20)

ಪೋಲಿದೇಹ ಮಾಕಾತರನಾಶಿ ಭೋಗಗಳೆಂಬ ।
ರಲೆವವರೆ ನಿಮಿಷಬಿಡದವೀ ರೋಗಸಂದೋಹ ।
ಕಲಿತವಾಗಿಪ್ಪುದು ಜರಾಪ್ರಕ್ಷೆ ನೋಡುತಿಹಮೃತ್ಯು ಶಾರ್ದೂಲ ಬಳಕ ।
ಸೆಲದೊಳುಂ ಪುಟ್ಟಿ ಪೋಪುವ ನೋಡಿ ಕಾಣವಂ ।
ತಲಘುಪ್ರಯತ್ನಗೈದಪರಸ್ಯೆಶೋವಣೆಗೆ ।
ಬಳುಕುತಿಹರೇಂ ಬೇಳ್ಪ ಮೂಢರಜ್ಞಾನದಿಂ ತನುಸುಖವ ಬಯಸಿ ಬಯಸಿ ॥ (21)

ಸತಿಯಿಲ್ಲದೊರಕಲುಂ ಸುತರಿಲ್ಲದಾದೊಡೇ ।
ನತಿಶಯದ ಧನವಿಲ್ಲ ದೊರದಡಿದಗೊಳಗೊಂದು ।
ವಿಧಿಕರಂ ಬಂದಡಸಲತಿಕ್ಲೇಶ ತೊಳಲುತಿರಲನಿತ್ರೊಳು ಮೃತ್ಯುಬಾಧೆ ॥
ಜೊತೆಗೊಂಬುದೆಂಬ ದುಃಖದ ಬಾಧೆಯೊಳ್ನರಳ ಪೊರಳುತಂ ।
ಕ್ಷಿತಿಯೊಳೀದೇಹಿಗಳು ಪಶುಗಳಂದದಿ ತಿಳಿಯ ।
ದತಿಶಯದ ಸುಖಗಳನು ಸಾರ್ಥೈಪರನಾವಿನಪಿ ಮೌಖ್ಯದಿಂದೀ ಪುಸಿಯನು ॥ (22)

ತೀಡುವೆಲರಿನಗಂಪು ತೀವಾಭ್ರಗಳ ಗುಂಪು ।
ಮೂಡಿಬಹ ಚಪಲಾತಿ ಶಯದಿಂಪು ತೈಜಸದಿ ।
ಕೂಡಿರುವವೈಭವದಲಂಪು ಕಂಗೆಸದಿರುವ ಮೃಗತಮರೀಚಕದ ತಂಪು ॥
ಸೂಡುತಡಿಗಡಿಗೆತರ ಸೊಲುಗಳಸುತ್ತಿಹ ಜಡರ ।
ನಾಡಬಾರದತೊಡರ ನಡುಪಥೀನರ ನೋಡೆರ ।
ಬೀಡೆಂಬುದರಿಯದಿದ ಚಿರಮೆನುತ ಲಾಲಿಸುವ ಮೂಢರಿಂಗೇನೆಂಬೆನು ॥ (23)

ಶತಕೋಟಿ ಬ್ರಹ್ಮಾಂಡದದರೊಳಗಿದೊಂದಂಡ ।
ಕತಿಪಯದ್ವೀಪಂಗಳವರೊಳೊಂದೀ ದ್ವೀಪ ।
ಕ್ಷಿತಿವಿಭಾಗದೊಳು ನವಖಂಡವಿಖಂಡದಲಿ ಚಪ್ಪನ್ನದೇಶದೊಳಗೆ ॥
ಕತಿ ಖೇಟಖರ್ವಾಟ ನಗರಮಾಭೀರಗಳ ।
ಜತೆಯೆನಿಪ ಪತ್ತಣದೊಳಖಿಳ ಬಾಗೆಗಳಿಳದು ।
ಕ್ಷಿತಿಯೊಂದೆಗೇಣಿಲ್ಲದಿಲ್ಲ ಮಿದಕೋಸುಗಂ ಬಯಸುವರ್ಬಯಲಾಸೆಯಿಂ । (24)

ಪಿತಮಾತೆಸೋದರರ್ಸತಿಸುತಬಾಂಧವರ್ ॥
ಹಿತವೆನಿಪ ಭೃತ್ಯಾದ್ಯರೆಲ್ಲ ಪ್ರಾರಬ್ಧಸಂ ।
ಗತಿಯಿಂದ ಪಾನೀಯಶಾಲೆಯೊಳ್ ನೀರಡಿಕೆಗೋಸುಗಂ ನಿಖಿಲ ಜನರು ॥
ಜತೆಗೂಡಿ ತೃಷೆಯನಪಹರಿಸಿ ಪೋಪಂದದಿಂ ।
ರತಿಗೊಳಿಸಿ ನಿಜಗತಿಗಳರಸಿ ಕೊಳ್ಳುವರೆಲ್ಲ ।
ಯುತನವಾಗೋರ್ಸುಗದಿ ಮೂಢರೆಳಸುವರ್ಕೈಸೆ ಪುಸಿಯ ಬಯಲಭ್ರಾಂತಿಗೆ ॥ (25)

ನರಪತ್ರಿಗಳಾಶ್ರಯಿಸಿ ತರಿದರಿಕುಲಂಗಳಂ ।
ಧರಣಿಧನಧಾನ್ಯಗಳ ಗ್ರಹಿಸಿ ಸಂಬಂಧಿಗಳ ।
ಪೊರೆದು ತನುಸುಖಕೆಂದು ದುಷ್ಕೃತ್ಯಗಳವಮಾಡಿ ನೋಡದಾಯಾಸಗೊಂಡು ॥
ಮರುಳರಂದದಿ ನರಳುತಿರುವರರಿಯದೆ ಕಡೆಗೆ ।
ನರಿನಾಯ್ಗಳಿಂಜಪಿಸಿ ಮೃದ್ಭಸ್ಮಮಯಮಪ್ಪ ।
ನಿರುಗೆ ಮಾಯಾವರಣ ಮಹಿಮೆಯಿಂದೇನೆಂಬೆನೆಂತೊರೆವೆ ನದರ ಸಿರಿಯ ॥(26)

ಧರೆಜಲಮರುತ್ತಗ್ನಿ ಯಾಕಾಶದಿಂ ಜನಿತ ।
ಕರಣ ದಶಕಂಗಳಂ ತನ್ಮಾತ್ರೆ ಬುದ್ಧಿಯೊಡ ।
ವೆರೆದ ಮಾನಸ ಮಹಂಕಾರ ಚಿತ್ತಾದಿಗಳ ಕ[ತದಿಯೊ] ಮೂರ್ತಿಬಳಿಕ ॥
ವಿರತ ಪದಿನೇಳುತತ್ವಕಾರ ಸೂಕ್ಷ್ಮತ ।
ತ್ರೈಗೆಯಲವಿಕೃತಿಕಾರಣಾಖ್ಯವಿಹ ಮೂರನುಂ ।
ಪರಿಕಿಸಿದರಂದಿರಂ ಪುರುಷ ನಿರ್ವಿಕಾರ ಭೋಗಿಗಳ್ತನುಗಳತ್ತಿ ॥ (27)

ಮೂಲಪ್ರಕೃತಿಯಿಂದ ಜನಿಸಿದ ಮಹತ್ತತ್ವ ।
ಮೇಲಹಂಕಾರಮಂ ಸೃಜಿಸಲವು ಪ್ರ[ನೀತ]ಕಂ ।
ಲೀಲೆಯಿಂ ಮೋಹಿಸುತಲಖಿಲ ಕರ್ಮಂಗಳಂ ಪೊರಗುತ್ತಂ ಮತ್ತಾತಗೆ ॥
ಕಾಲಕರ್ಮಗಳುಂಟು ಮಾಡಿದುರ್ಗತಿ ಸುಗತಿ ।
ಯಾಲೋಕನಂ ಗೊಳಿಸಿ ಸಂಸರಣೆಯೆನಿಸುತಿಹು ।
ದಾಟೋಕಿಸಲ್ಪುರುಷ ನಿರ್ವಿಕಾರಂ ಭೋಗದುಃಖಂಗಳೊಂದಂಟನು ॥ (28)

ದಶವಾಯುಗಳು ಕರಣ ಪತ್ತಹಂಕಾರಾದಿ ।
ವಶವೀ ಪ್ರಪಂಚಗಳು ಗುಣ ಮೂರರಾಕಾರ ।
ಮಶುಭಭಾಗಾರ ಮೆಂದರಿ(ದು) ಸುವಿವೇಕದಿಂ ಶಾಂತಿಯಂ ಗೊಳಿಸೆ ಬಳಿಕ ॥
ಕುಶಲಮಪ್ಪುದು ಹರುಷ ಕಾಮಧುಗ್ಬೇಡಿದುದ ।
ವಶಗೈವುದಾಶ್ರಮದಿ ನೋಡಿದರೆ ನಿರ್ವೈರ ।
ವಿಶದಮೆನೆ ಕಾಣ್ಪುಡುಗುವಮಾನಂದ ತನ್ನಿಂದತಾನೆ ಸಂಭೂತಮಹುದು ॥ (29)

ನೀರಮೇಲಣಗುಳ್ಳೆ ಕಾಷ್ಠವಿಷ್ಟೋಪಮಂ ।
ಶಾರೀರ ಮಲ್ಪಾಯು ಮಖಿಳರೋಗಾಗಾರ ।
ತೋರುತಡಗುವುವು ತಾರುಣ್ಯಾದಿಗಳು ತರಂಗೋಪಮಿತಮಿಬಾಳ್ಕೆಗೆ ॥
ಆರುಬೋಧಿಸಿಗ್ರಹಿಸಿದರ್ಥಮಂ ಭುಂಜಿಸುವ ।
ರಾರುಪುರುಷಂ ನಿರ್ವಿಕಾರಿಯೆಂದರಿದಿದಂ ।
ಸಾರೆ ಶಾಂತಿಯು ಪಗೆಗಳಲ್ಲಿಯುಂ ಸಂಜನಿಸಲತಿ ಸೌಖ್ಯ ಕೈ ಸಾರ್ವುದು॥ (30)

ಬಸಿಗದಿರನು ದಯಾಸ್ತಮಾನದಿಂ ದಾಯುಷ್ಯ ।
ನಸಿದಖಿಲ ಪ್ರಾಣಿಗಳ್ಕಾಲವಶರೆಂದೆನಿಪ ।
ರಸುರ ರೂಪಿನಹಮ್ಮಿನೆಮ್ಮಿ ತಿಳದಿಟ್ಟಿಸಿದರೆಲ್ಲ ಪುಸಿನುಸುಳ ಬಳಗಂ ॥
ಗಗಣಿಗೊಳ್ಳದೆ ಬಯಲ್ಭ್ರಾಂತಿಗಳ ನಪಹರಿಸಿ ।
ಸಸಿನೆ ನಿತ್ಯಾನಂದ ಮಯನೆನಿಸಿ ಬಾಳ್ವುದೆಂ ।
ದುಸುರಿ ಮಾತೆಯೊಳೆಂದ ವಿಜ್ಞಾನಸಕರ ಕಂದ ರಘುಜ ನಾನಂದದಿಂದ ॥ (31)

ಬೊಪ್ಪನನುಶಾಸನದಿ ಬನಕೆಪೋಗಲ್ಬೇಗ ।
ಲಪ್ಪಣೆಯನಿತ್ತು ಕಳುಪಿದೊಡೆ ನಿಯಮವಸಲಿಸಿ ।
ಬಪ್ಪೆಂ ಭವತ್ಪದಾಂಬುಜದೆಡೆಗೆ ದಯಗೈವುದೆಂದು ನುಡಿಯಲ್ಕೇಳುತ ॥
ಅಪ್ಪ ಭರತಗೆ ರಾಜ್ಯಸಿರಿಯನಿತ್ತಾದೊಡಂ ।
ತಪ್ಪದಿಂದೆನ್ನ ದೃಗ್ಪಥವನಗಲದೆ ಸುಖದೊ ।
ಳಪ್ಪುದುಚಿತವು ಭವತ್ಪ್ರೀತ ನಸುಮತಿಯಂತೆ ಮಾತ್ರನುಡಿಯಲ್ತೆನಿನಗೆ ॥ (32)

ಗುರುವಚನ ಗೌರವದಿ ಭರತಗಾಗ ಲಿರಾಜ್ಯ ।
ಸಿರಿಯ ಪಂಗಿಲ್ಲೆನಗೆ ಸಿಂಹ ಸಿಂಹನನ ನೀ ।
ನಿರೆ ಕಂಗಳ್ಗದಿರಿನಲಿ ಸಕಲ ಸಂಭ್ರಮದಿ ಸಂಭೂತವಾಗಿಹವು ಗೃಹವು ॥
ಕರುಣವಿಲ್ಲದೆ ಬನಕೆ ತೆರಳ್ವೆಯಾದೊಡೆ ಜೀವ ।
ಧರಣ ಗೈವಪುದಿಲ್ಲವೆಂದು ನಿರ್ವ್ಯಾಜ ದು ।
ಷ್ಕರದುಃಖ ಸಂಕಲಿತವಾದ ವೃದುದ್ಭೈನ್ಯದಿಂ ನುಡಿದ ದಂ ಬೇಳಲಳವೆ ॥ (33)

ಜನನಿಯೊಪರಿಯ ಬಿರುನುಡಿಯ ದುಃಖದೊಳಾಡಿ ।
ವನಿತನುಂ ಕೇಳ ಧರ್ಮಾತ್ಮ ಮಗುಳಂತೆಂದ ।
ನೆನಗೆ ಪಿತೃವಾಕ್ಯ ಮೆಳ್ಳನಿತ ಮೀರಲ್ಬಾರದಾಯ್ತು ಪೂರ್ವಾನುಮತದಿ ॥
ಜನಪನಗರನ ಮಾತಿಗೋಸುಗಂ ಧರಣಿಯಂ ।
ಖನನ ಗೈದರು ಮತ್ತು ಸಾಸಿರಮಹಾರಥರ್ ।
ಮುನಿಯ ಕೋಪಾಗ್ನಿಗಿಂಧನವಾದರೆನ್ನ ಕುಲವರಸುಗಳ್ಧರ್ಮ ವಿಡಿವು ॥ (34)

ತಾತನಾಜ್ಞೆಯ ಮೀರದಾವಿಪಚ್ಛಿದ್ರತ್ನ ।
ಘಾತಿಸಿದ ಧೇನುವಂ ಜಾಮದಗ್ನ್ಯಂತನ್ನ ।
ಮಾತಾವಧಂ ಗೈದನೀ ಪರಿಯ ಪೂರ್ವದೊಳ್ ಧರ್ಮಶೀಲರುಗಳಮಿತ ॥
ಖ್ಯಾತಿಯಂ ಗಳಸಿದರ್ಸತ್ಯ ಸ್ವರೂಪಕುಲ ।
ಜಾತನೆಂದೆನಿಸಿಂತು ಪಿತೃವಚನಕ್ಕೆ ಬ ಸಂ ।
ಗಾತಮೆನಿಸುವೆ ಧರ್ಮಲೋಪ ನಿರಯಾಸ್ಪದಂ ಮೀರಲಂತಪ್ಪುದೆನಗೆ ॥ (35)

ಮೊದಲೊಗೆದ ಸತ್ಪುರುಷ ರಖಿಲಾಗಮಜ್ಞರ ।
ಭ್ಯುದಯಮಂ ಗೈದರಲ್ಲದೆ ಸತ್ಯಕೊಣಿಯವ ।
ವಿಧಿಸಲಿಲ್ಲದರಿಂದಲಾಂ ಪುರಾತನ ಮಾರ್ಗವನುಸರಣೆಯಂ ಮೀರದೆ ॥
ಪದುಳದಿಂದೈದಿ ಪದಿನಾಲ್ಕು ವರುಷಂಗಳಂ ।
ಹೃದಯದಾನಂದದಿಂ ಕಳೆದು ನಿಮ್ಮಯ ಚರಣ ।
ಪದುಮಂಗಳಂ ಕಾಣ್ಬೆನೆಂದೊರೆದು ಸೌಮಿತ್ರಿಯೊಡನೆಂದ ರಘುವೀರನು ॥ (36)

ಮನದೊಳಹ ಭಕ್ತಿಯಂ ವಿಕ್ರಮವ ನಿಜಬಲಗ ।
ಳನಿತನುಂ ಬಲ್ಲೆ ನಾನತಿಗಳೆಯೆ ಧರ್ಮಗಳ ।
ಜನಜನಿತದುಷ್ಕೀರ್ತಿ ಸಂಪ್ರಾಪ್ತಮಾಗದಿರದರಸನಪ್ಪಣೆಯ ಲೆನಗೆ ॥
ವನರಾಜ್ಯದಾಳ್ಕೆ ಗನುಮತಿಯಿತ್ತಳಾಭರತ ।
ಜನನಿಯದರಿಂ ಕ್ಷತ್ರಧರ್ಮವ ನಿರೀಕ್ಷಿಸದೆ ।
ಜನಪತಿಯ ವಚನಮಂ ಸತ್ಯಮೆಂದೆನಿಸೆ ಸುಖಮಿಪ್ಪುದಾಗ್ರಹವ ತುಳದು ॥ (37)

ಎಂದೊರೆದು ಸೌಮಿತ್ರಿಯೊಡನೆ ಮಾತಾಚರಣ ।
ವಂದನಂ ಗೈದು ಮಗುಳಿಂತು ವಿಜ್ಞಾಪಿಸಿದ ।
ಚಂದದಿಂದೆನಗೆ ಸ್ವಸ್ತ್ಯಯನಗಳನುಂ ಮಾಡಿ ಬೇಗಲಪ್ಪಣೆಯ ನೀಯೆ ॥
ಮುಂದಕೈದುವೆ ಪ್ರತಿಜ್ಞೆಯ ಕಳೆದು ಜವದಿನಲ ।
ವಿಂದ ಬಹೆನೀನುಡಿಯ ನಿಜಚಿತ್ತನಿಲಯಕಂ ।
ತಂದು ಕಳುಪುವುದಿಂದು ಮಗುಳುತ್ತರವನೀಯಲೆನ್ನಾಣೆ ಸುರಪನಾಣೆ ॥ (38)
ದೇವಿಕೇಳ್ಳೀನಾನು ವೈದೇಹಿ ಲಕ್ಷ್ಮಣಂ ।
ಕೋವಿದೆ ಸುಮಿತ್ರೆ ಸಹ ಪಿತುರಾಜ್ಞೆಯಿಂದಿಹುದೆ ।
ದೇವಮಾನುಷ್ಯಾದಿ ಸಮ್ಮತಂ ಕುಲಧರ್ಮವದರಿಂದೆ ದುಃಖವನ್ನು
ನಾವಧಾನದಿ ತಡೆದು ಸಂಭಾರಗಳನೆಲ್ಲ ।
ತಾವಪೊಂದಿಸಿ ಯೆನಗೆ ಗಮಿಸಲಪ್ಪಣೆಯೀವ ।
ಭಾವಭಾವಿತಮೆನಿಸು ಚಿತ್ತಮಂ ಕೃಪೆಯಿಂದಲೆನೆ ಕೇಳದಾಕ್ಷಣದೊಳು ॥ (39)
ಮಗೆದು ತನುವಂ ಮೂರ್ಛೆಯಿಂದ ನಿಸ್ಸಂಜ್ಞೆಯೊಳ ।
ಗರೆನಿಮಿಷಮಿರ್ದು ಮಗುಳೆಚ್ಚತ್ತುರಾಮನಂ ।
ಪುರದಲೀಕ್ಷಿಸಿ ನುಡಿದಳೆಲೆ ಪುತ್ರಪಿತನೆಂತು ನಿನಗಂತು ನಾನೆಂಬುದು ॥
ಪರಮಧರ್ಮಂ ದುರಾಪರನೀನು ದುಃಖದೊಳ್ ।
ಪೊರಳಿಸಿಯೆ ಪೋಪುದುಚಿತವೆ ನಿನ್ನ ಬಿಟ್ಟಾನು ।
ಪೊರೆದವನೆ ದೇಹಮಂ ಕರುವಿಲ್ಲದೆಳೆಗಂದಿ ಜೀವಿಪ್ಪುದೆ ಜಗತಿಯೊಳಗೆ ॥ (40)
ಇಂತು ದೈನ್ಯಾಳಾಪಗೈವ ಜನನಿಯ ಕಾಣಾ ।
ತಂತರಂಗದಿ ಕ್ರೋಧಶಿಖಿ ಪೆರ್ಚೆ ಸೌಮಿತ್ರಿ ।
ಮುಂತರಿಯದಧಿಕತರ ನಿಟ್ಟುಸುರ್ಗಳ ಬಿಡುತ ಭೋಗೇಂದ್ರನೆಂತೊಪ್ಪಿರೆ ॥
ತಾಂತಳೆಯ ದೀಕ್ಷಿಸುತ ರಾಮ ನಯವಿನಯದಿಂ ।
ದಿಂತೆಂದ ಭವದೀಯ ಶೌರ್ಯಾನುರಾಗಮ ಸ ।
ಮಂತಮಂಬಲ್ಲೆ ನಾ ನೀಸಮಯ ಮನುಕೂಲಮಲ್ಲ ಕಡುಗೋಪಸಲ್ಲ ॥ (41)
ಗುರುದೊರೆಯ ಪಿತೃವೃದ್ಧರಾಜರ್ಷಿಕಲ್ಪನೆಮ ।
ಗರಿಯದಾಗಲಿ ಕಾಮಕ್ರೋಧ ಹರ್ಷಂಗಳೊಳ ।
ಗೊರೆದಮಂ ಶಾಸನವ ಮಸ್ತಕದೊಳಾಂತದಂ ಮಗುಳುತ್ತರವನೀಯದೆ ॥
ನರಗನಿಂಗೈವುದಿಮ ಧರ್ಮವಿಪರೀತದಾ ।
ನರಿತರಿತು ಕೈಕೊಳ್ಳುದತಿ ನೃಶಂಸತೆ ಯಾಂತ ।
ರೊರೆವರಾರಿದಕೆ ನಿಷ್ಕೃತಿಯ ದುಷ್ಕೃತಿಯ ನಳಸಿ ಬಾಳ್ವಗೇಂಥಲ ಧರೆಯೊಳು॥
ಲೋಕದೊಳು ಧರ್ಮಕಾಮಾರ್ಥ ಮೋಕ್ಷಂಗಳೀ । [(42)
ಪ್ರಾಕ್ಕರ್ಮಮಖಿಳ ಶಾಸ್ತ್ರಂಗಳಲಿ ಮತ್ತವರೊ ।
ಳೇಕಮಿಹ ಪರಸೌಖ್ಯಕರಮದಂ ಧಿಕ್ಕರಿಸಲುಳ್ಳದೆರಡು ವಸ್ತುಗಳೊಳು ॥
ಶೋಕ ಮೋಹಾಭಿಧಾಯಕ ಮಲ್ಲದವು ಶುಭಾ ।
ನೀಕವಿಃಯುಮೆನುತ್ತೆ ತಿಳಿದ ಸಜ್ಜನರುಂ ವಿ ।
ವೇಕದಿಂ ದನುಸರಿಪರೈಸೆ ಪ್ರಾಥಮಿಕಮಹ ಧರ್ಮವೇ ಪರಮೆನುತಲಿ ॥ (43)

ತನಯರಿಗೆ ಪಿತೃಸೇವೆಯಾಮ್ನಾಯ ಬೋಧಿತಂ ।
ವನಿತೆಯರಿಗಧಿಕತರ ವೀವ್ರುದಲೆ ವಿೂರದಲೆ ।
ಸನುವು ತಿಸೆ ಪತಿಯಾಜ್ಞೆಯಿದು ಸತ್ಯ ಧೀಮಂತಸಮ್ಮತಂ ಲೋಕದೊಳಗೆ ॥
ಜನಪಸಾಯುಷ್ಯಂತ ನೆನಿಸಿರಲ್ಕೆನ್ನೊಡನೆ ।
ಬನಕೆ ಬಪ್ಪುದಿದಾವ ಧರ್ಮವಾರೊಪ್ಪುವರು ।
ಜನಕಾಸ್ತ್ರ ವೈರದಿಂದಾಂಗಾದರು ಸುಖಂ ಸವುನಿಪ್ರುದೆ ಸತ್ಯಮಹುದೆ ॥ (44)
ಸತ್ಯಶೌಚಾಚಾರ ಸತ್ಕುಲ ಪರಂಪರೆಗೆ ।
ನಿತ್ಯನಿರಘತೆ ಕೀರ್ತಿ ದೇವತಾಪ್ರೀತಿ ಮ ।
ತ್ಯತ್ಯಧಿಕ ಸಂಪದಂ ಪತಿಸೇವೆಯಿಂದೊದಗುತ್ತಿದೆಂಬುದಿದು ಸದ್ಧರ್ಮವು ॥
ಪ್ರತ್ಯೇಕವಾಗಿ ಪತಿಯು ಸು ಒಟ್ಟುಸುರಸೌಖ್ಯ ।
ಭೃತ್ಯಾನುವೋದದಿಂದಿರಲಾಕೆಗಂ ಪಾತ ।
ವ್ರತ್ಯವೆಂತೊದಗುವುದು ಶುಭಲೋಕ ಪಂಥಾನವೆಂತು ಗೋಚರಸುಪ್ಪುದು ॥ (45)
ಪೌಲೋಮಿ ಸಾವಿತ್ರಿ ಗೋತ್ರನಾಯಕಪುತ್ರಿ ।
ನೀಲಾಂಬರನ ಸತಿಯು ಸಂಜ್ಞೆಸಸಿಯವು ನಿರತ ।
ಬಾಲಾಯತಳೆನಿಪ್ಪ ವೀರಪಾತಿವ್ರತೆಯರೆಲ್ಲ ಪಲ್ಲಭರಿವಳಿ ॥
ಮೂಲೋಕಪೂಜ್ಯರೆಂದೆನಿಸಿರ್ಪ ಸತ್ಕಥೆಯ ।
ರಾರಾಯಕೇಳುತಂ ಒಧಿರತ್ರೆಯನಂತು ಶಿಶು ।
ಲೀಲಾನುಕಾರವುನುಗೈದೊಡೇನೆಂಬುದೀ ಚಾಪಲ್ಯತರಲೌಲ್ಯಕೆ ॥ (46)
ತಂದೆಯಾಧೀನ ಸುತರೀಶಾನ ಚಿತ್ತ ಕುಂ ।
ಬಂದುವನುಸರ ಗೈವುದೇ ಸತೀಲಕ್ಷಣಂ ।
ಪಿಂದಾವ ಚಕ್ರವರ್ತಿಗಳು ಸದ್ಧರ್ಮಪರ ರಾಯರುಂ ಸತ್ಯಕೆಳಸಿ ॥
ದಂದುಗಂಬಟ್ಟರಿದ ಕೇಳುರುಜೀಸಿರಿಯು ।
ಬಾಂಧವ್ಯವೇ ಪರವೆನುತ್ತ ಸಂತಸಗೊಂಡು ।
ಮುಂದಪ್ಪ ದುರ್ಗತಿಯು ನೋಡದುಚ್ಛೃಂಖಲತೆಯಿಂದ ನಡೆವಪುದುಚಿತವೇ? ॥ (47)
ಪಿಡಿದು ಧೈರ್ಯವ ಶೋಕರೋಷಂಗಳೆರಡ ಕಂ ।
ಗೆಡಿಸುತ್ತ ಮಾನಕಂದವಮಾನವುಂ ತೊಡಿಸಿ ।
ನುಡಿಯುದುತ್ತರಗಳೆಂ ಪ್ರೀತಿಯಿಂವಭಿಷೇಕಕೆಂದು ತಂದಿಟ್ಟವಸ್ತು ॥
ಒಡವೆಗಳನೆಲ್ಲ ವೊಂದೆಡೆಗೆ ಸೇರಿಸು ವಹತೆ ।
ಯೊಡನೊಡನೆ ನೋಡಿ ಸಂಕಟಗೊಳುವಕ್ಲೇಶವುಂ ।
ಕೆಡಿಸು ಮುಗುಳಾ ಶೋಕವಿಟ್ಟಸಲು ಸಂ ಕ್ಲೇಶಮಡಕುವುದು ಮನ್ನಸವನು ॥ (48)
ಕೇಳು ಲಕ್ಷ್ಮಣ ಸಿರಿಯ ಬುದ್ಧಿಪೂರ್ವಕವಾಗಿ ।
ಚಾಳುಗೈವವನಲ್ಲ ಪಿತನಿತ್ತನುಡಿಯುಸ್ಕೃತ ।
ದಾಳಕೆ......ದಗೊಡ ಬಾರದೆಂಬಾವಸತ್ಯವುಂದೆನ್ನ ಹೃದಯದೊಳಗೆ ॥
ತಾಳಸಂಭಾರಗಳ ನುಪಸಂಹರಂಗೆಯ್ಯ ।
ವೇಳದೆನು ಮತ್ತಿದರೊಳಧಿಕಗುಣ ನೃಪಗೆ ಪರ ।
ರಾಳಕಾಭೂಮಿಯೆಂ ಭೀತಿಪೊದ್ದದು ಭೀತಿ ನಿರ್ಧಾರಣಂ ಗೈದರೆ ॥ (49)

ನೆ*ಪಿದೀ ಸಾಮಗ್ರಿಯನ್ನು ಪಿಂದೆಗೆಸಿ ಸಾ ।
ನೆರಗೆ ವನವಿತ್ತ ಭರತಾಂಬಿಕೆಗೆ ಸಂತುಷ್ಟಿ ।
ಭರಿತಮಪ್ಪುದು ಮಹಾರಾಜಸನ್ನಿಧಿಯೊಳಗೆ ಕ್ರೂರನುಡಿಗಳ್ತಪ್ಪುಗು ॥
ದೊರೆತನಂ ಬರತಂಗೆ ದೊರೆಯೆ ಜಗತೀತಳದಿ ॥
ಪರಿಕೃತಮದಪ್ಪುದಕೃತಂ ನೃಪಗೆ ಪರಲೋಕ ।
ಪರಿಕರಂ ಸ್ವಾಧೀನ ಮಕ್ಕು ಮಗ್ಗಮನದಿಂ ದಧಿಕಸುಖದೇಳ್ಗೆಯಿನಿತು ॥ (50)

ಜನಜನಿತವಾಗಿ ಲೋಕಂ ನುಡಿಸುವಂದದಿಂ ।
ದಿನದೊಳರೆಘಳಿಗೆ ಬಾಳ್ದರೆ ಸಾಕು ಧರ್ಮದಿಂ ।
ಕುನಿಯುಂತೆ ಸರ್ವರಿಂ ದತಿ ತಿರಸ್ಕೃತರಾಗಿ ಬಾಳ್ದರೇಂ ಚಿರಜೀವಿಯು ॥
ಮನೆಮನೆಗಳಂ ತಿರುಗಿ ಮತ್ತೆ ಕಲ್ಯನ್ನಗಳ ।
ತಿನುತ ನಾಸಿರಕಾಲ ಬಾಳ್ವೀಯ ಫಲ ಲೋಕೆ ।
ದನುಮತಂ ಪರಗತಿಗೆ ಸಮ್ಮತಂ ತಾನಸ್ತಿ ಪೂರ್ವಾಗಮಮತಿಕಮತ್ತೆ ॥ (51)

ತಾತಕೇಳ್ನಖಿಲ ಲೋಕಪ್ರಾಣಿ ಸಂಕುಲಂ ।
ಪ್ರೀತಿಯಿಂದೈಶ್ವರ್ಯ ಶುಭವ ಬಯಸುವರಲ್ಲ ।
ದೇತರೊಳಗಾದೊಡಂ ನೆರೆಯೆ ಶುಭವ ಮನೋಚಾಂಚಲ್ಯದಾಸೆಯಿಂದ ॥
ಕಾತರಂ ಬಟ್ಟು ಕಳವಳಪರಲ್ಲದೆ ತನ್ನ ।
ಮಾತಿನಿಂ ಬಯಕೆಯಿಂದೆನ್ನ ಕೈಗೂಡಿದೊಡ ।
ದೇತಕ್ಕೈಬೇರೆ ದೈವದ ತಂತ್ರ ಮಿಹುದೆಂದು ಪೇಳ್ವರಬುದ್ಧಿಯುತರು ॥ (52)

ವೇಗದಿಂ ಸಕಲ ಕಾರ್ಯೋದ್ಯೋಗಮುಸಾಗ ।
ಲಾಗಿತೋರುವುದು ದೈವಾಧೀನಸನ್ನ್ಯಾಸ ।
ರಾಗವಶೈಶ್ವರ್ಯ ಯುತನಾದೊಡರುವಿನಂ ಭೋಗಿಪ್ಪುದುದೈವಗತಿಯು ॥
ಸಾಗರಾಂತಾಧಿಪತ್ಯವ ಪಡೆಯಲಮನ್ವವಕ ।
ವಾಗಿತೋರುವುದು ದೈವಾಧೀನವೊಂದುಯು ।
ವಾಗುಹೋಗಿಲ್ಲವತಿ ಮರುಳಾದೊಡಾತಗಂ ಫಲಮಹುದು ದೈವವಶವೂ ॥ (53)

ವೀತರಾಗಾನುಗತ ಹೃದಯ ಯೋಗೀಂದ್ರರುಗ ।
ಳಾತ......ತಕಕ್ಕೆಳಸುವುದು ಸ್ವರ್ಗಫಲ ।
ರಾತ್ರಿಯನ್ನನುಭವಿಪರತಿವೇಗ ಪತನ ಮಹುದಲ್ಪನಿಗೆ ರಾಜ್ಯಸಿರಿಯು ॥
ಜಾತಮಪ್ಪುದು ಹಸ್ತಗತವಾದ ಸಂಪತ್ತು ।
ನೀತಮೆನಿಪುದು ದೈವದಾಧೀನ ಮಲ್ಲದಿ
ನೇತರದ ಮನುಜರಗುರುಯುಂತೆ ಪರವಶದಿಚರಿಸುವಂ ಚಾಂಚಲ್ಯದಿ ॥ (54)

ಮರುಳರಿವನೆರಿಯ ದತಿಸಾಹಸನಿ ಯತ್ನಮಂ ।
ನಿರತಸ್ಥೈರ್ಯತಲಭ್ಯವಾಗ ದಿರೆಚಿತ್ರದೊಳ್ ।
ಕೊರಗುತಂ ಕ್ರೋಧಪರವಶರಾಗಿ ಸಂಕಟಂಗೊಳುವತಿಳಿಲುವರಲ್ಲದೆ ॥
ಸಿರಿರಾಮಪುರದರಸ ಕರುಣದಿಂದೀಯದಿರೆ ।
ದೊರೆವುದೆಂದೀವ ನೋ ಸಂಕಲ್ಪಮಾತ್ರದಿ ।
ಬರಿದೆ ತ್ರಪಿಸಲ್ಪಡುವು ಕೈಸಾರುವುದೆ ಸಾಧುಪಾತಿಯುಳದ ಮನುಜರಿಂಗೆ ॥ (55)

(ಸಂಧಿ 9, ಪದ 408.)

# ಹತ್ತನೆಯ ಸಂಧಿ.

ಸೂಚನೆ ॥ ತಿಳುಪಿ ಲಕ್ಷ್ಮಣನ ಬಹುವಿಧ ನೀತಿ ಬೋಧೆಯಲಿ ।
ತಳೆದು ಮಾತಾ ವಚನ ರಚನೆಯಂ ಮಸ್ತಕದ ।
ಇಳೆಯ ಸುತೆಯನ್ನು ಸಂತೈಸಿದಂ ರಘುವೀರ ವಿನಯ ಮೃದುವಾಣಿಯಿಂದ ॥

ಹಿಮರಾಪ್ತನೂಜೆ ಕೇಳ್ ರಾಮಚಂದ್ರಂ ಮೃದುಲ ।
ಕ್ರಮದಿಂದ ನೀತಿಯಂ ಬೋಧಿಸುತ ಬರುತಿರಲ್ ।
ಕ್ರಮಿತ ಕ್ರೋಧಾನಲಂ ಪೆರ್ಚಿದುದೇನೆಂಬೆ ಸೌಮಿತ್ರಿಗತಿಶಯದಲಿ ॥
ವಿಮಲನೇತ್ರಗಳಗ್ನಿ ಕಲ್ಪಮೆನಿಸಲ್ ವಿಪುಲ ।
ಭ್ರಮಣೆಯಂ ತೋರುತಿರೆ ಶ್ಮಶ್ರುಗಳ್ ನಿಟ್ಟುಸುರ ।
ಸಮದೇಭ ವೈರಿಯೊಲ್ ಗರ್ಜಿಸುತಲಿಂತೆಂದ ಅಣ್ಣನೊಳ್ ರೋಷದಿಂದ ॥ (1)

ಜಗತಿಯೊಳ್ನಿಜಧರ್ಮ ವಿಗುಣ ಮಾಗಲ್ಸುಗುಣ ।
ಬಿಗುಮಿಗೆಯ ಪರಧರ್ಮ ಮತಿಭಯಪ್ರದಮೆನುತ ।
ಸುಗುಣ ನೀತಿಜ್ಞರತಿ ನಿಪುಣರಾಡುವ ನುಡಿಗಳಿಂ ಚಿತ್ತಕಜ್ಞಾತಮೇ ॥
ಮಿಗೆ ಶಾಂತಿ ದಾಂತಿಗಳ್ವಿಪ್ರಕುಲದಾಚಾರ ।
ವಗಣಿತ ಮಹೀಪಾಲರದನೊಪ್ಪುಗೊಳ್ಳದಲೆ ।
ಬಗೆದರಿಗಳೊಡಲುಗಳ ಬಾಳ್ದರತಿ ಸತ್ಕೀರ್ತಿ ಲೋಕ ವಿಶ್ರುತಮೆನಿಪೊಲು ॥ (2)

ಅತಿಶೌರ್ಯ ಧೃತಿ ತೇಜಮಾಧಾರ್ಷ್ಟ್ಯ ಮಾಜಿಯೊಳ್ ।
ಕ್ಷತ ಶತ್ರುಕುಲಮೆನಿಸಿ ದಾನಮೀಶ್ವರಭಾವ ।
ಮತಿಯಿಂದಲಿಪ್ಪುದೇ ಕ್ಷತ್ರಧರ್ಮವನುಳಿದು ಬಡೆಪೂರ್ವರಂತೆ ನುಡಿಯ ॥
ಜೊತೆಗೊಳಿಸಿ ಕರಗತದ ರಾಜ್ಯಸಿರಿಯೌನ್ನತ್ಯ ।
ಕ್ಷತಿಗೈವ ಶಕ್ತಗೊಲ್ದೈವವಶ ಮೆಂದೆನುತ ।
ಸತಿಸೋದರರ ನುಳವುದಾವ ಧರ್ಮವಿದಾವ ಶೂರಸಮ್ಮತ ಲೋಕದಿ ॥ (3)

ಬಲಪೌರುಷದ ಸತ್ವಮಿಲ್ಲದಧಮಾಧಮರು ।
ಪಲವು ನೀತಿಯ ನೆಣಸಿ ದೈವಕೃತದಿಂದಲ್ಲ ।
ದೊಲಿಯದಧಿಕತೆ ಯೆನುತನಾಥವಚನಗಳಿಂದ ಪಲುಬುವರನೇಕ ವಿಧದಿ ॥
ಅಲಘು ಬಲಶೌರ್ಯದಿಂದಪ್ಪಳಿಸಿ ಶತ್ರುಗಳ ।
ನಲೆದೊಲಿದು ಕಡಿಖಂಡಗೈದು ಭೂತಾಳಗಂ ।
ಮೆಲುವಿತ್ತು ಗೆಲಪಾಂತು ತೋರುವೆಂ ಶಕ್ತಿಯಂ ದೈವಮೇನಧಿಕಮೆನಗೆ ॥ (4)

ಬರಲಿಂದ್ರನಗ್ನಿಯಮ ನಿರುತಿ ಪಾಶಿಯು ಮಗುಳೆ ।
ಮರುತ ವೈಶ್ರವಣ ವೃಷಕೇತನರ್ಕೋಪದಿಂ ।
ಶರಚಾಪಗಳ ಧರಿಸಿ ನಿಜಬಲೋತ್ಸುಕ್ಯಮಂ ತೋರುವುದೆಂದಿಜ್ಝಗೈದು ॥
ತರಿದು ದಿಗ್ಬಲಿಗೊಡುವೆನಾವದೈವವು ಬಂದು ।
ಮರೆಯಾಗಲದರಸುವ ಪೀರುವೆಂ ರವಿವಂಶ ।
ದರಸುಗಳ ಕುಲಪರಂಪರೆಯ ವಿಕ್ರಮಗಳಂ ತೋರ್ಪೆನೀ ಸಮಯದೊಳಗೆ ॥ (5)

ಕೆಡಿಗರೆವ ಕೊಡಲಿಯಂ ಪಿಡಿದು ಕಡುಗೋಪದಿಂ ।
ಪೊಡವಿಯರಸುಗಳ ಮೂರೇಳು ಬಾರಿಯು ಕಡಿಯು ।
ತೊಡೆನವರ ಶೋಣಿತದಿ ಸ್ನಾನಾಹ್ನಿಕಂ ಗೈದು ಮಹಿಯು ನಿಜಕಾಲಕರ್ಪಿಸಿ ॥
ಪಡೆದ ಜಸವುಂ ಕೊಡನಸುತ್ತ ಸಪ್ತಸಾಗರವ ।
ಕುಡಿವನೊಕ್ಕುಡಿತೆಯೊಳಗಿಟ್ಟು ಬಡಪೂರ್ವರಿಂ ।
ತೊಡಸೆ ಕಾರ್ಯವಂಗಳಸಲಾತ್ಮೀಯ ಧರ್ಮಮಂ ಪ್ರಸಿಗೈವುದೆಂತಿಳೆ ಯೊಳು ॥ (6)

ಭರತಸಾತನ ಮಾವನಿವಗೆ ಪಡಿಬಲವಾಗು ।
ವರಸುಗಳ್ಪ್ರಸ್ತಾತೆಯ ವಿಶ್ರಾಂತಿಯಿಂದೆಮ್ಮ ।
ದೊರೆ ತನವ ಸೆಳೆದ ಜಠರಾದಿಗಳ ಮಾಂಸ ಮಸ್ತಿಷ್ಕಲೋಹಿತದಿಂವಲಿ ॥
ವಿರಚಿಸುವೆ ಶಾಕಿನೀ ಭೂತಗಣಕಾತ್ತಣವ ।
ಧರೆಯೊಳೆಲ್ಲನೋಡಲೆನ್ನ ಬಾಜಸಾಹಸವ ।
ಪರಿಕಿಪೊಡೆ ಸಂವರ್ತ ಭೈರವಾದಿಗಳಿಗೆ ಡಿಂಗರಿಗರೆನಿಪೆ ಕ್ಷಣಾರ್ಧ ॥ (7)

ಆದಿತ್ಯವಂಶ ಸಂಜಾತರರಸುಗಳೆಲ್ಲ ।
ಮೇದಿನೀಪಾಲನಂ ಗೈದು ಬಹುವಿಧದಶ್ವ ।
ಮೇಧಂಗಳಂ ಮಾಡಿ ಷೋಡಶ ಮಹಾದಾನದಿಂದ ದ್ವಿಜಕುಲವ ನಲಿಸಿ ॥
ಮೋದದಿಂದಣುಗರಂ ಪಡೆದು ಸುಖಪಡೆದು ।
ಸೋದರಾದಿಗಳ ಸಂತಸಗೊಳಿಸಿ ವೈರಾಗ್ಯ ।
ಹಾದಿಯಂ ನಿಟ್ಟಿಸಿದರಲ್ಲದೀ ಪರಿಯಾರು ಸಾರಿದರ್ಬನವ ಮಾನದಿ ॥ (8)

ನೆರಪಿದೀ ಸಂಭಾರದೊಳ್ಪಟ್ಟವುಂ ಕಟ್ಟಿ ।
ತರದಂತರಾಯಗಳ ತೀವ ತರ ವ್ಯಾಧಿಯಂ ।
ಜರೆದು ದುಃಖವ ಮರೆದು ತಾಯ್ಗ್ಳತಿ ಸುಖಪಡೆವೊಲೆಸಗುವೆಂ ನಿಮಿಷದೊಳಗೆ ॥
ಚರಣಸೇವಕನಿದ್ದು ಫಲವೇನು ಸಾಮುಕಂ ।
ದೊರಕದೊಡೆ ಭಾನುಕುಲ ಸಂಭೂತಕಧಿನಾಥ ।
ನೆರವಿಗೇಂ ಸಕ್ಕೀರ್ತಿಯಹುದು ಕರಗತವಾದ ಧರಣಿಯಂ ಬಿಟ್ಟರುಗಲು ॥ (9)

ಕುಲಪರಂಪರೆಯು ವಸುಗಳ ವೃತ್ತಿಗವಿರೋಧ ।
ಕಲನಾಭಿಷೇಕ ಕುತುಕಿತ ಮೆನಿಸೆ ಹರುಷಸಂ ।
ಕಲತ್ರಮಹುದೀಲೋಕಪಾಲರಂ ಪಡೆವಖಿಳ ಭೋಗಂಗಳಂ ಚುಂಬಿಸಿ ॥
ನಲವಿಂದ ಪರಿವಾರ ಪ್ರಜೆಗಳಂ ನಿಜಪುತ್ರ ।
ಕುಲಮೆಂದು ರಕ್ಷಿಸುವೊಲಿತ್ತು ತನಯನ ಕರಕೆ ।
ಸಲೆ ತೋದಾರ ಸತತಪೋರಾಜ್ಯಪಾಲನೆಗೆ ಗಮಿಸುವುದೆ ಸದ್ಧರ್ಮವು ॥ (10)

ಸಿರಿಯ ಬೆರಗಿಗೆ ಸಾರ್ಚಿ ನರಗುರಿಗಳಂತೆ ವನ ।
ಕೆರಗುವರೆ ಶರಚಾಪ ವರಪಾದ ಮಕುಟಗ ।
ಳ್ಪೊರೆಯೊ ಜನರಂಜನವೊ ಕಾರ್ಯಕೇಂಕಾರಣಮೊ ಪುನ್ನ ಪ್ರಂಸಕ ಸೂಚ್ಯವೋ ॥
ತೆರೆದ ದೊರೆಗಳ ಗುಂಪು ಪರಿಹಾಸಗೈವರೇ ।
ಪರಿಯಾದುದ್ಯಾರ್ಗ ಘಟಿತವಾದ ಬಾಳ್ಕೆಗೆ ಮನ ।
ಸ್ಮರಿಸಲೇನಿದ ನೀತಿಯಲ್ಲ ಗಮನವು ಸಲ್ಲ ಪುರುಷ ಸೂಚಕವಿದಲ್ಲ ॥ (11)

ಎನುತ ವನವಾಸಕಂ ಸನುಮತಿಪ ಸುತನ ನುಡಿ ।
ಯನು ಕೇಳ ಕೌಸಲ್ಯೆ ಯತಿಶೋಕದಿಂ ಪೇಳ್ದ ।
ಳೆನ್ನದೃಷ್ಟಮಪೂರ್ವಮೀದುಃಖ ನಿನ್ನಿಂದಲಡಸುವುದು ದುಷ್ಕರಿತವು ॥
ಜನಮನೋಹ್ಲಾದಿ ಕರುಣಾವನಧಿ ಭೂತಹಿತ ।
ದನುಕಾರಿ ಮನುಜೋತ್ತಮೋತ್ತಮಂ ನೀನೆನ್ನ ।
ಮನಕೆ ಸಂಕ್ಲೇಶಮಂ ಪುಟ್ಟಿಸುವುದನುಚಿತಂ ಧರ್ಮಸೂಕ್ಷ್ಮಗಳ ತಿಳಿದು (12)

ಸವತಿಯರ ನಡುವೆ ಸಂಕಟಗೊಳುತಲನುಪದಿಶೆ ।
ಳವರ ದುರ್ವಾರಗರ್ವಿತ ವಾಕ್ಯಶೌಂಡೀರ ।
ನವನವೋನ್ಮೇಷಗಳನಾಲಿಸುತ ನಾನೆಂತು ಬದುಕುವೆಂ ದೀನೆಯೆನಿಸಿ ॥
ಭವದೀಯ ಪಿತೃವಚನದಿಂದ ಬನಕೈದುವರೆ ।
ತವಕದಿಂದೆನ್ನ ಕರವೊಯ್ಯು ಸುಖದಿಂದಿರ್ಪೆ ।
ಬವಣೆಗೊಳಸಲ್ಪೇಡವೆಂದು ದೀನತೆಗೊಂಡ ಮಾತೆಯೊಡನಿಂತೆಂದನು ॥ (13)

ಭರತಪಂಚಿಕಾವಚನ ವಂಚನಾವಶನೆನಿಸಿ ।
ನಿರವಧಿಕ್ಲೇಶಕಂ ಮಾತ್ಕತದೆಳ್ಳಾಧಿಕ್ಯ ।
ಭರಿತಮಾಗಿದೆ ನಮ್ಮಗಮನದಿಂದಭಿವೃದ್ಧಿಯಾಗಿ ಪರಿಮಳಿತಮಹುದು ॥
ಮರೆದೊಡೀಶಾನ ಸೇವೆಯು ಸತಿನ್ಯಶಂಸತ್ತೆಯು ।
ನಿರುಗೆಯುಹಳದರಿಂದಲೀ ಮೂರ್ತಿಯಿಪ್ಪನ್ನ ।
ದೊರೆಯ ಶುಶ್ರೂಷೆಯಲ್ಲಪ್ಪುದೆ ಪರಂಧರ್ಮಮಿದು ಸನಾತನವು ತಾಯೆ ॥ (14)

ಉಪವಾಸವ್ರತ ಕಥಾಶ್ರವಣ ಗುಪಿತಾಮ್ನಾಯ ।
ಜಪತಪೋನಿರತೆಯಾದುದು ಭರ್ತೃ ಸೇವೆಯಿಂ ।
ದಪಗತತ್ವವ ಪಡೆದೊಡಾಕೆ ಪಾಪಿನಿಯೆನಿಪಳಿದು ಲೋಕಸಮ್ಮತದಿ ॥
ಉಪಚಾರದಿಂಭರ್ತೃ ಶುಶ್ರೂಷೆಗೈವಸತಿ ।
ಗಪರಿಮಿತಸ್ವರ್ಗಾದಿಪದವಿಗಳ ಸುಖವು ಬಹು ।
ದುಪಮಿಸಲ್ಕೆಂತಹುದು ತಾಯೆ ಪರಿಣಾಯಾಸಗೊಳ್ಳಲೇಂ ಫಲಮಪ್ಪುದು ॥ (15)

ಜಡಬಧಿರ ಮೂಕಾಂಧತೆಯ ನಾಂತನಾದೊಡಂ ।
ಪೊಡೆಪಿಪತಿಯಾದೊಡಂ ಸತಿಗೆ ಪತಿಯೇ ದೈವ ।
ದೊಡನಿವಕೆ ಬೇರೊಂದು ವ್ರತ ನಿಯಮ ತಪಗಳಿಂ ದೊರಕವಲೆ ಸದ್ಗತಿಗಳು ॥
ತುಡುಕಿದುದು ಕ್ಲೇಶ ಸುತ ವನಕೆ ಗಮಿಸಿದನೆನ್ನ ।
ತಡಿಗ್ಗಡಿಗೆ ಸರಸನಂದ . . ಕಳುಪಿ ಚಿತ್ತವಂ ।
ಪಿಡಿದು ನಡೆವುದು ಲೋಕಸಮ್ಮತಂ ಶ್ರುತಿಮತಂ ಪೇಳ್ವೊಡಾನೇಸರವನು (16)

ಪತಿಯ ಸೇವೆಯೊಳದ್ದೊಡಾಕೆ ತ್ರಿಭುವನಪೂಜ್ಯ ।
ಳತಿಶಯದೆಯೊಳಖಿಳ ದೇವರ್ಕಳುಂ ಸಂಪ್ರೀತಿ ।
ಯುತರೆನಿಸಿ ಬೇಡಿದುದನಿತ್ತಪರು ನುಡಿದ ನುಡಿಯಲ್ಲ ನಿಜಮೆಂದೆನಿಪುದು ॥
ಮತಿಯುತರು ಮೆಚ್ಚುವಂದದ ನಡತೆಯಂ ಬಿಟ್ಟು ।
ಕ್ಷಿತಿಪತಿಮಹೋನ್ನತೆಯೊಳರ್ದನಾಥೆಯ ತೆರದಿ ।
ಸುತನೊಡನೆ ಬನಕೆ ಬಹುದನ್ಯಾಯಮುಭಯಕುಲಕಪಕೀರ್ತಿ ಸಂಜನಿಪುದು (17)

ಧವೆ ಜೀವದಿಂ ಮಹಾರಾಜ ನೆಂದಿರುವಲ್ಲಿ ।
ಲವಲವಿಕೆಯಿಂ ಚರಣ ಧೂಳಿಗಧಿಕೃತೆಯಾಗ ।
ದವಿರಳಕ್ಲೇಶಮನ್ನಿತ್ತು ಒಹಾದನುಚಿತಂ ತಾಯೆ ಪ್ರಿಯಮೆಂದರಿವುದು ॥
ಭವದೀಯ ವಚನವಂ ಮೀರದತಿಭಕ್ತಿಯಿಂ ।
ಕುವರ ಭರತಂ ನಡೆವ ಧರ್ಮಿಷ್ಠ ಸುವಿವೇಕಿ ।
ಭವಣೆಯುಳದಪ್ಪಣೆಯ ನಿತ್ತೊಡೈತಹೆ ಬೇಗ ಧರ್ಮಾನುಸಾರವಿದಿದು (18)

ನೆಲದಿ ಕರ್ಮೇಂದ್ರಿಯಂ ವಿಷಯೇಂದ್ರಿಯಂ ಜಲದಿ ।
ಜ್ವಲನನಿಂ ಬುದ್ಧೀಂದ್ರಿಯಗಳು ಪ್ರಾಣಾದಿಗಳ ।
ನಿಲನಿಂದ ಸಂಪ್ರಾಪ್ತ ಜೀವಾದಿ ತತ್ವಂಗಳ್ಳೈದೈವರಿಂದೀದೇಹವು ॥
ಒಳಗೆ ಪದಿನೇಳು ತತ್ವಾತ್ಮಕಂ ಸೂಕ್ಷ್ಮವಿವ ।
ರಲಘು ವಿಕೃತಿಯೆ ಕಾರಣಾಹ್ವಯಂ ತನುಗಳೊಳ್ ।
ಗಿಲುಕದಿಹ ಪರಬೊಮ್ಮ ನಿರ್ವಿಕಾರನೆನುತ್ತಲರಿಯ ಸುಖಜನಿಪುದನಘೆ । (19)

ಇದಿರೊಳಗೆ ತೋರ್ಪುದದು ದೃಶ್ಯ ನೋಳ್ಪುದೆ ದೃಕ್ಕು ।
ಚದುರ ನೇತ್ರವು ದೃಶ್ಯಮದ ಕಾಣ್ಬುವುನದೃಕ್ಕು ।
ಪದುಳವಹ ಮನದೃಶ್ಯಮದನೋಳ್ಪ ಬುದ್ಧಿಯೇ ದೃಕ್ಕು ಮತ್ತಾ ಬುದ್ಧಿಯು ॥
ಹದನನರಿತವ ಸಾಕ್ಷಿಯೋಲ್ಮೊಲದೃಕ್ಕಹುದು ।
ಮದರಿಂದಲದೃಶ್ಯಮಿಲ್ಲೆಂದು ಪರಿಕಿಸಿನೋಡೆ ।
ಹೃದಯ ದುರ್ಗಂಧಿ ಶಿಥಿಲಪ್ರಾಯಮಾಗುವುದು ಸುಖವು ಸಂಭೂತಮಹುದು (20)

ಶೋಕಮೋಹಾದಿಪ್ರಪಂಚ ಮೆಲ್ಲಂಚಿತ್ತ ।
ದಾಕಾರಮದರ ಚೇಷ್ಟೆಗೆ ಪ್ರಾಣಮಾರುತಂ ।
ಜೋಕೆಯಿಂದಾಮರುತನಂಡಲೆದು ತಾಣದೊಳ್ನಿಲಿಸೆ ಮಾನಸವೃತ್ತಿಯು ॥
ಜೋಕೆಯಿಂದುದ್ಭವಿಪುದಕಲಂಕವೃತ್ತಿ ನಿಜ ।
ಶೋಕಾಪಹರ ಶಕ್ತಿಯುದರಿಂದ ಶಾಂತಿತಾಂ ।
ಪ್ರಾಕಟಪುದಧಿಕತರದಾನಂದಸಿಂಧುವಂ ಕಲ್ಲೋಲರಹಿತಮೆನಿಸಿ ॥ (21)

ತಿಳಿದೀಪ್ರಪಂಚಮಂ ಕನಸೆಂದು ಶಾಂತಿಯು ।
ನ್ನಳವಡಿಸ ವಿಜನಮಹ ಠಾವಿನೊಳ್ಕುಳ್ಳಿರ್ದು ।
ಬೆಳುಕದಿವೆಗಳಮುಭಯದಿಟ್ಟಿಗಳ ನಾಸಾಗ್ರದಲ್ಲಿ ನೆಲೆಗೊಳಿಸೆ ಬಳಿಕ ॥
ತೊಳಲುವೀ ಮರುತನುಂ ಸ್ತಂಭಿಸುವದರಿಂದ ।
ತಳುಕದಲೆ ಮನನಿಲುವುದೈಕೆ ನಿಲಲಂತರದಿ ।
ಬೆಳಗ ಖಂಡಾಕಾರದಲಿ ತೋರ್ಪುದಾಸ್ಫಟಿಕ ಕಲಶಸ್ಥ ಜ್ಯೋತಿಯಂತೆ ॥ (22)

ಇಂತು ಸತತಾಭ್ಯಾಸ ದಾರ್ಢ್ಯ ಮಾಂತಿಹ ಮನಂ ।
ಶಾಂತಿಯುಂ ಪೊಂದಿ ಬಿಡುವುದು ಬಾಹ್ಯವೃತ್ತಿಯಂ ।
ಅಂತರಂಗದಿ ರಮಿಸುತಾನಂದಮಯಮಪ್ಪುದಾ ಬಳಿಕ ಕ್ಲೇಶರೋಷ ॥
ಚಿಂತೆ ಮೊದಲಾದವಂಕುರಿಸಲಮ್ಮವು ತನ್ನ ।
ಸ್ವಾಂತಮಲ್ಲದೆ ಬೇರೆ ತೋರದದರಿಂ ಜನ ।
ಭ್ರಾಂತಿ ಜಗುಳುವುದಮಿತ ನಿಜಬೋಧೆಯುದ್ಬುದ್ಧಮಾಗಿ ಸೌಖ್ಯವನೀವುದು (23)

ಈ ವಿಧದೊಳಸುದಿನಂ ನಿನ್ನೊಳಾಲೋಚಿಸಲ್ ।
ಸಾವಧಾನದೊಳಖಿಳವಿಷಯನಿರಸನವಹುದು ।
ನೋವುಸಂಕಟವೆಂಬ ಬೇಸರಿಲ್ಲದತಿ ಸುಖದೊಳಿರೆ ಮದಾಗಮನ ತಾಯೆ ॥
ರಾವಿನೊಳಗಿರ್ದಂತೆ ತೋರ್ದಪುದು ನಿನ್ನಚರಿತ್ರ ।
ಪಾವನೀಕೃತ ಮುನಿಪುದದದರಿಂದಲಿಹಪರಗ ।
ಳೋವಿ ಕರಬದರೋಪಮಿತಮಾಗಿ ಕಾಣ್ಬುಡುವದಿದು ಸತ್ಯ ತಿಳಯ ನಿತ್ಯ ॥ (24)
ಎಂವೋಗದ ತತ್ವಯುತವಾಣಿ ಶೋಕಾತುರವ ।
ಬಂದೀಕರಣಗೆಯ್ಯೆ ನಿಶ್ಚಿಂತೆಯಿಂ ಬೆದಾ ।
ನಂದವಮಯುಳನಿಸಿ ತನಯನೊಳೆಂವಳಯ್ಯಕೇಳ್ವಿಧಿ ಪುರಾಕೃತಜನಂಗೆ ॥
ಬಂದಡೆಸಿದಲ್ಲದುಳವುದೆ ಸತ್ಯವನುಸರಣೆ ।
ಯಿಂದ್ಯೆದಿ ಪವಿನಾಲ್ಕುವರುವವಂ ಕ್ಷಣದಂತೆ ।
ಪಿಂದುಳುಪಿ ಬಂದುದಂ ಕಾಣ್ಬಿಯೆನೆ-ತತಿಹರುಷದಿಂದ ಕೌಸಲ್ಯೆ ಮುದನಿ ॥ (25)
ತೊಲಗಿಸುತ ಚಿತ್ತದಾಯಾಸ ವೈರ್ಮನ್ಯವಂ ।
ಜಲವುಪಸ್ಪೃಶನೆಗೈದಾಕಂವ ನಿರ್ಭರದಿ ।
ಪಲಜಗೆಯ ಮಂಗಳಾಚರಣೆ ಗೈದಿಂತೆಂವಳಬ್ಜಾಕ್ಷರಾಮಭದ್ರ ।
ನೆಲದೊಳುಳ್ಳೃವಸ್ತ್ರಾಯು ಪೌರಾಣಮುಖ್ಯನುಡಿ ।
ಯಲಿ ಸಾರಭೂತಪರಮೆಂದಾವಧರ್ಮಗಳಂ ।
ಕಲಿತಮೆನಿಸಿದೆ ಮತಿಯ ಧೃತಿಯಿಂವಲಾನಿಯತ ಧರ್ಮ ಸಲಹುಗೆ ಪುತ್ರಕ ॥ (26)
ತಂದೆತಾಯ್ಗುರುದೈವ ಶುಶ್ರೂಷೆಯಿಂದುದಿತ ।
ಬಂಧುರದ ಸತ್ಯವೇ ಸಲಹಲನುದಿನ ದೀನ ।
ಬಂಧು ವಿಶ್ವಾಮಿತ್ರನಿತ್ತಸ್ತ್ರಜಾಲಗಳ್ ರಕ್ಷಿಸಲಹೋರಾತ್ರದೊಳ್ ॥
ಕುಂದದ ಸಮಿತ್ಕುಶ ಪವಿತ್ರವೇದಿಕೆಗಳುಂ ।
ಚಂದಚಂದದ ವೃಕ್ಷಶೈಲಕ್ಷಪಾಹ್ರದಗ ।
ಳೊಂದಿರುವ ಪತಗ ಪನ್ನಗ ಶರಭ ಸಿಂಹಂಗಳೆಲ್ಲ ಸಲಹುಗೆ ನಿನ್ನನು ॥ (27)
ಸುರಪಶಿಖಿ ಮೊದಲಾದ ದಿಕ್ಪಾಲರೆಲ್ಲರುಂ ।
ಹರಿದಶ್ವಸೋಮಾದಿ ಗ್ರಹಗಳುಂ ನಕ್ಷತ್ರ ।
ನೆರವಿ ಸಪ್ತರ್ಷಿಗಳ್ಸಿದ್ಧವಿಧ್ಯಾಧರರ್ ಸಾಧ್ಯಪನ್ನಗಯಕ್ಷರು ॥
ಮರುತರುಂ ಸೇನಾನಿ ಸಾಗರಂಗಳ್ವರುಪ ।
ನೆರವಿಗಳ್ ಋತುಮಾಸ ಪಕ್ಷದಿನರಾತ್ರಿಗಳ್ ।
ನಿರುತ ಸುಖಮಂ ಕೊಡುಗೆ ಶೋಭನ ಪರಂಪರಾವಸತಿಗಳ್ಪುತ್ರನಿನಗೆ ॥ (28)
ಕ್ರೂರ ಕರ್ಮಿಗಳೆನಪ ಪೈಶಾಚರಕ್ಕಸರ್ ।
ತೋರವಿಷಧರ ಕೀಟವಂಶಗಳ್ ಮಾಂಸದಾ ।
ಹಾರಿಗಳ್ಪೊಡೆಯುಂ ಕೊಂಡೆನ್ನದೆಸೆಯಿಂದ ಸಂತುಷ್ಟರೆನಿಸಿಮುದದಿ ॥
ತೋರದೆಂದಿಗು ದೋಷಲೇಶಗಳ್ ಲೋಕಗುರು ।
ಸಾರಸಾಸನ ಮುಖ್ಯ ದೇವರ್ಷಿಸಮುದಯಮು ।
ದಾರಕೃಪೆಯಿಂದ ಕಲ್ಯಾಣದಾಯಕರಪ್ಪತಪ್ಪದೀ ವಾಣಿಯೊಪ್ಪ ॥ (29)

ಎಂದಖಿಳದೇವರ್ಕಳಂ ಸುತಿಸಿ ನತಿಸುತಾ ।
ನಂದದಿಂ ರಾಮಮಂಗಳವೃದ್ಧಿಗಭಿವೃದ್ಧಿ ।
ಯೆಂದು ಭೂಸುರರಿಂದ ಕ್ರತುಭುಜಾವಾಹನಂಗೈಸೆ ವಿಧ್ಯುಕ್ತವಾಗಿ ॥
ಗಂಧಮಾಲ್ಯಂ ಶುಕ್ಲಸರ್ಷಪಂ ಘೃತಚರುಗ ।
ಳಿಂದ ಪೂಜಿಸುತ ಹುತಹವ್ಯಾವಶೇಷಮಂ ।
ಚಂದದಿಂ ಬಲಿಯನುರಚಿಸಿ ವಿಪ್ರರತುಷ್ಟಿಗೊಳಿಸಿ ದಕ್ಷಿಣೆಗಳಿತ್ತು ॥ (30)
ಬುಧರ ಸಂತಸಗೊಳಿಸಿ ಭೂರಿಸತ್ಕಾರದಿಂ ।
ವಿಧಿಯ ಮನ್ನಿಸಿ ರಾಮಚಂದ್ರನೊಡನಿಂತೆಂದ ।
ಳದಿತಿವೃತ್ರಾಸುರನ ಮಥಿಸಲೋಸುಗ ಕರುಣದಿಂದಾವ ಮಂಗಳವನು ॥
ಮುದದಿಂದ ರಚಿಸಿದಳ್ ಪುತ್ತಾಸುಮಂಗಳಂ ।
ಪದುಳದಿಮರೋಗದೃಢ ಗಾತ್ರಸಿದ್ಧಾರ್ಥವಂ ।
ದುದಿತಮೆನಿಸುತ ಶೀಘ್ರ ಪುನರಾಗಮನ ಗೈವುದೈಸೆ ಪುತ್ರಕ ಸಂತತಂ ॥ (31)
ಅರುಣವರ್ಣಂ ಸುಧೆಯ ತರಗೈದುವವಸರದಿ ।
ವಿರಚಿಸಿದಳಾವ ಮಂಗಳವ ವಿನತಾದೇವಿ ।
ಸುರರಂಬುಧಿಯ ಮಥಿಸೆ ಹರಿತ್ರಿವಿಕ್ರಮನೆನಿಸೆ ಸಮಯದೊಳಗದಿತಿ ಮುದದಿ ॥
ಸುರುಚಿರದ ಮಂಗಳಮದಾವುದಂ ಮಾಡಿರ್ದ ।
ಳುರುತರದ ಸನ್ಮಂಗಳಗಳೆಲ್ಲ ಶುಭಕರವ ।
ನಿರತ ಕರೆಯುಲಿ ರಾಮ ಸಕಲಸದ್ಗುಣಧಾಮ ನಿನಗೆ ಸಂಪ್ರೀತಿಯಿಂದ ॥ (32)
ಇಂತೊರೆದು ಮಂತ್ರಾಕ್ಷತಾರೋಪಣೆಯಮಾಡಿ ।
ಶಾಂತಿಕರ ಮಂತ್ರಂಗಳಂ ಜಪಿಸುತೋಷಧಿಗ ।
ಳಂ ತಳೆದು ಪರಸಿ ಕರತಳ ಕರ್ಪಿತಂಗೈದು ಮಸ್ತಕವನಾಘ್ರಾಣಿಸಿ ॥
ಸಂತೋಷದಿಂದಪ್ಪಿ ಪುತ್ರ ಕೇಳ್ಸುಬುದಲೋ ।
ರಂತೆಸಿದ್ಧಾರ್ಥಂ ನಿರೋಗ ಸುಖಮಯನೆನಿಸಿ ।
ಸಂತೋಷದಿಂ ಬಂದು ದೊರೆಯಹುದನಿಷ್ಟೈಸುವೆ ಬೇಗ ಮತ್ಪುಣ್ಯವಶದಿ ॥ (33)
ಜನಪತಿಯ ನುಡಿಯ ಸತ್ಯಕೆ ಸಾರ್ಚೆ ಬೇಗದಿಂ ।
ವನವಾಸಮಂ ಕಳೆದು ಮುನಿಜನವ ಸಂತೈಸಿ ।
ಪುನರಪಿಮದೀಯ ಪತ್ತಣಕ್ಕೈದಿ ಪಟ್ಟವಣಿಯುಗ್ರದೊಳ್ಕುಳಿತು ಬಳಿಕ ॥
ಮನುವಂಶದರಸುಗಳ ಕೀರ್ತಿಯಂ ಕುಡಿಗೊಳಿಪು ।
ದನು ನೋಡಿ ಸಂತೋಷವಾರ್ಧಿಯೊಳಗೋಲಾಡಿ ।
ವಿನಯದಿಂದುಪಚರಿಸುವೆಂ ಮನ್ಮನೋರಥಗಳನ್ನೀವನೀ ಗೋತ್ರದೇವ । (34)
ಪರಿಪೂಜಿತಾಂಘ್ರಿಯುಗರಾದ ದೇವಾದಿಗಳ್ ।
ಪರಮಹರ್ಷದಿ ಮಹಾಸುರ ಪನ್ನಗಾದಿಗಳ್ ।
ಕರುಣದಿಂ ನಿನ್ನ ಸಂರಕ್ಷಿಸುವರೆನ್ನಿಂದ ಸಂಪ್ರಾರ್ಥರೆನಿಸಿ ಮುದದಿ ।
ತರುಣ ಸುಖದಿಂ ಬಪ್ಪುದೆಂದೊರೆದು ಬಲವಂದು ।
ತಿರುಗಿ ಪುನರಪಿ ಪರಿರಂಭಣಂ ಗೈವುತಲಿ ।
ಶಿರದಗ್ರವಾಘ್ರಾಣದಿಂದ ಸಂಭ್ರಮಗೊಂಡಳಮಿತಾಹ್ಲಾದದಿಂದ ॥ (35)

ಈ ವಿಧದಲೊರೆದ ಮಾತಾಚರಣಕೆ ಸಮಿಸಿ ।
ಸಾವಧಾನದೊಳವನಿಜಾತೆಯಿಪ್ಪರವಸೆಗೆ ।
ದೇವಸನ್ನಿಭಸೈದುತಿರಲಿತ್ತ ಭೂಜಾತೆ ಸಿರಿಗಂತರಾಯದೆಡೆರು ॥
ತೀವದಂದದಿ ಮಂತ್ರತಂತ್ರೋಪಚಾರದಿಂ ।
ದೇವರ್ಕಳೆಲ್ಲರಂ ಪೂಜಿಸುತಲಿರುತಿರ್ದ ।
ಳೀವಿಧದ ರಾಜಕೇಯಂಗಳೀ ನೊಂದರಿಯುವತುಳ ಸಂತೋಷದಿಂದ ॥ (36)
ಪತಿಬರವನಿಟ್ಟಿಸುತಲಿರುತಿರಲ್ ರಾಘವಂ ।
ಸತತಗತಿ ವೇಗದಿಂದೈತರಲ್ಮಂದಿರಕೆ ।
ಕ್ಷಿತಿಯಣೆಗಿ ಕಾಣುತ್ತ ಭಯದಿಂದ ಬೆಸಗೊಂಡಳೆರಗಿ ಪದಪಂಕಜಗಳಗೆ ॥
ವ್ಯಥಿತವಾಗಿದೆ ಪೂರ್ಣಶಶಿಯು ಪೋಲ್ವಾನನಂ ।
ಪತಿತಮುಕ್ತಾಫಲಿತ ಕಿರುಬೆಮರಿನಂಕುರಿತ ।
ಗತಿಯನಾಂತಿಹುದದೇಂ ಕಾರಣಂ ದಯದಿಂದ ತಿಳುಪಬೇಕೀ ವಮಾಂದ್ಯವಂ ॥ (37)
ವದನ ಶಶಿಯತಿಶಯಕೆ ಸಾಕ್ಷಿದುದೊ ಬೆಳ್ಗೊಡೆಯು
ಚದುರ ಸುಕಟಾಕ್ಷಗಳು ಚಾಮರಂಗಳ ಬೆಡಗ ।
ನೆದುರಿಸಿದವೊ ಸಿತಾಶ್ವಗಳಂದಲಂಕಾರವೆತ್ತ ರಥಭದ್ರದಂತಿ ॥
ಸದುಗುಣಂಗಳಸುದಿಪ ವಂದಿಮಾಗಧರಲ್ಲಿ ।
ಯುವಿಸಿತೇಂ ಕತದೊಳೌದಾಸೀನ್ಯವಿಾಪಿಧವ ।
ಸದಯವಿಸ್ತರ ಗೆಯ್ಯವೇಳ್ಕೆಂದು ಬಿನ್ನವಿಸಲರಸಿಯೊಡೆನಿಂತೆಂದನು ॥ (38)
ಕೇಳಧರಣೀಜಾತೆ ಸತ್ಯಧರ್ಮಾಚಾರ ।
ಮೌಳಭೂಪೋತ್ತಮಂ ಬೊಪ್ಪ ಸಂಪ್ರೀತಿಯಂ ।
ತಾಳ ಭರತಾಂಬಿಕೆಗೆವರಗಳೆರಡಂ ಕೊಟ್ಟಿಪ್ಪಿಂತೆ ಸುರನಾಥನೆಡೆಯ ॥
ಆಳಯಿಂದರುಹಾಗಲಾಕೆ ಕೇಳಿದಳಂದು ।
ಬಾಲಕಗೆ ಯುವರಾಜ ಪಟ್ಟವನ್ನಿತ್ತುವನ ।
ದಾಳಕಗೆ ರಾಮನಂ ಕಳುಪಬೇಕೆನೆ ತಾತನೊಪ್ಪಿದಂ ಧರ್ಮದಿಂದ ॥ (39)
ಪದಿನಾಲ್ಕುವರುಷ ವನವತಿಶಯಗಳನು ನೋಡಿ ।
ಮುಂದದಿ ಬಪ್ಪಂತೆನಗೆ ನೇಮಿಸುತ ಭರತಗ ।
ಭ್ಯುದಯಮಂ ಪಾಲಿಸಿದರಖಿಲಮುನಿಸನ್ಮತದಿ ಸತ್ಯವಿಾಷನ್ನೀರದೆ ॥
ಅದರಿಂದಲಾವಯ್ಯನನುಮತಿಯಲೈದಿಮುನಿ ।
ಹೃದಯಸ್ಥವಾದ ಕ್ಲೇಶಾದಿಕಾರಣ ಜನರ ।
ಪದುಳದಲಿ ನಿಗ್ರಹಿಸಿ ಬರ್ಪೆ ಕ್ಷಿಪ್ರವಿದೆಂದು ತಿಳಿದಿಹುದು ಚಲನೆಯುಳ್ಳದು ॥ (40)
ನಿರತನಿಯತಾಹಾರ ವಿರಸಿಕಾಲ್ಯದಲೆದ್ದು ।
ಹರಿಯಂ ಯಥಾವಿಧಿಯುಲಭ್ಯರ್ಚನಂ ಗೈದು ।
ಪರಮಧರ್ಮಿಷ್ಠಗುರು ದಶರಥಮಹೀಶಗಂ ವಂದನಂ ಗೈದು ಬಳಕ ॥
ಚರಣಸೇವೆಯೊಳು ಮಸ್ಕಾತೆ ಕೌಸಲ್ಯೆಗಂ ।
ಹರುಷಗೊಳಸುತ ಉಳ್ಳದ ತಾಯ್ಗಳಂ ಚಿತ್ತಾನು ।
ಸರಣಿಯಿಂ ಸುಖಿಯಾಗಿ ಬಪ್ಪ ಪದವಿಯ ನೋಡುತಿಹುದಚಲೆಯಾನಂದಿಸಿ ॥ (41)

ಭರತಶತ್ರುಘ್ನರೆಮ್ಮನುಜರವರೀರ್ವರುಂ ।
ಕರುಣಾಕಲಿತರೆಮಗೆ ಜೀವನೋಪಮಪುತ್ರ ।
ವರರೆಂದು ತಿಳಿದವರ ಲಾಲನಂಗೈವುತ್ತಪೋಷಿಸುವುದನುದಿನದೊಳು ॥
ದೊರೆಯಮ್ಮರಾಜ್ಯದಧಿನಾಥಶೀಲಸಂ ।
ಭರಿತರಂ ಪೊರೆವನನುಚಿತಕಾರ್ಯಕೆಳಸಿದವ ।
ತರುಣಿನಾದರು ಶಿಕ್ಷೆಗೈವಕಾರ್ಯಪ್ರದಾ ಪಾಲಿಸುವ ಧರ್ಮವಿಧಿವು ॥ (42)
ಭೂಮಿಶನೊಲುಮೆಯಂತಿರ್ದರನುಸರಣೆಯಿಂ ।
ಪ್ರೇಮಾರ್ಜನಂಗೆಯ್ಯವೇಳ್ಕುಮದರಿಂ ಸತ್ಯ ।
ನೇಮಾನುಕಾರಿಯೆಂದೆನಿಸು ತಾತನ ವಚನವಂ ಮೀರದಿರಿಮುಂದೊಳು ॥
ಭಾಮಾಶಿರೋರತ್ನವೆಂದಖಿಲಸಾಧ್ವಿಯರ ।
ಸ್ತೋಮಮನುಮೋದದೊಳ್ನುತಿಸುವಂತಿಹುದೆಂದು ।
ರಾಮಾಖ್ಯನಗರದಧಿನಾಥ ನಿಜವಲ್ಲಭೆಗೆ ಪೇಳ್ದ ಲಾಲಿಸು ಪಾರ್ವತಿ ॥ (43)

(ಸಂಧಿ 10, ಪದ 451)

## ಹನ್ನೊಂದನೆಯ ಸಂಧಿ

ಸೂಚನೆ ॥ ಸಾಧುತರ ಮಾಧುರ್ಯದಾರ್ಯ ವಚನಂಗಳಂ ।
ಬೋಧಿಸುತ ನಿಜಸತಿಗೆ ಸಂತಸಂಗೊಳಿಸಿ ಕರು ।
ಣೋದಧಿಯು ಜನಕಾಂಘ್ರಿಸಾರಸಗಳಂ ಕಾಣ್ಬುದುಜ್ಜುಗದೊಳೈತಂದನು ॥
ಬಸಕೆ ಗಮಿಸುವೆ ಸುಖವೊಳಕುದೆಂದುವಾಚಿಸಿದ ।
ಘನತರ ಸುವಾಣಿ ಶ್ರವಣೋತ್ಕಲಿತವಾಗಲ್ಕೆ ।
ವನಧಿಮೇಖಲೆಯಣಿಗಿಯಂಬಕಗಳಶ್ರುಜಾತ ಕಳೆಗೊಳಲ್ಶೋಕನದೊಲು ॥
ವನಜಾತನಾದಸಂದರ್ಶನದಲೌತ್ಸುಕ್ಯ ।
ಬಿಸದಮಂ ಮೂದಲಿಸಲಾಸ್ಯರುಚಿ ರಾಮನಂ ।
ಕಿನಿಸಿಂದ ನೋಡುತಿಂತೆಂದಳವನೀಜಾತೆ ಕೇಳ್ ಶೈಲೇಂದ್ರ ಜಾತೆ ॥ (1)
ಅತ್ತೆಮಾವಂದಿರಂ ಭಾವಮೈದುನರುಗಳು ।
ಮತ್ತಾತ್ಮಜಸರ್ಗಸೆಯರೆಲ್ಲರುಂ ತಮತಮ್ಮ ।
ಚಿತ್ತರದ ಪುಣ್ಯಾನುಭವಿಗಳೆನಿಸುವರಲ್ಲದದರಿಂದಲಿತರ ಜನಕೆ ॥
ಮತ್ತಾಸೆಯೇನಿಲ್ಲ ಪತಿಯ ಭಾಗ್ಯೋದಯಮೆ ।
ನಿತ್ತದಕೆ ಸತಿಕರ್ತಳದರಿಂದ ತನ್ನನುಂ ।
ಬೆತ್ತವರ್ಮೊದಲಾದರಾರಿರ್ದೊಡೇಂ ಸುದತಿ ಗಧಿಪಗತಿಯೆನಿಕುಜಗದಿ ॥ (2)
ಧವನಲ್ಲದನ್ಯದೈವಂಗಳುಂ ಮಾನಿನೀ ।
ನಿವಹಕಿಲ್ಲವೆನುತ್ತ ಲೋಕವೇದಂಗಳೊಳು ।
ಸುವಿವೇಕಿಗಳ್ಪೇಳ್ವರದರಿಂದಲೀಶಾನ ಪಶ್ಚಾಯಿಯೆಂತಿರೆನುತ ॥
ಅವಿರಳಸ್ನೇಹದಿಂ ಬೇಳ್ದಪಿರಿಯರ್ನುಡಿಯ ।
ಲವಲವಿಕೆಯಿಂದಾನು ಮೀರಬಲ್ಲೆನೆ ಬುಧ ।
ಪ್ರವರ ಭವದೀಯ ಚಿತ್ತಕೆ ತಿಳಿಯದೇನಿಹುದು ಬಿನ್ನವಿಪುದೇನಿಪ್ಪುದು ॥ (3)

ಬಗೆ ಬಗೆಯ ವಿಷದಾರು ಪಕ್ಷಿಘೋರಾಕಾರ ।
ಮೃಗಮಿರ್ಪ ದುರ್ಗಮಂ ಬನವಮಾದೊಡೊಂದನುಂ ।
ಬಗೆಯದಲೆ ಭವದೀಯ ಚರಣಸೇವಾಸಕ್ತಿ ಭಕ್ತಿಯಿಂದೈತಪ್ಪೆನು ॥
ನಿಗಿನಿಗಿಪ ಸೌವರ್ಣ ಹರ್ಮ್ಯಾಗ್ರ ಭೂಮಿಯೊಳ್ ।
ಸೊಗಯಿಪಂದದಿ ಸಂತಸದಲಿರ್ಪೆನೋರ್ವರೊ ।
ಳ್ಮಿಗೆ ಮನವ ವ್ಯೈಸಿಕದಲಂಟಲೀಯದೆ ನಿಯತ ಬ್ರಹ್ಮಚರ್ಯವನು ಬಿಡದೆ ॥ (4)
ಫಲಮೂಲಮದು ಭುಕ್ತಸಂತುಷ್ಟಿಯಿಂ ಶೈಲ ।
ಚೆಲುವನದನದೀ ಪಲ್ವಲಾದಿ ಸುಸ್ಥಳಗಳಲಿ ।
ಲೆಲವಿಂದ ಭವದೀಯ ಚರಣಕಲಸೆಯೊಳಾನು ಚಾಪಕೌತೂಹಲವನು ॥
ಜಲಿದಿರ್ಪ ಚಿತ್ರಮಂ ಪಡೆವೆನಲ್ಲದೆ ಲೇಶ ।
ಚಲನಾತ್ಮಕಂಗೆಯ್ಯನಾಪಿಸದೊಳುಂ ದಿವ್ಯ ।
ಸಲಿಲ ಮಂಡಿತ ಕಮಲಕುಮುದಾಕರಂಗಳನು ಕಾಣ್ಬೆನಾನತಿಹರುಷದಿ ॥ (5)
ತೌರಿನತಿಶಯ ಸುಖಕೆತೌ ರೆನಿಪುದೀ ಸೇವೆ ।
ಪಾರ ಚಾಪಲರಕ್ತಿ ದುಕ್ತಿ ಮುಕ್ತಿಯ ಕೆಡಿಪ ।
ವೈರಿಯುಂದರುಪಿರ್ದ ಪಿರಿಯರನು ಮತಿಯಿಂದ ಲೈತಪ್ಪೆ ನೊಡನೆ ಮುದದಿ ॥
ವೀರರಗ್ರೇಸರರ್ಗಲಹುವರೆ ತಾವಿರಲ್ ।
ತೋರದೆಂದಿಗ ಕ್ಲೇಶ ಮದರಿಂದುದಾರ ಕರು ।
ಣಾರಸದೊಳಪ್ಪಣೆಯ ನೀಯುವೇಳ್ಕೆಂದು ಪತಿಗೆರಗಿ ಬಿನ್ನೈಪಂ ಗೈದಳು ॥ (6)
ಚರಣಸನ್ನಿಧಿಯಲಾಹಾರ ವರ್ಜಿತವಾಗಿ ।
ಯಿರಲದೇ ಸ್ವರ್ಗಸುಖಮೆನಿಪ್ಪುದಿತ್ತರತ್ರ ಬಂ ।
ಧುರದ ಸೌಖ್ಯದೊಳರಲ್ನರಕೋಪಮಿತಮೆಲ್ಲ ರುಚಿಸದೆನ್ನಯ ಮಾನಸಂ ।
ಅರಿವೆ ಮರವೆಗಳಂದಲೇನಾದೊಡಂ ತಿಳಿಯ ।
ದರುಪಿದುದ ಮರದೆನ್ನ ಕರದೊಯ್ವುದನುಮನದ ।
ಲಿರುವಂತೆ ದಯಗೈವುದೆನೆ ರಾಮಚಂದ್ರ ಸತಿಗಿಂತೆಂದ ವಿನಯದಿಂದ ॥ (7)
ಸಕಲ ಧರ್ಮಸ್ವರೂಪಂತಿಳಿದ ಮಾಜಗದೊ ।
ಳಕಲಂಕಕುಲದೊಳವತರಿಸಿ ನಿಯಮಾಚಾರ ॥
ಸುಕುಮಾರತೆಯನರಿತಪಲ್ಲದೀ ಪ್ರಾಕೃತರ ಪಸಗೆಯಮೇಧಿಯಲ್ಲ ॥
ಪ್ರಕಟಕ್ಲೇಶಂಗಳಾಗಾರ ಮತ್ಯಾಹಾರ ।
ನಿಕರ ಮೆಲ್ಲಮತೃಪ್ತಿಕರಕರಣಶೋಷಣೆಯ ।
ನಿಕಟವಮಾಯಾಸಭೂಯಿಷ್ಠಮದರಿಂ ಬನವ ಮನವಿ ನಿಚ್ಚೈಸಬೇಡ ॥ (8)
ಎಲೆವನೆಯಲಿರಿಕೆ ಸಿಕ್ಕಿದ ಪರ್ಣಮೂಲಗ ।
ಳ್ಫಲಗಳಂ ಮೆಲುವುದನಿಶಂ ನಿದ್ರೆಸಮನಿಸದು ।
ಪಲವು ಮೃಗ ಪಕ್ಷಿಗಳ್ ಕ್ರೂರವಾರುಣನುಡಿಗಳುಂ ಸೋಂಕೆ ಕಿವಿಗೆ ಭಯದಿ ।
ಸಿಲುಕದಿರೆಫಲ ನಿರಾಹಾರ ಕಾರ್ಶದಿ (?) ಜಟಾ ।
ಕಲಿತಮೆಂದೆನಿಸಿ ಋಷಿದೇವತಾತಿಥಿ ಪೂಜೆ ।
ಯಲಘು ಮತಿಯಿಂದ ಲನವರತ ಮಾಡಲ್ವೇಳ್ಕು ಬನದುಃಖಮೂಲಕಂದ ॥ (9)

ಬರಸಿಡಿಲ ಧಿಕ್ಕರಿಪ ಸಿಂಹಶಾರ್ದೂಲಗಳ್ ।
ತರತರದ ಗರ್ಜನೆಗಳುರುಕಲಭಘೀಂಕಾರ ।
ದುರುಳನಿಸ್ವನದಿಂದ ದುಃಖ ಸಂಭವಮಪ್ಪುದೈಸೆ ನುತ್ತಬಲೆಯರಿಗೆ ॥
ಪರಿಪರಿಯ ಕಂಟಕಾಕೀರ್ಣ ದುಷ್ಟಾಹಿಗಳ ।
ನೆರವಿವೃಕ ಕಂಕ ಗೋಮಾಯುಗಳ ಬಾಧೆ ಸಂ ।
ಕರಮೆನಿಪ ವನವನೀಂ ಬಯಸುತಿಹೆ ಹಿತವೆಂದು ಕ್ಲೇಶಗಳ ಕಂಡರಿಯದೆ ॥ (10)

ಕಾಲತ್ರಯದ ಸ್ನಾನ ಸಲಿಲದಾಹಾರ ಮುಂ ।
ಮೇಲೆನಿಪ ಪುಷ್ಪೋಪಹಾರ ಮುಂತಾದುದಂ ।
ಕಾಲಕಾಲದಲಾತ್ಮಕ್ಷಯದಿಂದ ಸವನಿಪ್ಪುದು ಋಷಿಗಳಾಚಾರ ವಿಡಿದು
ಆಲಯಂ ತುಹಿನಕರ ದ್ವಾದಶಾತ್ಮಕರ ಪದ ।
ಜಾಲತವುರಾಗಿಪ್ಪುದವರತ ಮಾಹಾರ ।
ಶೀಲ ತ್ರೈಜಗತ್ಪಾಲ ಮಾಧುರ್ಯಮದರಂತ ವನಮುಸುಖಮೆನಿಪ್ಪುದಬಲೆ ॥ (11)

ಶಾರೀರಕಷ್ಟಮಿನಿ ತನಿತೆಂತ ವಿಸ್ತರಿಪೊ ।
ಡಾರಿಗಳವಡುವ ದಬ್ಜಾಕ್ಷಿ ಕ್ರೋಧಾದಿಗಳ ।
ತೋರಿಪವಿಷಯಾದ್ಯಖಿಲ ಕಂಟಕಗಳಂ ಕಳೆದು ಭಯಮೋಹಗಳವರ್ಜಿಸಿ ॥
ಚಾರಣಂಗೈವುದತಿಸಂಕಟಂ ಪೇಳ್ದಂತೆ ।
ಬಾರದದು ಕಾರಣಂ ವನಕೆಬಹುದೆಂಬೀವಿ ।
ಚಾರಗಳಸಾರಮೆಂದರಿತು ಸುಖದಿಂ ಗೃಹದೊಳಿಹುದೆ ಲೇಸೆನಿಪ್ಪುದಬಲೆ ॥ (12)

ಅತಿಕಠಿಣ ಕಠಿಣ ಕ್ರೂರ ಕ್ರೂರತರವಾಗಿ ।
ಗತಿನಿರೋಧಾಸ್ಪದದ ವಾಣಿಯಂ ಕೇಳ ಶುಭ ।
ಮತಿಮನ್ಯು ಮುಖಿಯಾಗಿ ಮೆಲನತ್ತಿ ವಿನಯದಿಂ ಬಿನ್ನಪಂಗೈದಳೊಲಿದು ॥
ಅತುಳದೋಷಗಳು ವನವಾಸಸಂಭವಮೆಂದು ।
ವಿತತಭಾಷಾ ನಿರೂಪಿತ ಮಾದುದೆಲ್ಲಮುಂ ।
ಪತಿಭವತ್ಪದ ಭಕ್ತಿಯಿಂದೆನಗೆ ಸುಖರೂಪ ಫಲವನಿತ್ತಪ್ಪುದನುದಿನಂ ॥ (13)

ಶರಭಶಾರ್ದೂಲ ಮೃಗಸಿಂಹ ಕೀಟಾದಿಗಳ್ ।
ಕರಿಸರೀಸೃಪ ಪಕ್ಷಿಗಣಗಳೆಂದಿಗುಕಾಣ ।
ದರಿಯಬಾರದ ಘೋರರೂಪುಳ್ಳುವಾದಡಂ ನಿಟ್ಟಿಸಲ್ಸಮರ್ಥೆಯು ॥
ಭರಿತ ಭಯದಿಂದೋಡಿ ಪೋಪವಾವಾವೆಡೆಗೆ ।
ಗುರುಜನಾನುಜ್ಞೆಯಿಂ ಬಪ್ಪಪದಸಂಗತಿಯು ।
ಪರಿಹರಿಸೆ ದೇಹಮುಂ ಧರೆಯೊಳರದಿದು ಸತ್ಯವೆಂದೆಣಿಸು ರಘುಕುಲೇಶ ॥ (14)

ಚರಣ ಸೇವೆಯೊಳಿರ್ಪ ಸೇವಿನಿಯ ದಿಕ್ಪಾಲ ।
ಸುರನಾಥನಾದೊಡಂ ನಿಟ್ಟಿಸಲಸಾಧ್ಯಮಿದ ।
ಧರೆಯ ಜನರೀ ಬಲ್ಲರೈಸೆ ಮತ್ಪಿತೃಗೇಹದಲ್ಲಿರ್ಪ ಕಾಲದಲ್ಲಿ ॥
ಸುರಪಗುರು ಸಂಕಾಶ ಕಾರ್ತಾಂತಿಕೋತ್ತಮರು ।
ಪರಿಕಿಸುತ ನಿಜಶಾಸ್ತ್ರಮೆಲ್ಲಮಂ ಪ್ರಿಯದಿಂದ ।
ಒರೆದ ವಾಣಿಯ ಸತ್ಯಮೆನಿಸದದ ಬಿತ್ತರದಿ ಬಿನ್ನವಿಪೆ ಚರಣಯುಗಕೆ ॥ (15)

ಇಹನೊಡನೆ ಕೆಲಕಾಲ ವಿರತಿಯಿಂದತಿ ಸುಖವ ।
ಜಗದಲನುಭವಿಸ ವೇಳ್ಕೆಂದು ಸಾಮುದ್ರಿಕದ ।
ಘನವೇತ್ತೃಗಳು ಮಾತೆಯೊಡೆಯೆ ವಿಸ್ತರವಾಗಿ ಪೇಳ್ದುದಂ ಕೇಳರ್ದೆನು ॥
ವನಿತೆಗಂ ಪತಿದೈವವೆಂದೊರೆವ ಶ್ರುತಿತತಿಯು ।
ಅನುಸರಿಸದಿರಲು ಸಂಭವಮಪ್ಪುದಘ ಮುಂದೆ ।
ಜನಿತವಾಗದು ಸುಖಂ ಪಳಿವಾತು ಪೋರ್ಪರಂ ಮನ್ನಿಸಲ್ವೇಳ್ಕು ಮುವದಿ ॥ (16)

ನಿರತಿಶಯ ಸುಖದಿಂದ ತವರುಮನೆಯುಲಿಯಿರ್ದ ।
ತೆರದಿ ಬನದೊಳ್ ಭವತ್ಪಾದ ಸೇವೆಯೊಳಿರ್ಪ ।
ಪರಿಕಿಸಲ್ಕೆನ್ನಿಂದ ಲಘು ಲೇಶವುಂ ತೋರದದಸಕರದೊಯ್ಯದುಳಸೆ ॥
ಗರಳ ಸೇವನೆಯಗ್ನಿ ಜಲಗಳೊಳಗೇ ನೊಂದ ।
ಪೊರದಸುಗಳಂ ಕಳೆವದಲ್ಲದುಳಸಂ ರಾಮ ।
ಕರುಣಾಕಲಿತ ಹೃದಯ ಕಾಯ್ವುದುಚಿತಂ ಪೇಳ್ವೆನೆನ್ನ ಮಾನಸದಲಿಹುದಂ ॥ (17)

ದೀನೆಯು ಪತಿವ್ರತೆಯು ಸಂಕ್ಲೇಶವಶದಿಂದ ।
ಮ್ಲಾನೆಯುಂ ಸುವ್ರತೆಯು ಸ್ವೀಯು ಸುಖಸಂತೋಷ ।
ಮಾನ ಭಾಗಿನಿಯೆನಿಸುವೆನ್ನ ವರ್ಜಿತಗೈಪ್ರದಾವಧರ್ಮಂ ಮಹೀಶ ॥
ಆನು ವಿಜ್ಞಾಪಿಸಲ್ಕೆಕ್ಕುದೇ ನೀ ಶಾನ ।
ತಾನಾವೆಡೆಯೊಳಪ್ಪೊಡಲ್ಲಿ ಮಜ್ಜನವಹು ।
ದೂನವಿಲ್ಲವೆನುತ್ತಲೊರೆದಶ್ರುಪೂರ್ಣಾಕ್ಷಿಯೆನಿಸಿ ಮೌನದೊಳಿರ್ದಳು ॥ (18)

ನೋಡಿ ಬಹುವಿಧದಿಂದಲುಪಚರಿಸುತಿನಿನುಡಿಗ ।
ಳಾಡಿದಿನಿಯನ ಮುಖಾಬ್ಜವ ನಿಟ್ಟಿಸುತಲೆಂದ ।
ಳೊಡವುಡು ವಿಡುವೆಡೆಯು ಲೇನುಕೊರತೆಗಳಿಲ್ಲದತಿಸುಖದೊಳಹುದಾದರು ॥
ನಾಡೊಳೆಲ್ಲರು ಸತಿಯನುಳಮ ಗಮಿಗಿದವೆನ್ನು ।
ತೊಡಕುವರು ಸ್ತ್ರೀ ತನುಜರನುಜಾತರುವೆಡೆಯು ।
ಮೂಡಿದಾನಂದದಿಂ ದಿಗಲಕ್ಷ್ಮಿಯಂ ಗೆಯ್ಯ ನುಳಿವಗೇ ಸರ್ವಜನರು ॥ (19)

ಸತಿಯು ಸಲಹುವರೆ ಸಾಹಸಮಿಲ್ಲದುಳುಹಿದಂ ।
ಕ್ಷಿತಿಪನೆಡೆಯೊಳಗೆಮ್ಮ ಕೆಲರಾಡುವರು ಮಿಗುಳೆ ।
ಪತಿಯನುಳಿವೀ ಪುರದೊಳೀಂ ಕತದೊಳೀ ಮಹಿಳೆಯಿಪ್ಪಳೆಂದೆನುತ ಕೆಲರು ॥
ಮಿತಿಯಿಲ್ಲದಮಿತ ಜನರಾಡದುಳಿಯದೇವ ।
ಹಿತವಬಿನ್ನವಿಪೆ ನಲ್ಲದೆ ವಿಷಮದುರ್ಮನದ ।
ಗತಿಯ ನಂಟೆನು ಸಾಧು ಸತ್ಕುಲಜ ಪೌರಂಧ್ರಿಯರ್ನಡೆವ ನಡತೆ ವಿಡಿದು ॥ (20)

ಮತ್ತೆಕುಶಕಾಶಮೈಷಿಕ ಕಂಟಕಾದಿಗಳು ।
ಬಿತ್ತರದ ಸುಖವೀವ ಬಿರುಗಾಳಿ ಕಳ್ತಲೆಯು ।
ಮೊತ್ತಮುಪಕರಿಸದಿರದಮಿತ ಪ್ರಸ್ತರಶರ್ಕರಾದಿ ಶಯನಂಗಳೆನಗೆ ॥
ಮೆತ್ತನಾಸ್ತರಣಕಲ್ಪಂ ಪತ್ರಫಲ ಮೂಲ ।
ಬಿತ್ತರದಲುಪಹಾರ ಮಮೃತ ನಿಭವೆಂದೆನಿಪ್ಪ ।
ದುತ್ತಮ ಪತಿವ್ರತ್ಯ ಹೃದಯಸ್ಥವಾಗಿರಲ್ಕಡವಿಯೂರೆನಿಪ್ಪುದನಘ ॥ (21)

ಬಾಧಿಸೆನು ಚಿತ್ತಮಂ ಭವದೀಯಚರಣ ಸಂ।
ಬಾಧಗೊಳಸೆನು ನಿಮ್ಮ ನುಳದವ್ಯಯಂ ತನಗೆ।
ಪೋದವಿಾಯದು ನಿರಯನಿಭಮೆನಿಪ್ಪದದರಿಂದ ಪೊಡಗೊಂಡು ಪೋಪ್ಪುದುಚಿತಂ॥
ಭೇದ ವೆನಿಸಿದೊಡಿಂದೆ ಗರಳಸೇವನೆಯಿಂದ।
ಭೇದಿಸುವೆನಸುಗಳ ಭವತ್ಸವಾಗವು ಮುಳದು।
ಮೇದಿನಿಯೊಳರೆನಿಮಿಷ ಜೀವಿಪುದಕೆಂದಧಿಕಲೇಸು ನಿಧನದಕಾಂಕ್ಷೆಯು॥ (22)

ನೋಡದಿರಲರೆಘಳಗೆ ಯುಗಮೆನಿಪ್ಪದೈಸೆ ಮಗು।
ಳಾಡಲೇನದನು ಪದಿನಾಲ್ಕು ವತ್ಸರ ಕಾಣ।
ಮಾಡುವೆನದೆಂತು ಜೀವಿಸುವೆ ಪಿಂತಣ ಮಹಾರಾಮಾಯಣದ ಕಥೆಯನು॥
ನೋಡಿಕೇಳರ್ಪುದುಂಟಾ ದೊಡದರೊಳ್ ರಾಮ।
ಜೋಡಗಲಿ ಸೀತೆಯಂ ಬನಕೆ ಗವಿಸಿದನೆಂಬ।
ರೂಢಿಯುಂಟೇ ನಿರಾಗಸೆಯ ನಿಷ್ಕಾರಣದಿ ಬಿಡುವುದುಚಿತವೆ ನರೇಶ॥ (23)

ಎಂದನೇಕ ವಿಧ ಪ್ರಲಾಪಸಂತಾಪಮಂ।
ಪೊಂದಿದಗ್ಗದ ವಾಣಿಯಿಂದ ನಿಸ್ಸಂಜ್ಞೆಯಿಂ।
ಬಂಧುರಕ್ಲೇಶದಿಂ ಪೊರ ಪೊಣ್ಮಲಂಬಕದಿ ಕಂಕಣಗಳುಷ್ಣತರದಿ॥
ಸಿಂಧುಜಲಸಂಪರ್ಕ ಸಾರಸಮೊ ಹಿಮಕಲಿತ।
ಮಿಂದು ಬಿಂಬಮೊಯೆನಲ್ಮುಖ ಮೆಸೆಯ ಬಿಟ್ಟಿಸುತ।
ಇಂದೀವರಾಕ್ಷಿಯಂ ಮೃದುಮಧುರವಾಣಿಯಿಂದುಪಚರಿಸುತಿಂತೆಂದನು॥ (24)

ದೇವಿ ಕೇಳೆನ್ನೊಡನೆ ಕರದೊಯ್ಯಲನುಮಾನ।
ಭಾವಮೆಳ್ಳನಿತಿಲ್ಲ ಮತ್ತಾರದೆಸೆಯಿಂದ।
ದಾವಭಯ ಸಮನಿಸುಗು ಘೋರಬಭಯ ಶಂಕೆಯಲ್ಲೇನೊಂದ ನೆನೆಯಲಿಲ್ಲ।
ದೇವದಾಸವರೊಳಗದಾರು ಬಂದಡಸಿದರು।
ನೋವಿಸುವುದಲ್ಲದಲ್ಲಲ್ಲ ಬನ ಭೀಕರದ।
ತಾವೇನುತಮಿನಿತ ವಿಸ್ತರಿಸ ಬೇಕಾದುದಕೆ ಸಂತಾಪಗೊಳಲೇತಕೆ॥ (25)

ತಾತನಾಜ್ಞೆಯ ಮೀರಲಳವಲ್ಲ ಧರ್ಮಂ ಸ।
ನಾತನಂ ಪಿತೃಮಾತೃಗಳು ದೇವರಿಂದಧಿಕ।
ನೀತಿಯರಿಯದಲವರನುಪಚರಿಪ್ಪದುಳದಿತರ ದೈವಮಂ ಭಜಿಸೆ ಸುಖವು॥
ಜಾತವಾಗದು ಜಸಕೆ ಲೋಪ ಸಮನಿಪ್ಪದೆಂಬ।
ಮಾತಿನಿಂ ಗಮಿಸುವೆಂ ಕ್ರೂರ ಕಾಠಿಣ್ಯತರ।
ದಾತಿಶಾಯಿತಮರಣ್ಯಂ ಸ್ತ್ರೀಯ ರೊಡನೈದಲನುಚಿತ ಮದೆಂದು ತಿಳದು॥(26)

ಪುರದಲಿಹುದೆಂದು ಸೂಚನೆಗೈದೆಮಾತುರದೊ।
ಳುರುತರಕ್ಲೇಶ ಸಂಭವಮದುದಾ ದೊಡೆಯು।
ಧರೆಯೊಳಂ ನಿಜಕೀರ್ತಿ ಬೇರಿಹುದೆ ರವಿಯುಳದು ಛಾಯೆಮತ್ತರಂಗಿಹುದೆ॥
ಶರಿಕಮವಿನಾಭಾವ ಮೆಂದರಿದು ಕರೆದೊಯ್ವೆ।
ತರುಣಿರನ್ನಳೆ ಶೋಕಮಂ ಪರಿದು ಸಂತೋಷ।
ಭರಿತಮಾಗುತಲಿ ಪ್ರಸ್ಥಾನ ಸಾಮಗ್ರಿಯಂ ನನುಗೆಯ್ಯುವೇಳ್ಕೆಜವದಿ॥ (27)

ಗುರುಜನರ್ಮದ್ವಂಶಸಂಭವರ್ಮತ್ತ್ರಸ್ಯ ।
ರಿರದೆಪಿತೃವಗಾತೃಸೇವೆಯು ಸೇವುದಿಂಗೈದು ।
ಸುರವ ಗಾಂಧರ್ವ ಬ್ರಾಹ್ಮದಿಲೋಕಂಗಳಂ ಗೆಲಿದರರೆನಿಮಿಷದೆ।ಳಗೆ ॥
ಪರಮಪುರುಷರ ಸಾಧುವೃತ್ತಮಂ ಕೈಕೊಂಡ ।
ರಿರದೆ ತ್ರೈಲೋಕ್ಯ ಸ್ವಾಧೀನಮೆನುತಂ ಪಿರಿಯು ।
ರರುಪಿದುದ ತಿಳದಾನು ವೀರ ಬಲ್ಲೆನೆ ಲೋಕವಾದಕಾಂ ಗುರಿಯುಪ್ಪೆನೆ ॥ (28)
ಯಾಗಾದಿ ಸರ್ವತೀರ್ಥಸ್ನಾನಫಲಗಳುಂ ।
ಯೋಗಾದಿ ಜಪತಪಧ್ಯಾನ ಸತ್ಕರ್ಮಗಳ್ ।
ಸಾಗರಾಂತದ ಧರೆಯ ದಾನಗಳ ಫಲಗಳುಂ ಗುರುಸೇವೆಯಿಂದಲೊದಗಿ ॥
ಭೋಗ ಮೋಕ್ಷಗಳೀವುವದುನಿಮಿತ್ತಂ ಬನಕೆ ।
ಪೋಗದುಳದಪುದಿಲ್ಲ ನೀಂ ಬಪ್ಪುದತಿಶಯದ ।
ರಾಗಾನುವೃತ್ತಿ ಯೆಂದೆನುತ ಸೇವಿಸೆ ಜನಕಜಾತೆ ಸಂತಸಗೊಂಡಳು ॥ (29)
ಸತಿಗೆ ಸಂತಸದಲಪ್ಪಣೆಗೊಟ್ಟುದಂ ಕಾಣು ।
ತತಿಶೋಕದಿಂದ ಸೌಮಿತ್ರಿ ರಘುನಾಥ ಗಾ ।
ನತನಾಗಿ ಬಿನ್ನಪಂ ಗೈದ ನಿಜಚಿತ್ತಾನು ವೃತ್ತಿಯಂ ಮರೆಯೆನಿಸದೆ ॥
ವಿತತ ಮೃಗ ಪಕ್ಷಿಯೂಥಗಳಪ್ಪ ಕಾನನ ।
ಕ್ಕತಿವೇಗ ಧರಣಿಸುತೆ ಸಹಿತ ಗಮನಿಪುದಾದೊ ।
ಡಿತರವಂ ನೋಡದಗ್ರಗನೆನಿಪೆಶರಚಾಪ ಧರನಾಗಿ ದೇವಮುದದಿ ॥ (30)
ಸುರಲೋಕ ಭೋಗಮಂ ದೇವತಾತ್ವಂಗಳಂ ।
ನಿರತಿಶಯದೈಶ್ವರ್ಯ ಮುಂತಾದ ಭೋಗಗಳ ।
ಪರಿಕರವನಾಂ ಬಯಸೆ ಭವದೀಯ ಪದಸೇವೆಯೈಕತಾನದೊಳರ್ಥನು ॥
ಬರುವೊಡಪ್ಪಣೆಗೊಡುವುದೆಂದೊರೆದ ಸೌಮಿತ್ರಿ ।
ಯಿರವನೋಡುತರಾಮ ಬಹುವಿಧದಲುಪಚರಿಸಿ ।
ಪರಿಹರಿಸುತೈತರಲೆ ಕೃ ್ರಥದಿಂ ರಾಮನೆ ಡನಿಂತೆಂದ ವಿನಯದಿಂದ ॥ (31)
ಕೊದಲಪ್ಪಣೆಯನಿತ್ತು ಮಗುಳೆ ಪರಿಹರಿಸುತಿಹು ।
ದಿದು ಹೃದಯಕನುಮಾನವೆನಿಸಿ ಕಂಗೊಳಸುತಿದೆ ।
ಸದಯ ಮದ್ಗಮನಕೆ ನಿಷೇಧಮೇಂ ಕೆಶದಿಂದ ಲಡಸಿದುದು ಪೇಳ್ವುದೆನಲು ॥
ಚದುರಿಂದ ರಘುವೀರನೆಂದ ಕೇಳ್ ಸೌಮಿತ್ರಿ ।
ಯುದಿತವಶ್ಯಂ ಸಖನು ಪ್ರಾಣ ಸಮಪ್ರಿಯತರಂ ।
ವಿದಿತಾಗವಜ್ಞ ನೆಂದರಿತಿರ್ದ ನಾದೊಡಂ ಬನಕೆನೀಂ ಬರಲು ಪ್ರಿಯದಿ ॥ (32)
ಪೊರೆವಳಾರ್ಗಸೈ ಸುಮಿತ್ರೆಯರ ಚಿತ್ತದಿರ ।
ವರಿದು ಪೋಷಿಸುವವನಾರು ಮದ್ಗಮನಸಂ ।
ಭರಿತಹೃತ್ತಾಪದಿಂ ತೊಳಲುತಿಹರುಪಚರಿಪ ದತ್ತಿಗರದಾರಿರ್ಪರು ॥
ಧರಣೀಶ ಕೈಕೆಗುಂ ವಶನೆನಿಸಿ ಮುನ್ನಿರ್ದ ।
ನುರುತರ ವ್ಯಾಕುಲಂ ಜನಿತವಾಗಲ್ಕತರ ।
ರಿರವ ನೋಡುವರೆಂತು ಮಾತೆಯರಸೇವೆ ಯೊಳಗಿಹುದೆಂದುಪೇಳ್ವುದೈಸೆ ॥ (33)

ಅರಸ ಮನ್ಮಥಪಾಶದಿಂ ಒಲಿದು ರಾಜ್ಯಮಂ ।
ಕರಗತಂ ಗೈದಶ್ವಪತಿಯಣುಗಿ ಸ್ವಪ್ನದೊಳ್ ।
ಸ್ಮರಿಸುವಳ್ ಮನ್ಮಾತೆ ಕೌಸಲೆ ಸುಮಿತ್ರೆಯರ ಮನುಜರೆನ್ನುತ ಬಗೆವಳ್ ॥
ಭರತನಂ ಸಿಂಹಾಸನಾಧಿಪತ್ಯಂಗೈವ ।
ತಿರದೆ ಮುಸ್ತಕದಿ ಮಾತೃಶಾಸನದಿ ನಮ್ಮವರ ।
ಪೊರೆಯನದರಿಂದಧಿಕ ಕ್ಲೇಶಕಾರಣಮಪ್ಪುದೆಂದು ತೋರುವುದು ಮನಕೆ ॥

ಪತಿಯು ಪಂಗಿನಿತಿಲ್ಲ ಸವತಿಗಧಿಕಾರೆ ನಿಜ । [(34)
ಸುತರಿಲ್ಲ ಸನ್ನಿಧಿಯಲಾವ ಪರಿಯಲಿ ದುಃಖ ।
ತತಿಯನಪಹರಮೆನಿಪಳವ್ವೆ ಮಾತಾಡುವರ ಕಾಣದನುದಿನ ತೊಳ್ಗಲುತ ॥
ಹಿತವನಾಚರಿಸು ವೃದ್ಧರ ವಿಷಯದಲಿ ಸ ।
ನ್ಮತಿಯೊಳದು ದಿಟ್ಟಗಳ ಫಲವ ಸೆಸೆಯದೆ ಸುಖ ।
ಪ್ರತತಿಕೈಸಾರುವದು ಸೌಮಿತ್ರಿ ಮನ್ನುಡಿಯು ಮೀರದಾಗೊಳಗಿರ್ಪುದು ॥ (35)

ಎಂದನೇಕವಿಧ ಪ್ರಪಂಚಗರ್ಭಿತನುಡಿಗ ।
ಳಂದ ರಘುನಂದನಂ ಲಕ್ಷ್ಮಣನಿಗರುಪಲ್ಕ ।
ಮಂದ ನಯನುಡಿಗಳಂ ವಿಜ್ಞಾಪನಂಗೈದ ದೇವ ತ್ರೈಭುವನ ದೊಳಗೆ ॥
ಬಂಧುರದ ಭವದೀಯ ತೇಜಪ್ರಭಾವ ದಿಂ ।
ಬಂಧುಗಳ್ನಿಪ್ಪರವನೀಜನಂ ಭರತನಂ ।
ಪೊಂದಿ ಯೆನಗಿಂದಧಿಕಮೆನಿಸಿ ಸೇವೆಯೊಳಿರ್ಪ ಮಾತೃಚಿತ್ತಾನುಮತದಿ ॥ (36)

ಒಡೆಯ ಕೌಸಲ್ಯಾ ಸುಮಿತ್ರೆಯರ್ಧೀಮಂತ ।
ರೊಡತಿರ್ಪುರ್ಮದ್ವಿಧಾನದ ಕೋಟಿಲೋಕಮಂ ।
ಸೊಡೆಯೊಳಟ್ಟನುದಿನಂ ಪೊರೆವ ಸಾಮರ್ಥ್ಯಮುಂಟಾಮಹಾಮಹಿಮರಿಂಗೆ ॥
ಪೊಡವಿಯಂ ಪೊರೆದಪರಿಗತಿಶಯಮೆ ಪಳ್ಳಿಯಂ ।
ದೃಢಕರಂಗೊಳಸುವುದು ಭೂರಕ್ಷಣಾಸ್ಥರಿಂ ।
ಗೊಡಲಪೊರೆದಪುದೇನಸಾಧ್ಯಮೋ ರಘುವೀರ ದಯದಿ ಡಿಂಗರಿಗನೆನಿಸು ॥ (37)

ಮುಂತ್ಯೆಮವೆಂ ಭೃತ್ಯನಂತೆ ಪಂಥಾನಮಂ ।
ಸಂತಸದಿ ತೋರುತ ಖನಿತ್ರ ಪಿಟಕಂಗಳಂ ।
ತಾಂತಳೆದು ಫಲಮೂಲ ಪುಷ್ಪೋಪಕಾರಂಗಳನ್ನರ್ಪಿಸುತ್ತಲಡಿಗೆ ॥
ಚಿಂತಿಸದೆ ಬೆರತೊಂದ ಶರಪಾಣಿಯೆಂದೆನಿಸಿ ।
ನಾಂ ತಳುವದಿರುಳು ಪಗಲಾಯೆಸಮಂಕಳೆದು ।
ಸ್ವಾಂತ ದನುರಾಗದಿಂ ಸೇವಿಸುವೆ ಭವದೀಯಚರಣಾನುಮತದಿ ನಯದಿ ॥ (38)

ಸೇವೆಯೊಳಗಿರಿಸೆನ್ನ ಶರಣನ ನಿಷೇಧಿಸದೆ ।
ಪಾವನಾಂಘ್ರಿದ್ವಯದ ಮರೆಯೊಕ್ಕೆನೆಂದೆನುತ ।
ಕೋವಿದಾಗ್ರೇಸರಂ ಬಹುವಿಧದಿ ಬಿನ್ನವಿಸಲಾನುಡಿಯು ಕೇಳಪ್ರಿಯದಿ ॥
ಸಾವಧಾನದಿ ಸುಹೃಜ್ಜನ ಭೃತ್ಯ ಮಿತ್ರಜನ ।
ರೀವಿಧವನರಿವಂತೆ ತಿಳುಪುಸಾಗರಸಾಥ ।
ಶೀವಿಯಿಂದಿತ್ತ ತೃಣಕಂ ಶಿಲೀಮುಖಮುಭಯ ಖಡ್ಗಕವಚಂಗಳೆಲ್ಲ ॥ (39)

ಗುರುವಿನೆಡೆಯೊಳಗಿರ್ಪವಖಿಲೋಪಚಾರದಿಂ ।
ಸರಭಸದೊಳೈದಿ ಸಶರಾದಿಗಳ ತಹುದೆನುತ ।
ಲೊರೆಯುಲತಿಸಂತಸದೊಳೈದಿ ದಿವ್ಯಾಯುಧಗಳನ್ನು ಕೈಕೊಂಡು ಜವದಿ ॥
ಚರಣದೆಡೆಯೊಳಗಿಡಲ್ಕೊಡಿ ಸಂಭ್ರಮಚಿತ್ತ ।
ಮೆರೆದು ಲಕ್ಷ್ಮಣನೊಳಂತೆಂದಂ ಸುಹೃನ್ಮಿತ್ರ ।
ಪರಿಜನಾದಿಗಳಗಮಿತೋಪಚಾರದೊಳೀಯುವೇಳ್ಕು ತದಭೀಷ್ಟಗಳನು ॥ (40)

ವೇದವೇದಾಂಗ ಪಾರಗ ವಿಪ್ರಸಂತತಿಗೆ ।
ಸಾಧುತಾಪಸರಿಂಗೆ ಸಜ್ಜನಸುಭೃತ್ಯರಿಗೆ ।
ಮೇದಿನಿಯೊಳೆಮ್ಮನುಪಸರ್ಪಿತದಜನರುಗಳಗಮಿತೇಷ್ಟಗಳನೀವೊಡೆ ॥
ಮೋದದಿಂ ಗುರುಪುತ್ರನಾಸುಯಜ್ಞಾರ್ಯನಂ ।
ಸಾದರದಿಕರತಹುದು ತನ್ಮುಖದೊಳಖಿಳ ಸಂ ।
ಬೋಧ ಶಿಷ್ಯರನರ್ಚನಂಗೈದು ಬನತೆಂದೆಗಮಿಸವೇಳ್ಕೆಂದೊರೆಯಲು ॥ (41)

ಕೇಳ ಲಕ್ಷ್ಮಣ ತ್ವರಿತದಿಂದೈದಿ ವಿಪ್ರಗಂ ।
ಮೌಳಯಿಂದರ್ಚನಂಗೈದು ರಘುನಂದನಂ ।
ಪೇಳ್ದದರ್ಥವತಿಳುಪಿ ನಸುನಗುತ ಲೊಡಗೊಂಡು ಬರಲಾಸುಯಜ್ಞಮುದದಿ ॥
ನಾಳೀಕಪೀಠನಂತೈತಂದು ಭೂಭುಜರ ।
ಮೌಕ್ಯವರ್ಣಿಕ ರಾಘವೇಶಗೃಹಮಂ ನೋಡಿ ।
ತಾಳ'ಸಂತೋಷಮಂ ನೊಳಪೊಕ್ಕು ರಘುವರನ ಕಂಡ ನಾನಂದದಿಂದ ॥ (42)

ಗುರುತನಯನಂ ಕಂಡು ಚರಣಕಭಿನತಿಗೈದು ।
ಹರುಷದಿಂದಂಗದಂ ಕುಂಡಲಂ ಕಟಿಸೂತ್ರ ।
ವರಮಣೀಕಂಕಣಂ ಬಹುರತ್ನಭೂಷಣಗಳಿತ್ತು ಸತ್ಕಾರಗೈದು ॥
ಪರಮರ್ಷಿಯೊಡನೆಂದ ಹಾರಕೇಯೂರಾದಿ ।
ಪರಿಪರಿಯ ವಸ್ತ್ರಾದ್ಯಲಂಕಾರದಿ ಸೀತೆ ।
ವಿರಚಿಸುವ ಪೂಜೆಯಂ ಕೈಕೊಳ್ವುದೆಂದೊರೆದೊಡಾ ದ್ವಿಜನೊಡಂಬಟ್ಟನು ॥ (43)

ನಾಗಶತ್ರುಂಜಯದನಾಮಕಂ ಸಾಹಸ್ರ ।
ವೇಗಯುತಗಜದೊಡನೆ ಭವದೀಯ ಚರಣಕಂ ।
ಬೇಗಲರ್ಪಿತ ಗೈವೆನೆನೆ ವಿಪ್ರಸಂತಸದಿ ಕೈಕೊಂಡ ಹರ್ಷದಿಂದ ॥
ಸಾಗರಾತ್ಮಜಗಿಕ್ಕೆಯೆನಿಸಿ ನಾನಾರತ್ನ ।
ಪೂಗ ಭೂಷಿತಮೆನಿಪ ಪರಿಯಂಕಮನ್ನೀಯು ।
ಲಾಗುರುತನೂಭವಂ ಪರಸಿದಂ ಪರಮೇಷ್ಠಿಪಾಕಾರಿಯಂ ಪೊರೆವೊಲು ॥ (44)

ಸೌಮಿತ್ರಿ ಕೇಳ್ವುದಾಗಸ್ತ್ಯ ಕೌಶಿಕತಮ ।
ಸ್ತೋಮರೀರ್ವರು ದ್ವಿಜೋತ್ತಮರು ಮನ್ಮಾತೆಯಂ ।
ಪ್ರೇಮದಿಂದಾಶ್ರಯಂಗೈದಿರ್ಪರನುದಿನದೊಳಾ ಮಹಾ ಋಷಿಗಳಿಗೆ ॥
ಕಾಮಿತ ಸುವರ್ಣಧನ ವಸ್ತ್ರರತ್ನಂ ಹಯಂ ।
ಸ್ತೋಮ ಗೋಸಾಹಸ್ರ ಮುಖ್ಯ ವಸ್ತುಗಳ ನೀಂ ।
ನೇಮದಿಂದಿತ್ತು ತೋಷಣೆಗೈವುದೆನಲಂತೆ ಪೂಜಿಸಿದ ಸೌಮಿತ್ರಿಯು ॥ (45)

ತೈತ್ತಿರೀಯಶಾಚಾರ್ಯರ್ ವೇದ ವಿಚ್ಛ್ರೀಶ್ವರಿಂ ।
ಗುತ್ತಮದ ಯಾನ ವಸ್ತ್ರಾಭರಣ ದಾಸಿಯರ ।
ನಿತ್ತು ಸಂತೋಷಗೊಳಪುದು ಸೂತಚಿತ್ರರಥ ಪೂರ್ವಾಶ್ರಿತಾರ್ಥನೆಮಗೆ ॥
ಮತ್ತೀಭರತ್ನ ಭೂಷಣಗಳತ್ತಾತನಂ ।
ಚಿತ್ತಕ್ಕೆ ಸಂತೋಷಮೆನಿಸು ಸ್ವಾಧ್ಯಾಯಿ ಸಂ ।
ಪತ್ತಿಯಿಂದಿತರಮರಿಸುದ ತಾಟಕಾಲಾಪದಂದ ಮಾನವರುಗಳ್ಗೆ । (46)
ನವರತ್ನಖಚಿತ ಯಾನಂಗಳೆಂಬತ್ತನುಂ ।
ನವಶಾಲಿವಾಹ ಸಾಹಸ್ರಗಜಮಿನ್ನುರ ।
ಪ್ರವಿಮಲದ ಗೋಸಹಸ್ರಗಳೀಯುದಿರೆ ಮಾತೆ ಸಂಭ್ರಮುಂಗೊಳುವುದೆಂತು ॥
ತವಕದಿಂದಾಪರಿಯುಲಖಿಳ ವಿಪ್ರೋತ್ತಮರ ।
ಸವಿರಳದ ಧನಧಾನ್ಯದಿಂದೊರ್ವರೊರ್ವರಂ ।
ಸುವಿವೇಕದಿಂ ಪೂಜಿಸುವುದೆನಲ್ ಲಕ್ಷ್ಮಣಂ ಪ್ರಿಯಕಲಿತ ಚಿತ್ತನಾಗಿ ॥ (47)
ತರಿಸಿ ಧನಮಂ ರಾಮಪೇಳ್ದಂತೆ ವಿಪ್ರಕುಲ ।
ವರವನಭ್ಯರ್ಚಿಸಲ್ಕೆಡಬಲದಿ ಕಂಬನಿಗ ।
ಳೊರತೆಯಿಂ ಕಂಗೊಳಪ ಭೃತ್ಯೋಪಜೀವಿಗಳ ನೋಡುತತಿ ಕೃಪೆವೆರಸುತ ॥
ಪರಿಪರಿಯ ಮೃದುನುಡಿಯುಲುಪಚರಿಸಿ ಮನದಿಷ್ಟ ।
ದಿರವರಿತು ಬೇಡಿದುದನೀವುದೆನೆ ಸೌಮಿತ್ರಿ ।
ಕರುಣದಿಂದಖಿಲ ಜನರಿಂಗೆ ಧನ ಪೌಷ್ಕಲ್ಯ ಮೆನಲಿತ್ತು ಕೃತಿಯನಿಸಿದಂ॥ (48)
ಸ್ತ್ರೀ ಬಾಲ ವೃದ್ಧರಿಗೆ ಕೃಪಣಂಗೆ ನಿಜನಿಲಯ ।
ಶೋಭಾಕರರಿಗೆಲ್ಲ ಬೇಡಿದುದನಿತ್ತು ಮುನಿ ।
ಜಾಬಾಲಿಮುಖ್ಯರಿಗೆ ಕರಿತುರಗ ರಥ ಕನಕ ವಸ್ತ್ರಾದಿಗಳನರ್ಪಿಸಿ ॥
ಶೋಭಾನುಕಾರಿಗಳ ತೃಪ್ತಿಗೊಳಸುತ ಧನಿಕ ।
ಶೋಭಾಢ್ಯರೆನಿಪಂತಸಂಖ್ಯೆಯಿಂದಿತ್ತು ಕೇಳ್ ।
ಶೋಭಾಲಯಾಹಗಮನ ನಿಶ್ಚಯದೊಳನುವಾಗಿ ನಿಂದಿರ್ದ ಸೌಮಿತ್ರಿಯು ॥ (49)
ಪಾಲಕುದ್ದಾಲ ಲಾಂಗುಲಿಯು ಪಿಂಗಳಗಾರ್ಗ್ಯ ।
ಶೂಲಿ ಸಂಕಾಶ ತ್ರಿಜಟಾಸಾಮ ವಿಪ್ರೀಂದ್ರ ।
ಶೀಲಂ ಶಿಲಾವೃತ್ತಿಯಿಂದಿರ್ದ ಕಾನನದೊಳಾತನರ್ಧಾಂಗಿ ಮುದದಿ ॥
ಬಾಲಕರನೊಡಗೊಂಡು ಬಂದು ಪತಿಯೊಡನೆಂದ ।
ಳಾಲಯದಿದಾರಕರ ಸಂಬಾಧಬಹುಳಮಿದ ।
ಲಾಲಿಪರಕಾಣೆ ಸರ್ವಜ್ಞರಾಮನ ಕಂಡುಪರಿ ದರಿದ್ರವನಘಹರ ॥ (50)
ಪೆಂಡತಿಯ ನುಡಿಗೇಳ ಶಾಟಿಯುಂ ಕಟಿತಟದಿ ।
ದಿಂಡುಡಿಗೆಯುಂಗೈದು ಭೃಗ್ವಂಗಿರಾಭನಡೆ ।
ಗೊಂಡು ರಘುವೀರನರಮನೆಯ ಬಾಗಿಲ್ಗಳಂ ಕಳದು ಮುದದಿಂದ ಪೊಕ್ಕು ॥
ಕಂಡುರಾಮನಮುಖವ ತ್ರಿಜಟನಿಂತೆಂದ ಭೂ ।
ಮಂಡಲಾಧಿಪ ಕೇಳು ಬಹುಪುತ್ರ ನಿರ್ಧನಿಕ ।
ನಂಡಲೆವ ದಾರಿದ್ರ್ಯಮಂ ತಿರಸ್ಕೃತಿಗೆಯ್ಯವೇಳ್ಕೆನುತ ವಿಪ್ರನುಡಿದಂ ॥ (51)

ಡ್ವಿಜನ ವಾಣಿಯಾಕೇಳ್ದು ರಾಮ ನಸುನಗುತ್ತ ಗೋ।
ವ್ರಜವ ನಿತ್ತುಬೆ ದಂಡದಿಂದೆಸೆಯುದಾವೆಡೆಯು ।
ಛಿಜಸುವುದನಿತ್ತ ನಿನಗಿತ್ತ ಪೆನೆನಲ್ವಿಪ್ರ ನುತ್ತರೀಯುವನು ಬಲಿದು ॥
ವಿಜಯಾನೋಡೆಂದೆಚ್ಚೊ ಡಾದಂಡ ಸರಯೂವಂ।
ತ್ಯಜಿಸಿ ಗೋಶತ ಸಹಸ್ರಂಗಳಂ ಕಳೆದು ಭೂ।
ಯುಜ ಮನಿಸಲಾತನಂ ಪಿಡಿದಪ್ಪಿ ರಘುವೀರ ನುಪಚರಿಸುತಿಂತೆಂದನು । (52)

ಪರಿಹಾಸದಿಂದಾನು ಪೇಳ್ದುದಕೆಕೋಪವಂ।
ಧರಿಸ ಸಲ್ಲಂ ಜೀಯಭವದೀಯ ತೇಜಸ್ಸು।
ದುರವಗಾಹಂ ತಿಳಿವೊಡಿಚ್ಛೈಸಿ ದಪರಾಧಮಂ ಮನದಲಿಡದೆ ಬಳಿಕ ॥
ಪರಿಪರಿಯ ಕನಕಮಣಿ ವಸ್ತ್ರ ಮುಂತಾದುದಂ।
ವರಿಸು ಮದ್ಭವನವಿಪ್ರ ಕಾರಣಂ ಸತ್ಯವಿದ।
ನರಿತೆನ್ನ ಕೃತಿಯೆನಿಪುದೆನಲಾ ತ್ರಿಜಟಮುನಿ ಸಂತಸದೊಳಂ ತೆಂದನು ॥ (53)

ಕೃತಯುಗದ ಭೂಪಾಲ ರತುಲಕೀರ್ತ್ಯಂಗನಾ।
ವಿತತಸೀಮಂತ ಮುಕ್ತಾಭಂ ಭವದ್ಯಶಂ।
ಮತಿವಂತರನುದಿನಂ ನೋಳ್ಪಂತೆ ಸದ್ಧರ್ಮ ಸಾಂಗವೊಮೂರ್ತಿ ಬಳಿಕ ॥
ಕ್ಷಿತಿಯಮರಘೋಷಣೆಗೆ ಬದ್ಧಕಂಕಣ ಮಲ್ತೆ।
ಕ್ಷಿತಿಪಕುಲರತ್ನದರ್ಶನದಿಂದಲಾಂ ಧನ್ಯ।
ನತಿಶಯಿತನಾದೆನೆಂದುಸುರಿ ಪರಸಿದನಮಿತ ಹರುಷದಿಂದಾ ವಿಪ್ರನು। (54)

ಅಮಿತ ಗೋವ್ರಜವ ಕೈಕೊಂಡು ಸತಿಯೊಡಗೊಂಡು।
ಗಮಿಸಲ್ಕಹಾಮುನಿ ಯಿತ್ತ ರಘುನಂದನಂ।
ಪ್ರಮುದಿತಾಂತಃಕರಣದಿಂ ಸ್ವಾರ್ಜಿತವಿತ್ತ ಸಂತತಿಯ ಭೂಸುರರ್ಗೆ ॥
ಕ್ರಮದಿಂ ಯಥೇಷ್ಟವಾಗಿತ್ತು ಮಿತ್ರರನೆಲ್ಲ।
ಸಮತೆಯಿಂ ಸಂತೈಸುತಾಪಜೀವ್ಯರಂ ಪ್ರೀತಿ।
ಮಮತೆಯಿಂ ಮನ್ನಿಸುತ ತಾತನಿಪ್ಪೆಡೆಗೈದಲಿಚ್ಛೈಸಿದಂ ಜವದೊಳು ॥ (55)

ಪೊರೆವವರ ಪೊಂದಿದರ ನಿರತ ಸೇವಿಪಜನರ।
ಪರಿಪರಿಯ ವಸ್ತ್ರ ಭೂಷಣಗಳತ್ತುಪಚರಿಸಿ।
ಧರಣಿ ಸಂಭವೆ ಸುಮಿತ್ರಾನಂದನಂ ಸಹಿತ ದಶರಥಮಹೀನಾಥನ ॥
ಚರಣವಂ ಕಾಣಲುದ್ಯೋಗದಿಂದ ಲೋಕಜನ।
ರಿರವನಂಗೀಕರಿಸಿ ಶ್ರೀರಾಮ ಪುರದರಸ।
ಬರುವ ಸಿಂಗರವನೆಂತೊರೆವೆ ಮುಮ್ಮೂರ್ತಿಗಳ ಪಡೆದನತಿಶಯಲೀಲೆಯ ॥ (56)

(ಸಂಧಿ 11, ಪದ 507.)

## ಹನ್ನೆರಡನೆಯ ಸಂಧಿ.

ಸೂಚನೆ ॥ ಸಾದರದಿ ತಾತ ನಪ್ಪಣೆಗೊಂಡು ಶುದ್ಧಾಂತ।
ಮೋದಗೊಳುವಂದದುಪಚರಣೆಯಿಂ ಸಂತೈಸಿ ।
ಭೂದಿವಿಜ ಮಕುಟಮಣಿ ಗುರುವಸಿಷ್ಠರ ನೇಮವಾಂತನಾ ರಘುವೀರನು ॥

ಮೇನಕಾತ್ಮಜೆ ಕೇಳು ರಘುನಾಥ ಗೃಹದಿಂದ।
ಸಾನುರಾಗದಿ ಬರ್ಪ ವಾರ್ತೆಯಂ ಕೇಳುತಂ ।
ಜಾನಪದ ನಗರವಾಸಿಗಳೆಲ್ಲ ನಿಟ್ಟಿಸಲ್ ಹರ್ಮ್ಯಾಗ್ರಗಳ ನಡರಲು ॥
ಜ್ಞಾನಿಗಳ್ಪರಿಜನರು ವಿಪಣಿವೀಥಿಯೊಳಿರ್ದ।
ರೂನಮತಿಯಿಂದ ಸಲ್ಲಾಪಕೆಳಸಿದರಕಟ ।
ದೇನೆಂಬೆ ಸರ್ವಜನ ವೈಮನಸ್ಯದ ಬಗೆಯ ನುಡಿವಡಸದಿಳ ಧರೆಯೊಳು ॥ (1)

ಪೊರವಡೆಯು ಚತುರಂಗ ಬಲಛತ್ರಚಾಮರಂ ।
ಸುರುಚಿರದ ವಾದ್ಯ ಮಾಗಧವಂದಿ ಸಂದಣಿಗ ।
ಳುರುತರದ ವಿಭವದಿಂದೈತಪ್ಪರುಳಿದು ನಿಜಪತ್ನಿಲಕ್ಷ್ಮಣರೀರ್ವರ ॥
ಕರದೊರ್ವನೈತಪ್ಪ ಧರ್ಮಸ್ವರೂಪಿ ನಿಜ ।
ಗುರುವಾಕ್ಯ ಗೌರವದೊಳಾದೊಡಂ ನೋಳ್ಪಜ ।
ತರಹರಿಪರೆಂತಕಟ ವಿಧಿಕೃತಮದಾರಿಗುಂ ಮೀರಲಳವಲ್ಲ ಮತ್ತೆ ॥ (2)

ನವಶಿರೀಷದಕೋಶ ಮೃದಿವಾಭಿಮಾನಮುಂ।
ನವಸುಮೀ ಮೃದುಳ ಪದಕಾನನದ ವಿನ್ಯಾಸ।
ದವಿರಳದಕಷ್ಟ ಕೋಚರ್ಯವುದೆಂತು ಸುಕುಮಾರಿನಡೆವಳೆ . . . . . ನೋಡನೆ ।
ನೆವನೇನ ಕಾಣದಲನಾಗಸನ ಸದ್ಗುಣನ।
ಕುವಲಯಪ್ರಿಯನ ಕುವರನ ಪ್ರವಾಸಂ ಗೈದ।
ಭುವಿಯರಸನೇಂ ಕತದೊಳೆಂತು ಸಮ್ಮತಿಸಿಂದ ಲಿರವೇಳ್ಕುನಗರಿಯೊಳಗೆ ॥ (3)

ಬಲಿಯಿಲ್ಲದೊಡೆ ಸಕಲ ಭೂತವೇತಾಳಂಗ।
ಳೆಲೆವಂತೆ ಜಗತಿಯಂ ಬಾಧಿಸುವರಹಿತರುಂ ।
ಜಲವಿಲ್ಲದಲೆ ಸರ್ವಸತ್ವತತಿ ಲಯಮಪ್ಪ ಮಾಳ್ಕೆಯಂತೀರಾಜ್ಯದ ।
ಚೆಲುವು ಶೋಷಣೆಯಾಗದಿರದು ಲೋಕಂ ಬೆರ್ಚೆ ।
ಬಲ ಧರ್ಮಮೂಲಮದನರಿಯೆ ಶಾಖಾ ಪುಷ್ಪ ।
ಫಲಗಳೇಂ ಬದುಕುವವೆ ರಾಮ ಪೋದೆಡೆಗೆಲ್ಲ ಸೋಪುದೇ ಪರಮಸುಖವು ॥ (4)

ಧನಕನಕ ವಸ್ತುವಾಹನ ಕ್ಷೇತ್ರ ವಾರಾಮ ।
ಮನೆಗಳನ್ನುಳಿದೆಲ್ಲ ರಾಮ ನೊಡನೈದಲಾ ।
ವನಮೆ ಪತ್ತಣಮಹುದು ಕ್ರೂರಸತ್ವಗಳೆಲ್ಲ ಕುಡುಗೆ ಮದ್ಬಾಂಧವ್ಯಮಂ ॥
ಜನರಹಿತ ಪುರಿಯೊಳಸುದಿನ ಕೈಕೆ ತನ್ನಸುತ ।
ನನುಜನ್ಮ ಬಾಂಧವರ್ವೆರಸು ಸುಖದಿರಲೆನುತ ।
ಜನಜನಿತಮಾಬಾಲವೃದ್ಧರಾಡುವ ವಾರ್ತೆಯಂ ಕೇಳುತೈತಂದನು ॥ (5)

ಪಿತೃಸುರಮುನಿಯ ಬಾಗಿಲೆಡೆಯೊಳ್ಸುಮಂತ್ರನಂ ।
ಮತಿಮಂತರಗ್ರಭವನಂ ನೋಡುತಿಂತೆಂದ ।
ಕ್ಷಿತಿಪಗೆಚ್ಚರಿಪುದಾಂ ಬಂದ ವಾರ್ತೆಯನುಲ್ಲಾಸಿತ ನತಿ ತಾಪದಿಂದ ।
ಕತಿಪಯದ್ವಾರಗಳ ಕಳಿದು ನಿಸ್ತೋತ್ರಿಯ ಸಂ ।
ಗತ್ಸ್ಥಿತಟಾಕದ ತೆರದಿ ಭಸ್ಮಲೀನಾನಲನ ।
ಜೊತೆಯೆನಿಸಿ ನಿಷ್ಪ್ರಭೆಯೊಳೆಸೆವ ನೃಪತಿಯಕಂಡು ವಂದಿಸುತ ನುತ್ತಿಗೈವುತ ॥

ಭೂದಿವಿಜಸಂತತಿಗೆ ಬೇಡಿದುದ ನಿತ್ತು ಮಗು । (6)
ಳಾದರಿಸಿ ಮಿತ್ರರಂ ಮಿಸುನಿ ಭೂಷಾದಿಗಳ ।
ಮೋದಗೊಳುವಂತ್ಯಥೇಷ್ಟಂಗೊಟ್ಟು ಭೃತ್ಯಜನಕಮಿತ ಸಂತೋಷಗೊಳಿಸಿ ॥
ಮೇದಿನೀಸುತೆ ಸುಮಿತ್ರಾತ್ಮಜರ ನೊಡಗೊಂಡು ।
ಪಾದಂಗಳಂಕಾಣ್ಬ ಕೌತುಕದಿಂದಾ ದ್ವಾರ ।
ದಾದಿಯೊಳ್ನಿಂದಿರ್ದರಖಿಲೇಶ ಬಿನ್ನಪವ ನವಧರಿಸು ಮಮತೆಯಿಂದ ॥ (7)

ಮನುಜೇಶ ಸೂತವಾಣಿಯ ಕೇಳುತಿಂತೆಂದ ।
ತನಯ ಕೇಳಂತಃಪುರಾಂಗನೆಯರೆಲ್ಲರಂ ।
ವಿನಯದಿಂ ಕರೆತರುವುದಾಕ್ಷಣದೊಡಗೂಡಿ ನೋಳ್ಪೆರಘುವರನನೆನಲು ॥
ಜನಪ ನೇಮಿಸಿದಂತೆ ಶುದ್ಧಾಂತಕೈದಿಪತಿ ।
ಯನುಮತಿಯ ಬಿತ್ತರದಲರುಪುತಲವರೊಡಗೊಂಡು ।
ಯಿನನೆಡೆಗೆ ಬಂದು ವಿಜ್ಞಾಪಿಸಿದ ನೊಳಗವ ಚರಣಕಭಿನಮಿಸಿ ಜವದಿ ॥ (8)

ಬರಲರ್ಧ ಸಪ್ತಶತ ತರುಣಿಯರ್ಕೆಗಸಲೆಯು ।
ಪರಿವೇಷ್ಟಿಸೆನಂಗೈದು ಧರಣಿಪನ ಸನ್ನಿಧಿಗೆ ।
ಹರುಷದಿಂದರಸ ಸೂತನೊಳೆಂದ ರಾಮನಂ ಕರೆತರಲ್ಬಪ್ಪುದೆನುತ ॥
ಧೊರೆವೇಳ್ದ ಮಾಳ್ಕೆಯೊಳ್ ರಾಮಲಕ್ಷ್ಮಣರುಗಳ ।
ಕರೆತರಲ್ನಿಟ್ಟಿಸುತಲಿದಿರೆದ್ದು ಬಂದು ತ ।
ಮ್ಮುರು ಭುಜಾದಂಡಗಳಲಪ್ಪಿದಂ ತನಯನಂ ದಶರಥ ಮಹೀಪಾಲನು ॥ (9)

ತೆಗೆದಪ್ಪಿ ರಾಮನಂ ಬಹಳ ಶೋಕೋದ್ರೇಕ ।
ಮಿಗೆವೆರ್ಚೆ ಕೆಡೆದು ಮೂರ್ಛಿತನಾಗಿ ಬಿದ್ದಿರ್ದ ।
ಬಗೆಯ ಕಾಣುತ ಸ್ತ್ರೈಣಮತುಲಾರ್ತರಾವದಿಂದಳಲುತಿರಲನಿತರೊಳಗೆ ॥
ಖಗವಂಶಸಂಭೂತನನುಜ ಸಹಿತಂ ದುಃಖ ।
ಪೊಗೆಸೂಸೆ ಪಿಡಿದೆತ್ತಿ ಪರ್ಯಂಕದೊಳಗಿಟ್ಟು ।
ಬಗೆಬಗೆಯಲುಪಚರಿಸಲರೆಘಳಿಗೆಗೆಚ್ಚರುಂ ತಲೆದೋರಲವನೀಶಗೆ ॥ (10)

ಕೆಂಚಿದೆಚ್ಚರು ತೋರಲರಸಗಭಿನಮಿಸಿ ದುಃ ।
ಖಾಂಚಿತದ ವಾಣಿಯಿಂ ಬಿನ್ನಪಂ ಗೈದ ಭೂ ।
ಪಂಚ ಮುಖ ದಂಡಕಾವನಕಪ್ಪಣೆಯನಿತ್ತೊಡೆರುಗುವೆ ನಿರಾಲಸ್ಯದೆ ॥
ಚಂಚರೀಕಾಳಕಿಯು ಮೈಥಿಲಿಯು ಬರುತಿರಲು ।
ದಂಚಿತದ ಗಮನದಿಂ ಸೌಮಿತ್ರಿ ಬಪ್ಪೆನೆನೆ ।
ವಂಚಿಸದೆ ಪಲವು ವಿಧದಿಂದರುಪಲಾ ನುಡಿಯಕೇಳದೈತಪ್ಪರೊಡನೆ ॥ (11)

ಎಂದು ಬಿನ್ನಪಗೈದ ತನಯನ ಮನೋವೃತ್ತಿ।
ಯಂದಮಂ ಲಾಲಿಸುತ ಮಹೀಪಾಲ ನಿಂ।
ತೆಂದ ಕೈಕಾವಚನಮೆಂಬ ಗರನೋಂಕೆನಿಂದಾಂ ಪೇಳ್ದನುಡಿಯನುಳ್ಳದು॥
ಇಂದು ನೀ ಪ್ರದ್ವ್ಯಯೋಗದಿ ಪಟ್ಟಮನ್ನಾಂತು।
ದಂದುಗದಶೋಕಮಂ ಪರಿದುಹರುಷಂ ಗೊಳಪ್ಪ।
ದೆಂದರುಪೆ ನೃಪತಿಯಡಿಗಭಿನಮಿಸಿ ಕೈಮುಗಿದು ಮಗುಳ್ ವಿಜ್ಞಾಪಿಸಿದನು॥

ತಾತ ಬಹುಸಾಹಸ್ರವರ್ಷಂಗಳ್ಗಂ ಧರಾ। [(12)
ನೇತ್ರನೆಂದೆನಿಸಿರ್ದು ಸತ್ಯವಚನಕ್ಕೂನ।
ಜಾತಮಾಗದ ತೆರದಿ ಪರಿಪಾಲನಂಗೈದಿರ್ದೈಸೆ ತ್ರಿಜಗಂ ಮೆಚ್ಚಲು॥
ಪಿತಾತಕಕೊಡಂಬಟ್ಟು ಸಲುಬಲೇಂ ವತ್ಸರಂ।
ನೀತಮೆನಿಪವು ಚತುರ್ದಶಮೊಂದು ನಿಮಿಷಮೆನೆ।
ಕಾತರಮದೇ ಕಪ್ಪಣೆ ಗೊಡುವುದುಚಿತಮೆನಲರಸ ಶೋಕದೊಳೆಂದನು॥ (13)

ಬಲಮಾಯುಶ್ರೀಯನ್ನು ಪುನರಾಗಮಂಗಳಂ।
ಚೆಲುವ ಸತ್ಕೀರ್ತಿ ಜನಕೋಸುಗಂ ಗಮಿಸು ಬಲು।
ಬಲಿತಮಾಗಲಿ ಪಥಂ ನಿರ್ಭಯಾದಿ ಸಕಲೇಶ ಸಲಹಲನುದಿನ ಬಿಡದಲಿ॥
ಬಲಿದು ನೆಲೆಗೊಂಡು ಧರ್ಮದಿ ಚಿತ್ತ ಪಿಂತಿರುಗಿ।
ಚಲನೆಯಾನದು ಸತ್ಯರೂಪನೀನವರಿಂದ।
ನಿಲಿಸಲಳವಲ್ಲಮಿಂದಿನ ರಾತ್ರಿಯನ್ನು ಗೃಹದೊಳಗಿರ್ದು ಗಮಿಸಲೇಸು॥ (14)

ವೃತ್ತಸಾದಿನಿಯಗ್ನಿ ಕಲ್ಪನಾರ್ಯಪದೀನೆ।
ಬಿತ್ತರದ ಗೋತ್ರ ಪಾಂಸಿನಿ ಯಶ್ವಪತಿಸುತೆಯ।
ಮಿತ್ತಿನಂದವ ನುಡಿಗೆ ಮರುಳಾಗಿ ಬುದ್ಧಿಯಂ ಪಳದೆನ್ನ ನುಡಿಯನುಳ್ಳದು।
ಇತ್ತರದಲಿಹ ಭವನ್ಮಾತೃಕಾದೀನತೆಯ।
ಚಿತ್ತದೊಳ್ತಂದು ಮುಂದಿರ್ದೆಮ್ಮನುಳ್ಗುಹೆಂದು।
ತತ್ತರದೊಳೊರೆದ ತಂದೆಯ ನುಡಿಗೆ ರಘುವೀರ ಮಾರುತ್ತರಂಗೊಟ್ಟನು॥ (15)

ಸಗ್ಗಂ ಸರಾಷ್ಟ್ರಧನ ಧಾನ್ಯವಸ್ತುಗಳೆಲ್ಲ।
ವೆಗ್ಗಳದಿ ಭರತನಾಧೀನಗೈವುದು ಸುಖಂ।
ವಗ್ಗದೀ ಹಿತಜನಕಜಾತೆ ಯೀರಾಷ್ಟ್ರಮಂ ಬಯಸಲೇಚಿತ್ತಮಿಹುದು॥
ಅಗ್ಗಳದ ಸತ್ಯಮೊಂದನೆ ಕಾಂಕ್ಷಿಪುದಸತ್ಯ।
ನುಗ್ಗೊತ್ತಿ ಶೋಕಮಂ ಧೈರ್ಯಮಂ ಧರಿಸುವುದು।
ಬಗ್ಗುವುದೆ ನೀ (ನ) ಧಿಕ ದಾನಿ ಭೂಪರ ಮಕುಟಮಣಿಯೆ ದಯಗೈವುದೆನಗೆ॥

ಒಂದನುಂ ಬಯಸೆ ಭವದೀಯ ಚರಣಗಳಾಣೆ। [(16)
ಚೆಂದದಿಂ ಬನಕಪ್ಪಣೆಯನೀವುದಾದಿದೋಲ್।
ಬಂದಪುದು ಪದಿನಾಲ್ಕುವರುಷ ಮಾತಂ ಸಲಿಸಿ ತ್ವರಿತದಿಂ ಬಪ್ಪೆ ಮುದದಿ॥
ಎಂದಿಗಾದರುಭವದ್ವಚನ ವಂಧ್ಯತೆಯಪ್ಪ।
ದಂದುಗವ ಬಯಸುವೆನೆ ಭರತಗೀರಾಜ್ಯಸುಖ।
ದಿಂದೆಕೈಗೈದಿತ್ತು ಬನಕಪ್ಪಣೆಯ ನೀವುದೆನಗೆ ಚರಣಕೆ ಮಣಿವೆನು॥ (17)

ಗಮನವಾರ್ತಾಶ್ರವಣದಿಂದ ಭೂಮೀಶಗಂ ।
ಭ್ರಮೆಯಡಸೆ ಪಲುಬುತ್ತ ವ್ರಭಯಕರದಿಂದಪ್ಪ ।
ತಮಿತಶೋಕಾರ್ಣವನಿಮಗ್ನತೆಯುಳ್ಳಪಂಚಾವಸ್ಥೆಯಂ ಮರೆಯಲು ॥
ರಮಣನಾದಾದಿಯಂ ಕಾಣಿತಂತಕಿಪ್ಪರದ ।
ರಮಣೀಜನಂ ಪರಿಮ್ಲಾನ ಮುಖರೆನಿಸುತಂ ।
ಕಮಲಾಯತಾಕ್ಷಿ ಹಾಯೆಂದಳಲುವಾರ್ತರವಪರ್ಬಿತೆಣ್ದೆಸೆಯ ಬಿಡದೆ ॥ (18)
ಈಕದುರ್ದಶೆಯನುಂ ಪ್ರಕೃತಿಜನವಾರ್ತವಾ ।
ವೇಶವಂ ನಿಟ್ಟಿಸುತ ಶೋಕಪಂಕೇಜಾತ ।
ಕೋಶಕಣ್ಣೆಯಾಂತಿರಲ್ಕಾ ಸುಮಂತಂ ಕೋಪಶಿಖಿ ಪೆರ್ಚಿಪಲ್ಮೊರೆಯುತ ।
ಆಕವಾತ್ಮಜೆ ಕೈಕೆಯಂ ನೋಡಿ ಧಿಕ್ಕರಿಸು ।
ತಾಕುತರಮಾದ ರುಂತುದನುಡಿಗಳಿಂದಾ ಸು ।
ರೇಶವಚೋಪ್ರಪಿತ ಹೃದಯದಿಂ ದೂಷಿಸುವ್ರೊಡಿಚ್ಛೆಗೈದಂ ಕ್ರೋಧದಿ ॥ (19)
ಕುಲವಿನಾಶಿನಿ ಧವಾದಿನಿ ಪಾಪಿ ದುರ್ಮಾರ್ಗೆ ।
ಕಲಿತೆ ಸುರಪತಿಯಂತಜೇಯನಂ ಗಿರಿಯಂತೆ ।
ಚಲನೆಯಿಲ್ಲದನಂ ಮಹೋದಧಿಯೊಲಕ್ಷೋಭ್ಯರಾಜನ್ಯಮಕುಟಮಣಿಯಂ ॥
ಪಲವುವಿಧ ಕರ್ಮದಿಂ ಸಂತಾಪಗೊಳಿಸುತಿಹೆ ।
ನೆಲದೊಳಂ ನಾರಿಯರ ದೇವತೆಯು ಪತಿಯಲ್ತೆ ।
ಸುಲಭಸಂಭವೆಯಧಿಪನನ್ನುಳಿದು ಸಾಮ್ರಾಜ್ಯ ಕಿಚ್ಛೈಪೆ ಧೃಷ್ಟೆ ಮದದಿ ॥
ಧರಣಿಪನ ಹೋಗಾಡಿ ಧೊರೆತನವ ಪಾಳ್ವೆನೆಂ । (20)
ಬುರುತರ ಪ್ರೇಮಮಂ ತಾಳ್ದರ್ಪ ದುರ್ಮೇಧೆ ।
ಯಿರುವರೆ ಧರಾಮರರ್ಪರಿಜನರ್ಪರಿವಾರವಿಾನೆಲದಿ ನಿನ್ನೆಡೆಯೊಳು ॥
ಬಿಸಿನಗರದೊಳ್ಳವರ ಸಹಿತ ಸುಖಪೇನುಂಬೆ ।
ಮರುಳೆ ದುರ್ಯಶಭವನ್ಮಾತೆಯಿಂದಾಧಿಕ್ಯ ।
ತರವ ಘಳಸದೆ ದೀಪಕಲಿತಾಭಿಲಾಷೆಯಿಂ ಮಡಿವ ಶಲಭಪ್ರಾಯದಿ ॥ (21)
ಸಕಲ ಭೂತರುತಂಗಳಂ ತಿಳಿಯವೇಳ್ಕೆನುತ ।
ಲಕಳಂಕ ದೇವತೋಪಾಸನಂಗೆಯ್ಯೆ ನಿಜ ।
ಭಕುತಿಗಂ ಮೆಚ್ಚಿ ತದ್ದೇವತೆಯು ವರವಿತ್ತೊಡಂದಿನಿಂದಖಿಲ ನುಡಿಯ ॥
ಪ್ರಕಟವಾಗದು ಹೋದುದೈಸೆ ನಿಮ್ಮಯ್ಯನತಿ ।
ಸುಕರದಿಂ ಮಂಚದೊಳ್ಮಲಗಿರೆ ಪಿಪೀಲಿಕಾ ।
ಪ್ರಕರಪೋಗುತ್ತದರೊಳೊಂದು ತನ್ನರಸಿಯೊಳ್ ಸಲ್ಲಾಪ ಕ್ರೀಡೆಗೆಳಸೆ ॥ (22)
ಚತುರತೆಯ ಮಾತುಗಳ ಕೇಳುತರಸಂ ಹಾಸ್ಯ ।
ಪತಿತನಾಗಲ್ಕಂಡಿದೇನೆಂದು ಬೆಸಗೊಳಲ್ ।
ಸತಿಯೊಡನೆ ನೃಪನೆಂದ ಪೇಳ್ವಮಾತಲ್ಲೆನಲ್ಕಿಂತೆಂದಳರಸನಿಂಗೆ ॥
ಅತಿಶಯ ಮಿದೇನೆನಗೆ ಪೇಳ ದಿರಲಸುಗಳಪೆ ।
ಕ್ಷಿತಿಯೊಳರೆನೆಂದಧಿಕ ಕ್ಲೇಶಗೊಳಸುತ ಬರ ।
ಲ್ಕತಿವಂತ ರಾಣಿಯೊಡನೆಂದ ಸಂತಸಗೊಳುವ್ರೊಲತಿ ವಿನಯದಾಪ್ತದಿಂದ ॥ (23)

ಬೆರರಿಗಿದ ತಿಳುಹದಿರು ಪೇಳ್ದಿಯಾದರೆ ಮೂರ್ತಿ ।
ಪೊರೆಯುಪ್ಪುದೆನುತೆಮ್ಮ ಗುರುನಿರೂಪಣೆಗೈದ ।
ಪರಿಯಿಂದ ನಿನ್ನೊಡನೆ ಬಿತ್ತರಿಸಕೂಡದೆನಲರಸನೊಡನಿಂತೆಂದಳು ॥
ಶರೀರಮಿರಲಳಯುಲೀ ಹಸನದಿರವಂತಿಳಯು ।
ಲೊರೆಯುವೇಳ್ಕನೆ ನೃಪತಿಜರೆದು ಧಿಕ್ಕರಿಸುತಂ ।
ಹರುಷದಿಂ ಧನದನೆಂಬಂತೆ ಸುಖಸುರ್ವನಿದುಲೋಕಸಿದ್ಧಮಲ್ತೆ ॥ (24)
ಚಿತ್ರವಳ ನಡತೆಯುಂ ವಿರದನುಸಂಸಿ ಭೂ ।
ಪೋತ್ತಮನ ದುಃಖಸಾಗರವುಗ್ನಗೈದು ಮೇ ।
ಣ್ಪೊತ್ತೈದುರ್ಯಶವ ಸಂತತಿಯು ಕಡಿಸಲ್ಬಗೆವೆ ಮೂಢೆ ನಿನ್ನಂನೋಳ್ಪರೆ ॥
ಬಿತ್ತರದ ಪಾಪಮಾರ್ಗವನುಳದು ಸಾಧ್ವಿಯುರ ।
ವೃತ್ತಮಂ ಪಿಡಿದುಭಯುಸುಖ ಸಂಪದದ ಹರುಷ ।
ವೊತ್ತಮಂ ಗಳಸು ಭರ್ತಾರನನುಮತಿಯುಳದು ಬಾಳ್ವುದನುಚಿತ ಲೋಕದಿ ॥ (25)
ಸಕಲ ಸದ್ಗುಣ ಖನಿ ಶ್ರೀರಾಮನರಸನೆನಿಸೆ ।
ಸುಕರಮಪ್ಪುದು ಲೋಕ ಸಾಮ್ರಾಜ್ಯ ವೈಭವ ।
ಪ್ರಕರಮಂ ಭರತನನುಭವ ಗೆಯ್ಯಲುಭಯುರಂ ನೋಡಿ ಪೋಷಣೆಗೆ ಯ್ಯುತ ॥
ಅಕಳಂಕ ಜಸವ ಸಂಪಾದಿಪುದು ಸ್ಯಂದನದ ।
ನಿಕಟಕ್ಕೆ ಪೂರ್ವಾನುಮತಿಯುಂದ ನೃಪನೈದ ।
ಲಕೆಯುನಿಸಲನುತಪಿತ ದೈನ್ಯದಿಂದ ಸುಮಂತ ತಿಳುಪಿದಂ ಪಲವುವಿಧದಿ ॥ (26)
ಈ ರಾಜಧಾನಿಗಧಿಕಾರಿ ರಘುವಲ್ಲಭಂ ।
ಶೂರಾಗ್ರಗಣ್ಯ ನಾತಿನನುಳದು ಭರತನಿಂ ।
ದೀರಾಜ್ಯ ಸುಖಮಿಹುದೆ ತಿಳದೆನ್ನವಚನಮಂ ಮನ್ನಿಸುವುದನುತ ನರುದಿ ॥
ಆ ರಾಜ ಸೂತ ಬಹುವಿಧದಿಂದ ಪೇಳ್ದೊಡಂ ।
ತೋರಾಯುಗೆಯ್ಯವನುಮಾನ ಗೊಳದಲೆಮುಗುಳ್ ।
ಕ್ರೂರಾಪ್ತ ದುರ್ವಾಣಿಯುಸ್ನುಡಿಯುಲನುಗೈದಳೀಂ ಪೇಳ್ವ ಕ್ರೌರ್ಯದಿರವ ॥ (27)
ಅನಿತ್ರರೊಳು ಸೂತ್ರವೆಂಡತಿಯುರ ಸಂವಾದಮಂ ।
ಜನನಾಥ ಕೇಳುತತಿಶೋಕದಿಂದಿಂತೆಂದ ।
ತನುಯುಗೆ ಚತುರಂಗ ಬಲಮಂ ನೆರಪು ಶರಜಾಲ ನಿಖಿಲಾಯುಧಂಗಳನ್ನು ॥
ಘನವಣಿಗ್ಜನವ ಕರಿತುರಗ ಶಕಟಾದಿಗಳ್ ।
ವನಮಾರ್ಗ ಕೌಶಲವನನುಗೆಯ್ಯುವದತಿವೇಗ ।
ವನಜಾಕ್ಷ ರಾಮ ನೊಡನೈದುವರ ಧನಕನಕ ವಸ್ತುಗಳನೆಲ್ಲ ನೆರಸು ॥ (28)
ವಂದಿಮಾಗಧರೂಪ ಜೀವನೆಯುರಂ ವಿಪ್ರ ।
ವೃಂದಾದಿ ಕರಮುತ್ತಂಗಜಹಯೋತ್ಕರಗಳಂ ।
ಚೆಂದದಿಂ ಜೊತೆಗೈದು ಕಳುಪುವುದು ರಘುವೀರನೊಡನೆ ಸತ್ವರದಿಂದಲಿ ॥
ನಂದನದಿಸುಖಮೊಪ್ಪಮಾಗಿರಲಿ ಭರತನಲ ।
ವಿಂದ ಭೂಪಾಲನಂ ಗೆಯ್ಯಲೆನುತ ಲಜ ।
ನಂದನ ಸುಮಂತನೊಳ್ಪೇಳ್ದುದಂ ಕೇಳುತ್ತ ಕೈಕೆ ಕ್ರೋಧದೊಳಿಂದಳು ॥ (29)

ಪುರಿಯೊಳುಳ್ಳಖಿಳವಸ್ತುಗಳನೆಲ್ಲವ ಸುತನ ।
ಕರೆಕೆತ್ತು ಸರ್ವಜನರಂ ಕೂಡೆ ಕಳುಪಿಮಿಗೆ ।
ಭರತನಂ ದೊರೆಗೆಯ್ಯಲೇಂ ಗೈವ ಬಂನಗರದೊಳಗಿರ್ದು ಸುಖವ ಪಡೆವ ॥
ಪರಮ ಕರುಣದೊಳತ್ತ ವರ ಸಫಲಮಾಯಿತೆಂ ।
ಮರು ತರಕ್ರೋಧದಿಂ ಪೇಳಲಮ್ಮದನುಡಿಯ ।
ಸರಸ ಗೆಚ್ಚರಿಸಲತ್ರಿಸಂಕಟದಿ ನರನಾಥ ಪಲ್ಮೊರೆವುತಿಂತೆಂದನು ॥ (30)

ಕ್ರೂರ ಘಾತಕಕೆಳಸಿ ಕುಜನ ವೃತ್ತಿಯಗಳಸಿ
ದಾರುಣಕೃತಿದಾಳ್ದು ಧರ್ಮಮಾರ್ಗವಪ್ಪೊಳ್ದು ।
ನಾರಿನಿರ್ಲಜ್ಜೆಯಂ ಸಾಧ್ವಿಯರ ಪಜ್ಜೆಯಂ ಮಾಜಲನುಗೈದೆ ಬರಿದೆ ॥
ಆರಾದೊಡಂ ನಿನ್ನನೆಣಿಸುವರೆ ದುರ್ಮೇಧೆ ।
ದೂರೀಕರಿಸಿ ಸತ್ವಶೀಲಮಂ ದಾನವಿಯ ।
ರೋರಂತೆ ಕೆಳೆಗೊಂಡೆಯೆನುತೊರೆದ ಪತ್ನಿಯನುಂ ಧಿಕ್ಕರಿಸುತಿಂತೆಂದಳು ॥ (31)

ಭವದೀಯವಂಶದಧಿನಾಥ ಸಗರಂ ಪೂರ್ವ ।
ದವರೊಳಗ್ಗಳ ಜ್ಯೇಷ್ಠಪುತ್ರನ ಸಮಂಜಸನ ।
ತವಕದಿಂದಡವಿಗಟ್ಟಿದ ಪರಿಯ ಕೇಳ್ದರಿಯದಾದೆ ಮರುಳಾದೆ ಬರಿದೆ ॥
ಕುವಲಯ ದೊಳಪಕೀರ್ತಿಯಂತೆ ಯೆನುತೊರೆದುದಂ ।
ಭುವಿಯರಸ ಕೇಳ ಕ್ಲೇಶದೊಳರಲ್ ನೆಗೆದ ಸು ।
ಪ್ರವರರೆಲ್ಲರ್ನೀಣ್ಬುಲವರೊಳ್ಮಹಾಮಾತ್ಯ ಸಿದ್ಧಾರ್ಥನುಡಿವ ಜವದಿ ॥ (32)

ಅಸಮಂಜದುರ್ಮೇಧೆಯಿಂದ ಲೋಕರ ಶಿಶುಗ ।
ಳಸುಗಳೆಯುತಿರೆ ನೋಡಿ ಸರ್ವ ಜನರೆಲ್ಲರುಂ ।
ವಸುಮತೀಪತಿಗೆರಗಿ ವಿಜ್ಞಾಪನಂ ಗೈದರೀ ನಗರವಾಸವೆಮಗೆ ॥
ಪಸನಿಲ್ಲದಪ್ಪಣೆಯ ನಿತ್ತೊಡೈದುವೆವೆನಲ್ ।
ರಸೆಯರಸನೆಂದನೇಂ ಭಯದಿಂದಲೀ ನಗರ ।
ವಸತಿಯನ್ನುಳಿದಪಿರೆನಲ್ಕಾಗಲಖಿಲಜನ ಬಿನ್ನಪಂಗೈದರೊಲಿದು ॥ (33)

ತರಳರಂ ಪಿಡಿಪಿಡಿದು ಸರಯೂನದೀಜಲದೊ ।
ಳಾರುಳಸುತ ಕ್ರೀಡಿಪ ಭವತ್ಕುವರನೀ ಭಯಂ ।
ದೊರೆತೆತೆಮಗದರಿಂದ ಪತ್ತಣವ ತ್ಯಜಿಸ ಬೇಕಾಯಿತೆನಲರಸ ಮುಳಿದು ॥
ವರಸುತನ ನಟ್ಟಡವಿಗಟ್ಟಿ ಲೋಕವನೆಲ್ಲ ।
ಪೊರೆದನಾಸಗರ ಧರ್ಮ ಸ್ವರೂಪಂ ಮೂಢೆ ।
ನಿರಪರಾಧಿಯ ರಘೂತ್ತಮನ ಕಳುಪಿಂದೇನತಿಳದೆಂಬೆ ದುರ್ಮೇಧೆಯಿಂ ॥ (34)

ಇನಿತಾದೊಡಂ ರಾಮನಲ್ಲಿ ದುರ್ಗುಣಲೇಶ ।
ಮಿನಿಗಿದುದ ನೋಡದೀಪರಿಯ ದುರ್ವೃತ್ತಿಗಳ ।
ನನುಸರಿಸಿ ರಾಮನಂ ಬನಕೆ ಕಳುವೆಂಬುದೇಂ ದುರ್ಬುದ್ಧಿ ಯಾತ್ರನೊಡನೆ ॥
ಜನಪಸಹಿತೆಲ್ಲರುಂ ಪೋಪೆವೀನಗರಿ ನಿ ।
ರ್ಜನವಾಗಲದರಾಧಿಪತ್ಯಮಂ ಗೈದು ನಿಜ ।
ತನಯ ಸಹ ಸುಖದಲಿಹುದೆನುತಮಾತ್ಯಂ ಜರೆದನಶ್ವಪತಿಯಾತ್ಮಜೆಯನು ॥ (35)

ಈ ಪರಿಯೊಳಿಕ್ಕರಿಸುವಾವಮಹಾಮಾತ್ಯ ಸಂ ।
ತಾಪವಂ ಕಾಣುತ್ತ ರಘುವೀರ ಮತ್ತಾವು ।
ಹೀಪನೊಡನಿಂತೆಂದ ದೇವಜನ್ನಪ ಮೌನಿವೇಷದಿಂ ವಿಪಿನದೆಡೆಗೆ ॥
ಪೋಪೆನಗೆ ಚತುರಂಗಬಲ ಧನಾದ್ಯುಪಚಾರ ।
ಲೇಪದಿಂದೇಂಪ್ರಯೋಜನ ಚೀರವಸನಗಳ ।
ನೋಪಕರಣಂಗಳಂ ದಯೆಗೆಯ್ಯಲೆರಗುವೆನು ಭವದೀಯ ಶಾಸನದೊಳು ॥ (36)

ಕರಿಯು ವಿಕ್ರಯಿಗೈದು ಮಗುಳಂಕುಶದಿ ವಾದ ।
ಪರಿಕಾಸವೆನಿತು ಗತಜಲಸೇತು ಬಂಧನದ ।
ಕರಣವನುಚಿತ ವಚನ ಸತ್ಯಮಪ್ಪಂದದಿಂ ದಯೆಯಿಂದ ಸಾಮಗ್ರಿಯಂ ॥
ತ್ವರಿತದಿ ಖನಿತ್ರಪಿಟಕಾದ್ಯಖಿಲವಂ ತರಿಸಿ ।
ಕರುಣಿಸುವುದೆನಗೆ ಪದಿನಾಲ್ಕು ವರುಷಂಗಳಂ ।
ತರಿಸಿ ಚರಣಗಳೆಡೆಗೆ ಬಪ್ಪೆನೆನಲಶ್ವಪತಿಯಣುಗಿ ನಗುತಿಂತೆಂದಳು ॥ (37)

ಮಗನೆ ಸತ್ಯವ್ರತಾಗ್ರಣಿ ಭಾಷೆಗೊಣೆಯಂ ।
ಸೊಗಯಿಪ್ಪುದೆ ನೀನೆ ಕೃತಿಯೆನುತ ನಯನುಡಿಯಿಂದ ।
ಬಗೆಬಗೆಯ ಮುನಿಜನೋಚಿತ ವಸನಗಳ ನೃಪನಮುಂಗಡೆಯಲೀಯೆ ಮುದದಿ ॥
ತೆಗೆದು ಪ್ರಾಚೀನಾಂಬರಗಳಂ ಪ್ರತಿಲೋಕ ।
ವಿಗೆ ಮೆಚ್ಚುವಾಭಾರನಂಗಳೆ ನಲಂಕರಿಸ ।
ಲಗಣಿತಗುಣಾಢ್ಯ ಸೌಮಿತ್ರಿಯುಂ ತಾನುಟ್ಟ ಪಾರಿಕಾಂಕ್ಷಿತ ವಸ್ತ್ರವಂ ॥ (38)

ರಾಮಲಕ್ಷ್ಮಣರುಟ್ಟ ಮುನಿವಸ್ತ್ರಗಳನೋಡಿ ।
ಪ್ರೇಮದಿಂದಿಟ್ಟಿಸುತಲಾ ಕೇಕಯಾತ್ಮಭವೆ ।
ತಾಮರಸನಯನೆ ಜಾನಕಿಯ ಕರತಳಕೀಯಲಾಮೌನಿವಸ್ತ್ರಗಳನು ॥
ತಾಮಗೀಮುಖದರ್ಶನದಿ ವಿಕೃತಿಯಾಂತಿಸಿವ ।
ನೋಮನಂ ಕೆಳೆಗೊಡಲ್ಕವನ ಬಿರುಗಾಳಿಯಿಂ ।
ಭ್ರಾಮಕಂಗೊಳುವ ಕದಳಿಯತೆರದಿ ಕಂಪಿಸುತ ಧರಣೀಸುತೆಯಿಂತೆಂದಳು ॥ (39)

ಎಂತುಡುವರೀ ವಸ್ತ್ರಗಳನು ಮುನಿಪತ್ನಿಯರ ।
ದೆಂತೆನಗೆ ತಿಳಿಯದೆಂದಶ್ರು ಪೂರ್ಣಾನನೆಯು ।
ಚಿಂತಿಸುತ್ತಿರೆ ನೋಡಿ ರಾಘವಂ ಕರದಿಂದ ಪಿಡಿದು ಚೀರವನು ಮುದದಿ ।
ಮುಂತುಟ್ಟ ಕೌಶೇಯಕಂ ಮೇಲೆವೇಷ್ಟಿಸ ।
ಲ್ಕಾಂತನ ಮುಖವನೋಡಿ ನಾಣ್ಚಿ ತಲೆಗುತ್ತಿರ ।
ಲ್ಕಂತಃ ಪುರಾಂಗನೆಯರಾರ್ತಸ್ವರಂ ಪರ್ಬಿತಕ್ಷ್ಮಿಸೆಯ ಭೀಕರವೆನೆ ॥ (40)

ಅಂತಃಪುರಾಂಗನೆಯರಾರ್ತಸ್ವರದಲಳುತ ।
ಲಿಂತೆಂದರಾ ರಘುಜನೊಡನೆ ಪಿತನಾಜ್ಞೆಯಂ ।
ನೀಂತಳೆದು ಬನಕೆರಗಲಿಚ್ಛೈಸೆ ಸೌಮಿತ್ರಿಯೊಡನೆ ಬಹುರಾಗದಿಂದೆ ॥
ಕಾಂತೆಕೋಮಲೆ ಸುಕುಮಾರಪದೆಯುಚಿವಿಯಲಿ ।
ತಾಂ ತೆರಳಲನುಚಿತಂ ನಗರದೊಳ್ಬಿಟ್ಟಿವ್ಕೆ ।
ಸಂತೋಷಗೊಳಿಸ ವೇಳ್ಕನುತೆಲ್ಲರುಂ ಪೇಳೆ ರಾಮ ಮಗುಳಿಂತೆಂದನು ॥ (41)

ತಾತನಾಜ್ಞೆಯೊಳೆನಗೆ ವಿಪಿನ ರಾಜ್ಯದ ಸಿರಿಯು ।
ಮಾತೆಯು ನಿರೂಪಿಸಲ್ಕಾನೊಡಂಬಟ್ಟೊಡೀ ।
ಸೀತೆ ಪಾತಿವ್ರತ್ಯ ಮೆಣಿಸಿ ಬಂದಪಳೆನಿತ ವೇಳ್ದೊಡನಿನಾರ್ಯ ಮಸೆಗೆ ॥
ಪ್ರೀತಿಯಿಂಸಲಿಸವೇಳ್ಕನುತ ಚೀರಾಂಬರವ ।
ಶ್ರೀತರುಣಿ ಗುಡಿಸಲನುಗೆಯ್ಯೆ ಮೈತ್ರಾವರುಣಿ ।
ತಾಂ ತಳುವದಲೆ ಕೋಪದಿಂದ ಪರಿಹರಗೈದು ಕೈಕೆಯೊಡನಿಂತೆಂದನು ॥ (42)
ಕುಲಗೆಡುಕಿ ದುರ್ಮೇಧೆ ಪಾಪಿ ಕೇಕಯ ತನುಜೆ ।
ಒಲಿಸಿ ವಂಚಿಸಿ ಮಹಾರಾಜನಂ ಕಾರ್ಪಣ್ಯ ।
ಕಲಿತನೆಂದೆನಿಸಿ ದುರ್ವೃತ್ತಿಯಿಂ ಜನಕಜೆಯ ಬನಕೆ ಗಮಿಸೆಂಬೆ ಕ್ರೂರೆ ॥
ಲಲನೆಸಹ ಶ್ರೀರಾಮ ನಾವೆಡೆಯೊಳಿರ್ಪನಾ ।
ಪೊಲಬಿಗಖಿಲ ಪ್ರಜೆಯು ಪರಿವಾರಸಹಿತೆಲ್ಲ ।
ರಲಘುಬಲ ಭರತಶತ್ರುಘ್ನರೊಡನೈದಿ ಪೆವು ಧರ್ಮಪಂಥಾನವಿಡಿದು ॥ (43)
ಜನರಹಿತ ಪಾದಪ . . . . . ರಕವಾಗಿಹ ನಗರ ।
ಹನು ಪಾಲನಂಗೈವುತಿರು ಮೂಢೆ ಶ್ರೀರಾಮ ।
ಬನದಲಿರಲದೆ ರಾಜಧಾನಿಯೆನಿಸುವುದಾತನುಳಿಯಲಿದು ಶೂನ್ಯವಹುದು ॥
ಮನುಜಮರ್ಹಾಮಾತ್ಯ ಮೃಗಪಕ್ಷಿ ಮುಂತಾದ ।
ವಿನಿತಲ್ಲವಾ ಮಹಾಮಹಿಮನೊಡನೈದುವು ।
ನಿನಗೆ ಗೋಚರವಹುದು ಭವದೀಯ ಮುಖದರ್ಶನವಮಾಳ್ಪರಾರು ನೆಲದಿ ॥ (44)
ಚೀರವಸನಂಗಳೆಂತೆಗೆಸಿ ದಿವ್ಯಾಭರಣ ।
ತೋರಹಾರಂಗಳಂ ಸೊಸೆಗಿತ್ತು ಕಳುಪೆಂಮ ।
ಧೀರಾಗ್ರಗಣ್ಯಂ ವಸಿಷ್ಠ ಕೇಕಯಸುತೆಯ ಧಿಕ್ಕರಿಸಿ ಮಗುಳೆಂದನು ॥
ವೀರ ರಾಘವ ನೋರ್ವನೇ ಬನದಲಿಪ್ಪಂತೆ ।
ಕ್ರೂರೆ ನೀನೆಸಗಿದೆ ಮಹಾರಾಜ ನಂದನೆಯು ।
ಚಾರುವಸ್ತ್ರಾಭರಣದಿಂದಲಂಕೃತಿವೆತ್ತು ಸೌಖ್ಯದಿಂದಿರಲಿದಿರೊಳು ॥ (45)
ಯಾನರತ್ನಾಭರಣ ನಿಖಿಲವಸನಾದಿಗಳ ।
ನೂನಮಿಲ್ಲದಲಿತ್ತು ಸತ್ಕರಿಸಿ ಕಳುಪಿದೊಡೆ ।
ಮಾನಿನೀಮಣಿ ವಿಲಾಸದಿ ರಮಣನಂಕದೊಳ್ಸಂಚರಿಸಿ ವಿಭವದಿಂದ ॥
ಈನಗರಮುಳದ ಕ್ಲೇಶ ಸಂಭವಿಸ । . . . . . . .
ದಾನಂದದಿಂ ರಾಮಪುರದರಸನಿರಲೆಂದು ।
ಜ್ಞಾನನಿಧಿಯಶ್ವಪತಿಯಣುಗಿಗುಸುರಲ್ನುಡಿಯದಿರ್ದಳತಿ ಮಾನವಿಡಿದು ॥ (46)

(ಸಂಧಿ 12, ಪದ 553)

## ಹದಿಮೂರನೆಯ ಸಂಧಿ

ಸೂಚನೆ ॥ ಅಜತನೂಜಾತನಪ್ಪಣೆ ವಿಡಿದು ಮಾತೆಯರ ।
ಭಜನೆಗೈದತಿ ವೇಗದಿಂದ ಮಾತ್ಯಪ್ರಭೃತಿ ।
ಸ್ವಜನರಂ ಬೀಳ್ಕೊಂಡು ಸರಯೂ ಮಹಾನದಿಯ ದಾಂಟಿದಂ ರಘುವೀರನು ॥

ಧರಣೀಧರಾತ್ಮಭವೆ ಕೇಳ್ ರಾಘವಂ ಮುದದಿ ।
ಧರಿಸಿ ಮುನಿವೇಷಮಂ ತಾತನೊಡನಿಂತೆಂದ ।
ಚರಣ ಒಲದಿಂದ ವನವಾಸವಂ ಕಳೆದಾನು ಬಪ್ಪೆಸಾಕೇತನಪ್ಪೆಸು ॥
ಕರುಣಿ ಮಸ್ಮಾತೆ ದೈನ್ಯನಂದಿಸೋದಿತ ದೈನ್ಯ ।
ವೆರೆದು ಸಂಕಟಗೊಳ್ಳದಂತೆ ಕೃಪೆಗೈದು ಸುಖ ।
ದಿರುಗೆಯಂ ಪಾಲಿಸಲ್ವೇಳ್ಕು ಸಾಧ್ವೀಮಣಿ ಸುಸೆಂದು ವಿಜ್ಞಾಪಿಸಿದನು ॥ (1)
ರಾಮನಾಡಿದ ನುಡಿಯು ಕೇಳ ನಿಜಜೀವನ ।
ಪ್ರೇಮಮಂ ಪಳವರಸ ಮೈಮರೆದು ಮೂರ್ಛೆಯಿಂ ।
ತಾಮಸಿಯೊಳಗೆನಿಮಿಷಮಿರ್ದು ಮಗುಳೆಚ್ಚತ್ತು ಶ್ರೀರಾಮರಾಯನುಗ್ತ ॥
ಪಾಮರಿ ದುರಾಧ್ಯೆ ಕೈಕಾವೆಗ ನಾದ ।
ಕಾಮಿಗರ್ಯವು ತನಯನಲ್ಗಳಂ ಬಾಧೆಯುಹ ।
ನೇನುಮಿಲ್ಲ ಮೆನುತ್ತ ಬಹುವಿಧದಿ ಪಲುಬಿದಂ ದಶರಥಮಹೀನಾಥನು ॥ (2)
ಪೂರುವದಲೆನಿತು ಜೀವರ ಬಾಧೆಗೊಳಿಸಿರ್ದ ।
ಘೋರಘಾತಕ ಮಾಡಿ ಕೈಕೆಮುಂದೆಸೆಯಲಾ ।
ದಾರ ಪೈಶ್ವಾನರೋತ್ತಮೆಯಾಗಿ ಮಗುಳೆ ಕಮಕೇಕರರ ಬಯಸಲೇಕೆ ॥
ನಾರ ಸೀರೆಗಳುಟ್ಟು ಸುಕುಮಾರರೀಪರಿಯು ।
ತೋರುವ್ರದ ನೋಳ್ಪುದಾಯ್ತೆನುತಳಲಿ ಬಳಲಿ ಮುಂ ।
ದೋರದರೆನಿಮಿಷ ಮೈಮರೆದಿರ್ದು ಪಂಕ್ತಿರಥ ಸೂತನೊಡನಿಂತೆಂದನು ॥ (3)
ಪತ್ತಿಹಯಗಜರಥಗಳಂ ಬರಿಸಿ ಬೇಗ ಸಂ ।
ಪತ್ತಿನಿಂ ಮಣಿಖಚಿತಮಾದ ತೇರಿಂಪಂರ ।
ಘೂತ್ತಮನ ಜನಪದಾಲೋಕನಂ ಗೈಸೆಂದು ಪೇಳಲಾ ಮಂತ್ರೀಶನು ॥
ಮುತ್ತು ಮಾಣಿಕರಚಿತ ಪೊಂದೇರನಳವಡಿಸಿ ।
ಮತ್ತೇಭತುರಗಾದಿಗಳನೆಲ್ಲ ಜೊತೆಗೊಳಿಸಿ ।
ಬಿತ್ತರಿಸಿದಂ ಭೂಧವ್ರೋತ್ತಮನೊಳತಿ ಭಕ್ತಿಯಿಂದಮಾತ್ಯರ ಮೌಳಿಯು ॥ (4)
ಸೂತವಾಣಿಯುಕೇಳ ದಶರಥ ಮಹೀನಾಥ ।
ನಾತ ನೊಡನಿಂತೆಂದ ವಸ್ತ್ರವಮುಕ್ತಾಫಲ ।
ವ್ರಾತ ಮಣಿ ಕನಕಭೂಷಣಗಳಂ ತರಿಸಿ ಜನಕಾತ್ಮಭವೆಗೀವುದೆನುತ ॥
ಶೀತಾಂಶುನಿಭ ಬಜ್ಜರಾಭರಣ ರನ್ನಗಳ ।
ನೀತಾಗ್ನೆಗೈದಂತೆ ತಂದೀಯೆ ಗೋತ್ರಸಂ ।
ಭೂತೆ ಸಂತಸದಿಂದಲಂಕಾರ ಗೈದೆಸಯೆ ನೋಡಿ ಕೌಸಲ್ಯೆ ಜವದಿ ॥ (5)
ತೆಗೆದಪ್ಪಿ ಮುದ್ದಾಡಿ ಮಮತೆಯಿಂ ಚುಂಬಿಸುತ ।
ಮಿಗೆಗದ್ಗದಂ ಚಿತ್ತನುಡಿಗಳಂ ವಿಂತೆಂದ ।
ಳಗಣಿತಗುಣೋತ್ಕರ್ಷೆ ಕುಲಜೆ ಧರಣೀತನುಜೆ ಲೋಕದೊಳ್ ಸ್ತ್ರೀಚಿತ್ತವು ॥
ಸೊಗೆಯಿಪ ಬಿಸಿಲ್ಮೊರೆಯುಸೆಳೆಮಿಂಚಿನತಿಶಯವ ।
ಮಿಗೆಪೊಲ್ದುಕ್ಷಣ ಪ್ರತಿಕ್ಷಣ ನಿಲ್ಲದನುಪದಂ ।
ಬಗೆಬಗೆಯ ಚೇಷ್ಟಾನುಕಾರದಿಂ ಕಪಿಯಂತೆ ಚಲಿಸುತಿಹುದಿದು ನೈಜವು ॥ (6)

ಪುಸಿನುಸುಳ್ಕಾರಣದ್ವೇಷಮತಿಸಾಹಸಂ ।
ಪೊಸಧೈರ್ಯಮಶುಚಿ ನಿಷ್ಕರುಣ ಮೌರ್ಖ್ಯಾತಿಶಯಂ ।
ರಸೆಯೊಳ್ಗಂ ಲಲನೆಯರ ಸಹಜಾತಮೆನಿಸಲ್ಕದತಿ ವಂಚನಾನಿಪುಣತೆ ॥
ಪೊಸತಾಣ ವಾವೆನಲು ಒಲುಮೆಸಲೆ . . . . ಸತ್ಯಮೆ ! ?
ಣ್ಣೈಸಗೊಟ್ಟ ನೆನೆಹೆಂಬುದದು ಮುಗಿಲ ನೆಳಲೆಂಬು ।
ದಸಿತಾಂಗಿಯರ ಸಂಪ್ರದಾಯ ಮೂಲೋಕದೊಳಗಿದು ಸಿದ್ಧ ಜನಕಜಾತೆ ॥ (7)

ಆವರಣ್ಣೆಯಿಲ್ಲ ನಯಸಲ್ಲ ಸತ್ಯಾಚಾರ ।
ಹಾದಿಮುನ್ನಿಲ್ಲದಯ ಪೊಲ್ಲಕೃಪೆವೆಸರೆಂಬ ।
ಸೋದೆಮೆನಿಸಿಲ್ಲವನೃತೋದರೀ ಸಂತತಿಯೊಳಮ ಯಥಾರ್ಥಂಜಗದೊಳು ॥
ಬೋಧಿಸುವರ್ಸವಿನುತಿಯಲಪ್ಲಯೊಳ್ಮಧಾಹೃದು ।
ಸಾಧಿಪರು ಗಳಸಿದರ್ಥವನು ಬೇಡಿಮಬೀಯ ।
ನಾದೊಡವನಾ ದೊಡಾಸ್ಯದರ್ಶನಗೆಯ್ಯದಟ್ಟುವರು ಪೇರಡಿವಿಗೆ ॥ (8)

ಘನಧಾನ್ಯಪ್ರಿಯವಾಣಿ ಯುಳ್ಳಕುಲದಿಪುರುಷ ।
ನನುವರ್ತನಂ ಗೈದು ಮೋಹಿಸುತ ಭೇದವಂ ।
ಜನವರಿವ್ರೊಲೆಸಗುವರು ನಿರ್ಧನಿಕನಾದೊಡಂ ಕ್ರೂರ ನೈಷ್ಠುರ್ಯದಿಂದ ॥
ನೆನೆಯರಿದು ಸ್ತ್ರೀಸ್ವಭಾವಂ ಲಕುಮಿತಾನಿರ್ಪ ।
ವನಜವ ದಿನಾಂತ್ಯದೊಳ್ ಬಿಡುವಳೀ ಚಾಂಚಲ್ಯ ।
ವನಿತೆಯರ ಕುಲಪರಂಪರೆಯೊಳಚ್ಚರಿಯಲ್ಲ ಲೋಕಪ್ರಸಿದ್ಧಮಬಲೆ ॥ (9)

ಪರವನಿಟ್ಟಸದಲ್ಪಸುಖಕೆಳಸಿ ಪರಿವೃಢನ ।
ತೊರೆವನರ್ಥವಬಯಸಿ ನಿಜಶರೀರದಹಾನಿ ।
ಯರಿಯುರದರಿಂದ ಚಪಲಾನಾಮ ನಾರಿಯರಿಗಡಸಿತಾಪಂಶದೊಳಗೆ ॥
ನಿರುತ ಪತಿದೇವತೆಯರಿಪ್ಪರೆಂದಿಗುಧರ್ಮ
ದಿರವವಿೂರದಲುಭಯಕುಲಕೆ ಜಸಮಂ ಗಳಸಿ ।
ಸುರಮುನಿಗಳ್ಹಷಿವೃದ್ಧಿ ಗೈವಸಾಧ್ವೀ ಜನರ ಮಹಿಮೆ ನಿಸ್ಸೀಮತಾಯೆ ॥ (10)

ಸಿರಿವಂತನಾಗಲಿ ದರಿದ್ರನಾಗಲಿ ಸುಖವ ।
ಬೆರದಿರಲಿ ಕಷ್ಟಸಂಕಟದಾದಿ ಯಾಂತಿರಲಿ ।
ತರುಣಿಯರಿಗಧಿಪ ಪರದೇವತಾನೀಕಾಶಮೆಂದಾದು ಸುಕೃತವಡೆದು ॥
ಧರಣಿಯೊಳ್ಚರಿಪ ಸುಚರಿತ್ರೆಯರ ಸಂತತಿಗೆ ।
ವರಮಕುಟಮಾಣಿಕ್ಯಮೆಂಬಂತೆ ಪರಿಯ ಶ್ರೀ ।
ಚರಣಗಳ ನನುಸರಿಸಿ ಸುಖಮೊಪ್ಪುದೀ ನೆಲಕ್ಕೆನುತ ಬೋಧನೆಗೆಯ್ಯಲು ॥ (11)

ಕೋಸಲಾತ್ಮಜೆಪೇಳ್ದ ಧರ್ಮ ಬೋಧಾಕ್ರಮವಿ ।
ಲಾಸಮಂ ಕೇಳಿ ಹರ್ಷದಿ ಜನಕಸಂಭೂತೆ ।
ಪೊಸರಳ ಮಾತೆ ವಿಜ್ಞಾಪಿಸಿದಳಂತೆಂದು ನಯವಿನಯಭಕ್ತಿ ವಿಡಿದು ॥
ವಾಸವನ ಸತಿಯು ದಾಕ್ಷಾಮಣಿಯರಾರ್ಚಿಸಿದ ।
ರಾಸಿಗಾಧಿಕ್ಯವನಸೂಯೆ ಲೋಪಾಮುದ್ರೆ ।
ಯೊಸುಜನರಿಗೆ ಜಸವಗಳಸಿ ನಿಮ್ಮಡಿಯನುಗ್ರಹವ ಸಂಪಾದಿಸುವೆನು ॥ (12)

ವಿಪದ ಸಂಪದ ವ್ಯಸನ ಹರ್ಷ ಕೋಪಂಶಾಂತಿ ।
ವಿಪರೀತಹಾಸ ಮುಂತಾದವಸ್ಥಾನಿಚಯ ।
ನಿಪವಾವುದಾಂತಿದೋರ್ದಡಾದಿತ್ಯನಿಂವಸ್ಯ ಮನಿಸದೊಲು ಕಿರಣಂಗಳು ॥
ನೃಪಶಿಖಾಮಣಿ ಯಂಘ್ರಿಯನುಮತಿಯೊಳ್ದುರ್ತ ।
ಲ್ಲಪನಾನುಮೋದಮಸ್ಮನ್ಮೋದ ಮೆಂದೆನಿಸಿ ।
ಪ್ರಪದಸ್ಮರಣೆಯಿಂದ ಪ್ರಾಂತ ಕೃತಹನಿದಂ ಸತ್ಯಮೆಂದರಿವುದಾರ್ಯೆ ॥ (13)

ನಿರತಿಶಯ ಸುಖಮೀವ ಪರಿಯ ಪರದೇವತೆಯ ।
ಮರೆದು ನಿರಯಕ್ಕೆಳಸರ್ವೆಸೆ ದುರ್ಮೇಧೆಯರು '
ವರಪುರಂಧ್ರಿಯರ ಮತವಲ್ಲವೆಂಬುದೆ ಲೋಕ ಸಮ್ಮತಮೆನುತೊತ್ತರೆಯಲು ॥
ಹರುಷದಿಂ ಕೌಸಲ್ಯೆ ಬಿಗಿದಪ್ಪಿಮಸ್ತಕವ ।
ಸರಭಸಘ್ರಾಣಸಂಗೈದು ತುತಿಸುತ ಬೇಗ ।
ಪರಸಿದಳನೇಕ ವಿಧದಿಂದಲಾನಂದಾಬ್ಧಿಯೊಳಗಾಳುತೇಳುತನಘೆ ॥ (14)

ಎನುತ ಸಾತ್ವಿಕಚಿತ್ತಳಾಗಿ ಕಂಬನಿಗಳಂ ।
ವನಧಿಮೇಖಲೆಯ ಪಂಕಿಲಮೆನಿಪ ಘನಯದಿಂ ।
ಸನುಮತಿಸಿ ಸಂತೈಸಿ ರಘುನಾಥನಿಂತೆಂದ ವನವಾಸವತ್ಸರಗಳು ॥
ನೆನಹುಮಾತ್ರದಿ ನಿಮಿಷಮೆಂಬಂತೆ ಕಳೆದಪೆವು ।
ಮನೆಯೊಳರ್ದಂತಾಕುತರ ಬಂದುಕಾಣ್ಬೆಪದ ।
ವನಜಮಂ ಸಂತಾಪ ಬೇಡೆವಾರ್ಯೆ ಸ್ವಾಂತಸಂತಸಂ ಗೊಳಸುತಾಯ ॥ (15)

ವಾಸರಗಳತಿವೇಗಲರುಗುವವು ಚಿತ್ರಸಂ ।
ವಾಸಮಹುದಾನಂದ ಚಿಂತೆ ಬೇಡೆಂದು ಮೃದು ।
ಹಾಸಯುತವಾಣಿಗಳ ನಿಜಜನನಿಗೊರೆದು ಮಗುಳ್ಳುಳದ ಮಾತೆಯರೊಳೆಂದನು ॥
ಮೋಸದಿಂದಜ್ಞಾನದಿಂದೆನ್ನ ದೆಸೆಯಿಂದ ।
ಲೇಸು ಹೊಲ್ಲಯವಾಗಿ ತೋರ್ದೊಡಂ ದಯದಿಂದ ।
ಬೇಸರಂಗೊಳದೆ ಪಾಲಿಸವೇಳ್ಕುಮೆಂದೊರೆದ ಭಾಷೆಯಂ ಕೇಳಿ ಕ್ಷಣದಿ ॥ (16)

ಮರುಗಿ ಶೋಕಾವಿಷ್ಟರಾದರಾ ಸದ್ಗುಣವ ।
ಪರಿಪರಿಯಲೋರ್ವ ರೊರ್ವರೊಳೊರೆವುತಿರಲಿತ್ತ ।
ಧರಣಿಜೆಯು ಲಕ್ಷ್ಮಣಂ ಸಹಿತ ದಶರಥನಂಘ್ರಿಗೆರಗಿ ನುತಿಗೈದು ಮುದದಿ ॥
ತ್ವರಿತದಿಂ ಕೌಸಲ್ಯೆಗಘನಮಿಸನುಜ್ಞೆಯಿಂ ।
ಪೊರಡುತಿರೆ ಸೌಮಿತ್ರಿ ನಿಜಮಾತೆಯೆಡೆಗೈದಿ ।
ಚರಣಕಾನತನಾಗಿ ನಿಂದಿರಲ್ತೆಗೆ ದಪ್ಪಿ ತನಯನೊಡನಿಂತೆಂದಳು ॥ (17)

ತಾತನೀನೆ ನೆದರ್ಥಮಿದು ಧರ್ಮ ಸಂಗತಿ ।
ವ್ರಾತಕಾರಣ ಕುಲಪರಂಪರೆಯನೃಪಕೀರ್ತಿ ,
ನೇತವಾದುದು ಪಿರಿಯರನುವರ್ತನಂ ಶುಭೋದಯದ ನೆಲೆಯುಲ್ತೆ ನಲಿದಿ ॥
ಭ್ರಾತಾಂಘ್ರಿ ಪಂಕ್ತಿಯಂ ಬಿಡದೆ ಸುಖದುಃಖಗಳ ।
ರೀತಿಯೊಳ್ ಶೋಕಹರ್ಷಂಗಳಂಟವದೆ ಸೌಖ್ಯ ।
ಜಾತಮೆಂತಪ್ಪುದಂತಿಪ್ಪುದೈದುವುದೆನುತು ಬೇಳ ಮಗುಳಂತೆಂದಳು ॥ (18)

ತಿಳದಾಶರಥಿಯು ದಶರಥನೆಂಮಮೂಂಧರಾ ।
ತಳವಣಿಗಿಯೆಂವಯೋಧ್ಯಾನಿಭಮಹವಿಯೆಂದು ।
ಘಳಲನತ್ರಿ ಸುಖದಿಂದ ಲೈದೆಂಮ ಪರಕೆಗಳ ನಿತ್ಯ ಬೀಳ್ಕೊಡಲಿತ್ತಲು ॥
ಥಳಥಳಪ ಪೊಂದೇರ ಸಿಂಗರಂಗೈದು ಬಂ ।
ದೊಳಪೊಕ್ಕು ಕೈಮುಗಿದು ಸೂತವಿಜ್ಞಾಪಿಸಿದ ।
ನಳನಾಕ್ಷರಾಮ ಬಂದಿದೊಕೊ ಸ್ಯಂದನಮರುಣ ಗಾಂಧರ್ವಹಯಕಲಿತದಿ ॥ (19)
ಸುರಪನಿಗೆ ಮಾತಳಿಯು ಬಿನ್ನಪಂ ಗೈದಂತೆ ।
ಪರಮಭಕ್ತಿಯೊಳಂ ಸುಮಂತ ವಿಜ್ಞಾಪಿಸಲ್ ।
ಹರುಷದಿಂ ಶ್ರೀರಾಮ ಪೊಂದೇರನಡರುವೊಡೆ ನಿಶ್ಚಯಂಗೈದು ಬಳಕ ॥
ಧರಣಿಜಾತೆಗೆ ನಿಯಾಮಿಸಲತ್ತೆಯಿತ್ತ ಶುಭ ।
ಕರ ಭೂಷಣಾಂಬರಗಳಿಂದಲಂಕೃತಿ ಮೆತ್ತು ।
ಸರಭಸದಿ ಪೊಂದೇರ ನೇರಲಾ ಜನಕಸುತೆ ಸೌಮಿತ್ರಿಯತಿವೇಗದಿ ॥ (20)
ಶರಚಾಪ ಕವಚ ಕಠಿಣಂ ಚರ್ಮಮೇಲೆನಿಪ ।
ಕರವಾರಿ ಮುಖ್ಯೋಪವಸ್ತುಗಳ ಸಾರಥದೊ ।
ಳಿರಿಸಿ ಬಲವಂದು ವಂದಿಸಿ ರಾಮಲಕ್ಷ್ಮಣರ್ಪೊಂದೇರ ನೇರಲಾಗ ॥
ತ್ವರಿತದಿ ಸಮೀರಸಮ ವಾಜಿಗಳನಾ ಸೂತ ।
ಕರಕಶಾಘಾತ ಗೆಯ್ಯಲ್ತತ್ಕ್ಷಣ ದೊಳಾ ।
ತರಣಿಯುಂ ಪಿಡಿಯಲವ್ವಳಿಪಂತೆ ಗಮಿಸಿದವು ಘನಗರ್ಜನಂಗೈವುತ ॥ (21)
ನಡೆಯೆ ಪೊಂದೇರು ಸೌದಾಮಿನೀ ಪ್ರಭೆಯಿಂದ ।
ಲಡಿಗಡಿಗೆ ತತ್ಪುರಸ್ತ್ರೀ ಬಾಲವೃದ್ಧರುಂ ।
ತುಡುಕಿದತಿಶೋಕದಿಂದಲ್ಲಲ್ಲಿ ತದ್ವ್ಯಸನದಿಂದ ಮೂರ್ಛೆಯಾನಾಂತಿರೆ ॥
ಅಡಿಗಡಿಗೆ ಪಶುಪಕ್ಷಿ ಯುಳಿದಜನರೆಲ್ಲ ಬೆಂ ।
ಬಿಡದೆ ಪಿಂದೈದುತಿರಲುಳಿದ ನರನಿವಹಸಂ ।
ಗಡಿಗರೆನಿಸುವೆವೆನುತಲಾರ್ತರವಮೆಸಗೆ ಶಬ್ದಾದ್ವೈತಮಾಕ್ಷಣದೊಳು ॥ (22)
ಸೂತರಶ್ಮಿಯ ಪಿಡಿದು ಮೆಲ್ಲನೈದಿಸು ರಥವ ।
ಶೀತಾಂಶುನಿಭ ವದನಮಂ ನೋಳ್ಪವರೆನಿಮಿಷ ।
ಮೇತ್ತಕತಿತ್ವರೆಗೈವೆ ಯೆನುತ ಕೆಲರೊರಲು ತಿರಲಡಿಗಡಿಗೆ ಮತ್ತೆ ಕೆಲರು ॥
ಬೀತಿರ್ಪುದೆಂತು ದೇವೋಪಮಿತಗರ್ಭಸಂ ।
ಭೂತತನಯರ ಶಿಲಾಹೃದಯ ಮಾಯತ್ತು ತ ।
ನ್ಮಾತೆಗೇಂ ಗೈವೆವೆಂದೆನುತ ಪಲುಬುತ ಜನರ್ಬೆಂಬತ್ತಿಪೋಗುತಿರಲು ॥ (23)
ಕೃತಿಯತ್ತ ವೈದೇಹಿ ಪತಿಯನಗಲದಲೆ ಸಂ ।
ಗತಿಗೈವಳಮಿತಧನ್ಯತೆವೆತ್ತ ಸೌಮಿತ್ರಿ ।
ರತಿಯಿಂದಲಣ್ಣನನುಸರಗೈದ ಧರ್ಮಮಂ ಮೀರದತಿಸನ್ಮಾರ್ಗದಿ ॥
ಸತಿಸುತರ್ಸಹಿತಾವ ಧನ್ಯರಾದೆವೆನುತ್ತ ।
ಲತಿಶಯಿತ ಶೋಕದಿಂ ಪಲುಬುತಿರಲವರಿತ್ತ ।
ಕ್ಷಿತಿಪ ಸುತನಂ ನೋಳ್ಪೆನೆಂದು ನಿಜಸ್ತ್ರೀ ಜನರ್ಸಹಿತ ಪೊರಮಂಟ ಜವದಿ ॥ (24)

ತ್ವರಿತದಿಂ ರಥವ ನಡೆಸೆಂದು ರಾಘವ ಪೇಳೆ ।
ಪರಿಜನಪೌರಜನರ್ನಿಲಿಸೆಂದು ಕೂಗುತಿರ ।
ಉರಸಪಿಂದಟ್ಟಿಬರುತಿರೆ ನೋಡುತೀಪರಿಯು ಸೂತ ಮಧ್ಯದಿ ನಿಲುವ್ರೊಡೆ ॥
ಪರಮದುರ್ಲಭವಾಗೆ ಪದಹತಿಯು ಕೆಂಧೂಳ ।
ಪರಪೆ ಕಳ್ತಲೆಗೆಯ್ಯೆ ಕಂಬನಿಯು ವಾಹಿನಿಯು ।
ಸರಿಸಗೈದುದು ತತ್ಕ್ಷಣಕದೇಂ ಬಣ್ಣಿಸುವೆನಂದಿನದಿನೋಪಮವನು ॥ (25)
ಪೊರಮಟ್ಟ ದೈಸೆ ಲೋಕರ ಶೋಕದಾವಾಗ್ನಿ ।
ಯುರುಧೂಮ ಲೋಕವಮಾಂಧ್ಯತೆಗೆಯ್ಯೆ ಪಥವ ಮುಂ।
ದರಿಯದಖಿಲರು ತೇರಪರಿವೇಷ್ಟನಂ ಗೆಯ್ಯಲನಿತರೊಳುಪಿಂತೆ ಬರುವ ॥
ಅರಸಿನೆಡಬಲದ ಕಂಚುಕಿಗಳಾರಾವಸಂ।
ಭರಿತವಾಗಲ್ನೆರೆದ ಜನರಿಟ್ಟಸುತ ಕೋಡಿ ।
ವರಿಸಿದರ್ಕಂಬನಿಗಳಾ ದಿನದಿನಾದ್ಭುತವ ನುಸುರಲೆಂತಳವಡುವುದು । (26)
ಹಾರಾಮಲಕ್ಷ್ಮಣ ಸುಮಂತ ವೈದೇಹಿ ಯೆಂದೆನು ।
ತ್ತಾರಾವಗೈವುತ್ತ ಪಿಂತೆ ಬಹ ಮಾತೆಯರ ।
ತೋರಾಯು ದೈನ್ಯಮಂ ನಿಟ್ಟಿಸುತ ರಾಘವಂ ಚಿತ್ತಸಂಕೋಚಗೊಳುತೆ ।
ಈ ರಾಜ ಶುದ್ಧಾಂತದನುತಾಪಮಂ ಕಂಡು ।
ಸಾರತ್ರ್ಯಮಿದು ತೇರ ತ್ವರಿತದಿಂ ನಡೆಸೆಂದು ।
ಧೀರಾಪ್ತಮೌಳಿಗೆ ಸುಮಂತ್ರಗಾಜ್ಞಾಪಿಸಲ್ಕಾ ಧ್ವನಿಯಕೇಳುತರಸ । (27)
ನಿಲಿಸೆಲವೊರಥಮಂ ಸುಮಂತ ಪೋಗದಿರೆಂದು ।
ಮುಲಿವುತ್ತೈತರೆ ಪಂಕ್ತಿರಥ ರಾಮ ನಡೆಸೆಂದು ।
ಪಲುವೊರೆಯಲುಭಯಮಧ್ಯದಿ ಸೂತ ಸಿಲುಕಿದಂ ಪೋಗಲಿರಲಳವಲ್ಲದೆ ॥
ಲಲಿತಾಂತರಂಗನಾಗಿರೆ ರಾಮ ಮಾತ್ರೆಯರು ।
ಪಲುಬುವುದ ನೋಡುವರೆ ಸಹಿಸಲಮ್ಮದೆಸೂತ।
ನಿಲಿಸದಿರುರಥವ ನಡೆಸೆಂದು ನಿಟ್ಟುರಗೆಯ್ಯಲಾತ ಜವದಿಂದ ನಡಸೆ। (28)
ಬಡವರಿಗನಾಥರಿಗಶಕ್ತರಿಗೆ ತಾಪಸರ ।
ಪಡೆಗಾವ ರಕ್ಷಕನದೆಲ್ಲಿ ಪೋದಪ ಕೋಪ ।
ವಿಡಿದು ಶಪಿಸಲ್ಸಹಿಸಿ ಪಾಲಿಸುವ ಸದ್ಧರ್ಮಮೂರ್ತಿಯೆಲ್ಲಿಗೆ ಪೋದನು ॥
ಪಡೆದಾಕೆ ಯೆಂತೆನ್ನ ನೋಡುತಲಿ ಕೃಪೆಗೈದು ।
ಪೊಡಮಡುವ ಸತ್ಯಸ್ವರೂಪ ಪೋದಪನೆಲ್ಲಿ ।
ತುಡುಕಿತೇಂ ದುರ್ದಶೆಯೆನುತ್ತ ಮರುಗಿದರೆಲ್ಲ ಕ್ಲೇಶಮದನೇವೇಳ್ವೆನು ॥ (29)
ಸಾಧುಜನರಗ್ನಿಹೋತ್ರವನುಳಿಯೆ ಸೂರ್ಯಮರೆ ।
ಯಾದ ವಿಧು ನಕ್ಷತ್ರ ನಿಷ್ಪ್ರಭೆಯ ತಾಳ್ದತಿ ।
ಮೋದಕರಮಾರುತಂ ಸುಳಿವುದುಳಿದಂ ತುರಗನಾಗಾದಿಗಳ್ಗ್ರಾಸದ ।
ಸೋದೆಯುಂಬಿಟ್ಟುವಂಗನೆಯರರ್ಭಕರಿಂಗೆ ।
ಸ್ವಾದುಸ್ತನ್ಯಗಳೀಯದೆಲ್ಲ ಶೋಕಾಕುಲಿತ ।
ರಾದುದೇ ನೆನವೇಳ್ಕೆ ರಾಮ ನಗರಮನುಳಿದು ಬನಕೈದುವವಸರದೊಳು ॥ (30,

ಮರುತಜವದಿಂ ತೇರು ಪುರವ ಪೊರಡಲ್ಕಿತ್ತ ।
ನೆರೆದಜನರಂತಃಪುರಾಂಗನೆಯರಾ ನೃಪತಿ ।
ವೆರಸಿ ಭೋರೆಂದು ಕೂಗಲ್ ನಾದ ಮುಂಗಾರಸ್ತನಿತ್ರದಿಂದಲಿ ಪರ್ಬಲು ॥
ಜರನಂತೆ ಜಾನಪದ ಕಂಗೊಳಸಲರೆನಿಮಿಷ ।
ಶರಿರಭಾರವನುಳದು ಚಿತ್ರಪುತ್ಥಳಗಳಂ ।
ತಿರುತಲೆಚ್ಚತ್ತು ಸಾಲ್ದೆಸೆಯ ನಿಟ್ಟಿಸಿ ಲೋಕ ಪಲುಬಿದರದೇವೇಳ್ವೆನು ॥ (31)

ಪತ್ತುದೆಸೆಗಳು ತಮಚ್ಛನ್ನವಾದವು ಕಂಪ ।
ವೆತ್ತುದು ಧರಾತಳಂ ತಾರಾಗ್ರಹಂಗಳುಂ ।
ಸುತ್ತಲೆಳಸಿದೆ ವಕ್ರಮಾನುಗತಿಯಿಂ ಬೀಸಿತ್ತೈಸೆ ಬಿರುಗಾಳ ಕೂಡೆ ॥
ತತ್ತರಂಗೊಳುತೆ ನಿಜಕೃತ್ಯಂಗಳುಳದು ರಥ ।
ಮೆತ್ತ ಪೋದುದೆನುತ್ತಲರಸಿ ಕೊಂಡಖಿಲಜನ ।
ಬಿತ್ತರದೊಳ್ಳೆದಿದರ್ ನೆನೆವುತಲಿ ರಾಘವನ ಸಿರಿಸಾಮವಂ ಬಿಡದಲೆ । (32)

ಪತಿಯು ನೋಡದಲೆ ಸುದತಿಯರು (ತರ್ಣಕರ್ಬಡುವ ?) ।
ಖತಿಯು ನಿಟ್ಟಿಸಿದಲಾಹಾರ ಪಾನಾದಿಗಳ ।
ರತಿಯುಳದು ಶ್ರೀರಾಮನೆತ್ತ ಪೋದನೆನುತ್ತಲರಸುತ್ತೈದಿದರು ಬಳಕ ॥
ಮತಿಗುಂದಿ ಮಾನವಂ ಗಣಿಸರರಸರ್ ವಿಪ್ರ ।
ಪತಿಗಳ್ಮಾರ್ಗವಂ ಪುಡುಕುತ್ತೈದಿದರಿತ್ತ ।
ಕ್ಷಿತಿಪಾವರೋಧ ಮೊಂದುಳದು ನಿರ್ಜನವ ಾದುದಾ ನಗರವಾದಿನದೊಳು । (33)

ತೇರೆ . . . ಗಿಸತೇನೆಂಬೆನತಿವೇಗದಿಂದಂಗ ।
ವಿಾರಣನ ಧಿಕ್ಕರಿಸುತೆಳ್ವಿಂಚಿನಂದದಿಂ ।
ತೋರಗವನದಿ ಪೋಗೆ ಜನರೆಲ್ಲ ನೋಡಿದರ್ ದಿಟ್ಟಿಗಳ ಪಾರುವನಿತ ॥
ದೂರಪಥವಾಗಿ ಕಾಣಲ್ಬಾರದಿರಲರಸ ।
ಹಾರಾಮ ಸೌಮಿತ್ರಿ ವೈದೇಹಿ ಯೆಂದೆನುತು ।
ದಾರದುಃಖಾಂಬುನಿಧಿಯೊಳ್ ಬೀಳು ವಂದದಿಂದೊರಗಿದಂ ಭೂತಳದೊಳು ॥ (34)

ಸೊರಗಿ ನೆಲಕೊರಗಿದರಸನ ನೋಡಿ ಕೌಸಲ್ಯೆ ।
ಕರಲಾಘವನ್ನೀಯೆಲೆಡೆದಂಕದೊಳ್ ಬೇಗ ।
ತುರಗಪತಿ ಯಾತ್ಮಭವೆ ಕೈಗಿಾಯುಲುಪಚರಿಸುತಂ ಬರೆ ಸುಮಿತ್ರೆ ನರಯದಿ ॥
ಅರೆನಿಮಿಷವೆಚ್ಚತ್ತು ಬೆಚ್ಚುಸುರ್ಗಳ ಬಿಡುತ ।
ತೆರೆದು ಕಂಗಳ ಕಕುಭಗಳ ನೋಡಿ ಕೋಪದಿಂ ।
ಭರತಾಂಬಿಕಾಮುಖವ ಕಾಣುತಂ ಪಲ್ಕೊರೆದು ಜರೆದು ರೋಷಾವೇಶದಿ ॥ (35)

ಕುಲಗೆಡುಕೆ ಪಾಪಿಷ್ಠೆ ಕ್ರೂರೆ ಬಾಂಧವಿಯಲ್ಲ ।
ಲಲನಾಕೃತಿಯು ದುಷ್ಟರಕ್ಕಸಿ ಭವತ್ಕರಂ ।
ಕಲಿತಾಗ್ನಿಕಲ್ಪಮದರಿಂದೆಮ್ಮ ಸಂಸ್ಪೃಸಿಸಬೇಡ ಪಾಪಿಷ್ಠೆ ನೆಲವುಂ ॥
ಗೆಲಿದೆ ಕೃತ್ರಿಮ ಬುದ್ಧಿವಿಡಿದು ಲೋಕವನೆಲ್ಲ ।
ಕೊಲುವೊಡಿಚ್ಛೈಸಿದ ಮಹಾಪಾಪಿ ದೊರೆತನದಿ ।
ನಿಲಿಸಿ ಸುತರಂ ಸುಖದಿ ಬಾಳೆಂದು ಗರ್ಜಿಸುತ ಧಿಕ್ಕರಿಸಿದಂ ಸತಿಯನು ॥ (36)

ಎಂದನೇಕವಿಷಾದದಿಂದ ಸತಿಯನು ಜರೆದು ।
ಕಂದುತಲಿ ಪಾಂಸುಕುಂಠಿತ ಮೂರ್ಛೆಯೊಂತಿಸವ ।
ವೃಂದಾರಕೇಂದ್ರಪ್ರತಿಯು ನಿಟ್ಟುಸುತಾಗ ಕೌಸಲ್ಯೆ ಖಿನ್ನೆಳಾಗಿ ॥
ಚಂದದಿಂ ಪಿಡಿದೆತ್ತಿ ಸಂತೈಸಿ ನಯವಿನಯ ।
ದಿಂದ ವಿಜ್ಞಾಪಿಸಲ್ ನಿಟ್ಟುಸಿರ್ಗಳ ಬಿಡುತ ।
ನಂದನಂ ಪೋದ ಮಾರ್ಗವ ನೋಡಿ ಮರುಗಿದಂ ಕಿಚ್ಚುಕಂಡೆರಳೆಯಂತೆ ॥ (37)
ಸುತ ವನವಿಹಾರಕ್ಕೈದಿಸನೆಂದು ಪಂಕ್ತಿರಥ ।
ನತುಳಸಂಕಟದಿಂದ ನಿಜಸತಿಯೊಳಂತೆಂದ ।
ನತಿಶಯದ ಸೌಧಾಗ್ರದೊಳು ಹಂಸತೂಲಿಕಾತಲ್ಪದೊಳು ಮೃಗಮದಾದಿ ॥
ವಿತತ ಘುಮುಘುಮಿತ ಪರಿಮಳ ಪೂರಿತಾಂಗಿಯರ ।
ಸತತ ಕರಪಲ್ಲವದ ತಾಳವೃಂತಗಳಿಂದ ।
ಲತಿಶಯದ ಸೌಖ್ಯದಿಂ ಪವಡಿಸುವ ಭೂಪಾಲ ಬನದಲೆಂತಿರ್ಪನಕಟ ॥ (38)
ಮೃದುಳಶಯ್ಯೋಚಿತಸುಮೂರ್ತಿ ಪಾಷಾಣಾದಿ ।
ಹೃದಯದಾರುಣಶಯನದಿಂದೆಂತು ಸುಖಗೊಂಬ ।
ಚದುರೆಯರ ಕರಪಾಕ ಶಾಲ್ಯನ್ನ ಭೋಕ್ತೃಮುಜವಿಪತ್ರ ಫಲಗಳಿಂದ ॥
ಉದರಭರಣಂಗೈವುದಾಯ್ತು ಪಾಪಿಷ್ಠೆ ಕೆ ।
ಟ್ಟಿದೆಗೈದು ಲೋಕವಿದ್ವಿಷ್ಟ ಕರ್ಮವ ನೆಸೆದೆ ।
ಮದಮುಖದಲೆಂದು ಕೈಕಾಸತಿಯ ಧಿಕ್ಕರಿಸಿ ನುಡಿವನಾ ಭೂಪಾಲನು ॥ (39)
ಕ್ರೂರಕಂಟಕಶರ್ಕರಾನ್ವಿತದ ಪದವಿಯೊಳು ।
ದಾರಕೋಮಲಪದದೊಳೆಂತು ಸಂಚರಿಸುವರು ।
ಘೋರತರಶ್ವಾಪದನಿನಾದಶ್ರವಣದೊಳೆಂತು ಧರಣಿಸುತೆ ಜೀವಿಸುವಳು ॥
ತೋರಕಷ್ಟಂ ನಿನ್ನ ದೆಸೆಯೊಳುದ್ಭವಿಸಿತೆಂ ।
ದೋರಂತೆ ಸತಿಯ ಧಿಕ್ಕೃತಿಗೈದು ರಾಘವನ ।
ಚಾರುಸದ್ಗುಣಗಳಂ ಸ್ಮರಿಸುತ್ತ ಪತ್ತನವ ಪೊಕ್ಕನಾ ಪಂಕ್ತಿರಥನು ॥ (40)
ಕರಿತುರಗಸಂಚರಣೆ ಕಾಲಾಳವಾದಗಳು ।
ಪರಿಪರಿಯ ಶೃಂಗಾರಕಲಿತಜನದಿಂ ಶೂನ್ಯ ।
ವೆರೆದ ನಗರಿಯ ನೋಡಿ ಸಂಕಟಂಗೊಳುತ ಬಹುವಿಧದಿಂದ ಪಲಬಿ ಮರುಗಿ ।
ಅರಮನೆಯ ಪೊಕ್ಕು ನಿಟ್ಟುಸುತ ಹಮ್ಮೈಸಿದಂ ।
ತರುಣನಂ ಕಾಣದಳಲುತ ನಿಮಿಷ ತಿರೆಗೊರಗಿ ।
ಮರಳಿ ನಿಟ್ಟುಸಿ ನೆರೆದ ಪರಿಜನದೊಳಂತೆಂದನಾ ಪಂಕ್ತಿರಥ ದೈನ್ಯದಿ ॥ (41)
ಇದುವೆ ಕಾಲಾಹಿನಿಲಯ ಮಕ್ಕಳಂಸಂತಪ್ತ ।
ಮಿದನುಳಿದು ಕೌಸಲ್ಯೆಯರಮನೆಗೆ ಕರೆದೊಯ್ದು ದ ।
ರುದಿತಸಂತಸದಿಂದಲಿಹೆನೆಂದು ಬೇಳಲ್ಕೆ ಪರಿಜನರ್ ಜೀಯಯೆನುತ ॥
ಪದುಳದಿಂ ಕರದೊಯ್ದೊಡಲ್ಲಿ ಸುಖ ಶಯ್ಯೆಯೊಳ್ ।
ಬಧಿರ ಮೂಕಾಂಧತೆಯನಾಂತಂತೆ ನಾಲ್ದೆಸೆಯ ।
ನೆದುಭುತದಿ ನಿಟ್ಟುಸುತ ಸುತರ ನೆನೆದಂ ವಿವಿಧತರವಾದ ಗತಿಯ ಗುಣಿಸಿ ॥ (42)

ಊತುವ ಸುಳಿದಂಬರದ ತೆರದಲಿರಲಾಗಾರ ।
ಪೊಡವೀಶ ನೋಡಿ ಹಮ್ಮೈಸಿ ಹಾ ರಾಮ ಯೆಂ ।
ದೊಡನೊಡನೆ ಕಡುಶೋಕದಿಂದ ಹಂಬಲಿಸುತಂ ಕೌಸಲ್ಯೆಯೊಡನೆಂದನು ॥
ತುಡುಕಿತಧಿಕವ್ಯಸನ ಶ್ರೀರಾಮ ಪುರದರಸ ।
ನೊಡನೆ ಗಮಿಸಿದ ದಿಟ್ಟ ಮನ ಮುಭಯವಿಷ್ಟಾವರೆಗೆ ।
ಕಡೆಗೆ ಬರಲಿಲ್ಲ ಬಲೆ ಯಾದರಿಂದ ಯೆನ್ನಂಗವಮಂ ಸ್ಪೃಶಿಸು ಕರದಲೆನುತ ॥ (43)

(ಸಂಧಿ 13, ಪದ 596.)

## ಹದಿನಾಲ್ಕನೆಯ ಸಂಧಿ.

ಸೂಚನೆ ॥ ಧರಣಿಸುತೆ ಸೌಮಿತ್ರಿ ಸೂತ ಸಹ ರಾಘವಂ ।
ಹರುಷದಿಂದರುಗೆ ಗೋಮತಿಯೆಡೆಗೆ ಪುರಜನರ ।
ಪರಮದೈನ್ಯಾಪಹೃತಗೈದ ನಿಜತತ್ತ್ವೋಪದೇಶದಿಂ ವಾಮದೇವಂ ॥

ಹೈಮವತಿ ಕೇಳ್ ಪಂಕ್ತಿರಥ ಪುತ್ರನಂ ಸ್ಮರಿಸಿ ।
ಭ್ರಾಮಕಂಗೊಳುತ ಪಲುಬುತಿರಲ್ ಕೌಸಲ್ಯೆ ।
ಗಾ ಮಹತ್ತರವ್ಯಸನಮುದುಭವಿಸಿ ರಾಮನಂ ತದ್ಗುಣಗಳನ್ನು ನೆನೆದು ॥
ಈ ಮಹೀಜನರ ಸಂಕಟಗೊಳಸಲೆಂದುದಿಸಿ ।
ಕಾಮಚಾರಿಣಿ ಯೆನಿಸಿ ಕಲಿತನವ ನಿರ್ವಹಿಸಿ ।
ತಾಮಸೀ ಕೈಕೆ ಯಿನಿತಂಗೈದಳೇನೆಂಬೆ ದುಷ್ಟಾಹಿಯಂತೆ ಗೃಹದಿ ॥ (1)

ಪರಮಧರ್ಮಸ್ವರೂಪಿಯು ರಾಮಚಂದ್ರನಂ ।
ಪೊರಮಡಿಸಿ ಕ್ರೂರಕುಂಭೀನಸದ ಮಾಳ್ಕೆಯೊಳ್ ।
ಪುರವ ನಿರ್ಜನಗೈದು ಸಂಪೂರ್ಣಕಾಮಳೆಂದೆನಿಸಿದಳು ಕೈಕೆಯೊಲಿದು ॥
ಸ್ಮರವಶದಿ ವರಮಿತ್ತು ಮರುಗಿ ಮಾಡುವುದೇನು ।
ಕರಿಶರಭಬೇರುಂಡಕಲಿತಕಾನನದೊಳೆಂ ।
ತಿರುವರೆನ್ನಾತ್ಮಜರದೃಷ್ಟ ಕಷ್ಟವೆನುತ್ತ ಪಲುಬಿದಳ್ ನೆನೆದು ನೆನೆದು ॥ (2)

ವನವಾಸಮಂ ಕಳೆದು ವಾಸವೋಪಮರೆನಿಸಿ ।
ಘನಭೂಷಣಂಗಳನಲಂಕರಿಸಿ ರಥವೇರಿ ।
ಜನರ ಸಂತಸಗೊಳಸಲೈತಪ್ಪುದಂ ಕಾಣ್ಬೆನೆಂದಿಗತುಲಾನಂದದಿಂದ ॥
ವನೆಮನೆಯ ಮುಂಗಡೆಯಲಾರತಿಗಳಂ ಪಿಡಿದು ।
ಮನದ ಹರುಷದ ಪುಷ್ಪಲಾಜೆಗಳ ತಳಿವ ಸ ।
ದ್ವನಿತೆಯರ ಸುಸ್ವರಗಳಾನೆಂದಿಗೀಕ್ಷಿಪೆನೊ ತಾಳ್ದಪೆನೊ ಸಂಭ್ರಮವನು ॥ (3)

ಧರಿಸಿ ನಿಸ್ತ್ರಿಂಶಶರಚಾಪಗಳ ಸುಶ್ವೇತ ।
ಕರಿಯ ಮಸ್ತಕದಿ ಮಂಡಿಸಿ ಲೋಕ ನಾಲ್ದೆಸೆಯ ।
ಪರಿಪರಿಯ ತುತಿಘೋಷಗೈವುತಿರೆ ಪರ್ವಣಿಯೊಳುದಧಿ ಭೋರ್ಮೊರೆವಂದದಿ ॥
ವರಪತಾಕಾಧ್ವಜಂ ಕಳತಪನ್ನೀರಿಂದ ।
ಪರಿಮಳತ ವಿಪಣಿಗಳನಾಂತಯೋಧ್ಯಾನಗರ ।
ದಿರವನೆಂದಿಗೆ ಕಾಣ್ಬೆ ಹರುಷಮಂ ತಾಳ್ದಪೆನೆನುತ್ತ ಮರುಗಿದಳು ಪಲುಬಿ ॥ (4)

ಇಂತಪಾರಪ್ರಲಪಿತಂಗಳಂ ಕೌಸಲ್ಯೆ ।
ಚಿಂತಿಸುತಲಳುತಿರಲ್ಕಂಡಾ ಸುಮಿತ್ರೆ ತದ ।
ನಂತರದೊಳಂತೆಂದಳಸ್ಮತ್ಪರಂಪರೆಯು ರಾಜಧರ್ಮವನು ಬಿಡದೆ ॥
ಸಂತಸಂಗೊಳಸಲಖಿಲರ ತಾತನಾಜ್ಞೆಯುಂ ।
ತಾಂ ತಳೆದಗಣ್ಯಜಸಮಂ ಗಳಸಲ್ಕೈದಿದ ಮ ।
ಹಾಂತ ರಾಮನ ನೆನೆದು ಮರುಗಲೇಂ ಕಾರಣಂ ಗಮನಸಂತಾಪಹರಣಂ ॥ (5)

ಪಿಂತೆ ಶಿಷ್ಟಾಚರಣೆವಿಡಿದು ಬನಕೈದಲೋ ।
ರಂತೆ ಲಕ್ಷ್ಮಣ ಪದಾನುಗನೆನಿಸಿ ಸೇವಿಸುತ ।
ನ್ಸ್ವಾಂತಃಕರಣದಿಂದಲೈದಿರ್ಪ ವೈದೇಹಿ ಸಾಧ್ವೀಮತವ ಮೀಱದೆ ॥
ಸಂತಸವಲರುಗಿರ್ಪಳದಱಿಂದ ತ್ರಿಭುವನದಿ ।
ಗಂತವಿಶ್ರಾಂತ ಕೀರ್ತಿಯು ಗಳಿಸಿ ಪಿರಿಯನೃಪ ।
ಸಂತಿಗಾಧಿಕ್ಯ ಮಕುಟವನಿಡುವರತಿಶಯಕೆ ಮರುಗುವರೆ ಮಗುಳೆ ನೆನೆದು । (6)

ಪರಬಲಾರ್ದನ ರಾಮನಮಿತವಿಕ್ರಮ ಭೀಮ ।
ನುರುಬೆಯುಂ ಬನದೊಳುಳ್ಳಖಿಳ ಪ್ರಾಣಿಗಳೆಲ್ಲ ।
ಚರರಂತೆ ಸೇವಿಸುವರಲ್ಲದಿತರಂಗೆಯ್ಯಲೊರ್ವರ್ಗೆ ಶಕ್ಯಮಲ್ಲ ॥
ತರಣಿ ಯುಷ್ಣವ ಬೀರ ಶಶಿ ಶೀತವನ್ನೆಸಗ ।
ಮರುತ ನುರುಬೆಯುಗೆಯ್ಯದೆಲ್ಲರು ಯಥೋಚಿತದಿ ।
ಶರಣರೆನಿಸಿರ್ಪರದರಿಂ ಮಹಾಪುರುಷರಂ ನೆನೆದು ಚಿಂತಿಸಲೇತಕೆ ॥ (7)

ಪಗಲಿರುಳ್ಮೊದಲಪ್ಪ ಸರ್ವಭೂತಂಗಳುಂ ।
ನಿಗಮಾಗಮಾದಿ ವಾಗ್ಜಾಲಮೆಲ್ಲಂ ರಾಮ ।
ನೊಗುಮಿಗೆಯ ಬಗೆಯನನುಕರಿಸಿ ರಕ್ಷಿಪುವಲ್ಲದಿತರಮೇನುಂಟು ತಾಯೆ ॥
ಮಿಗೆ ಬಲೋದ್ಧತಿಯಿಂ ತಿಮಿಧ್ವಜನ ತನಯರಂ ।
ಬಗೆದಲ್ಲಿ ಮತ್ತಾವ ಶರಜಾಲ ಲಭಿಸಿರ್ಪ ।
ವಗಣಿತ ಸುಖೋದಯಗಳತ್ತಪವು ಬನದಲಿರೆ ಮನೆಯಾಲಿರ್ದಂತೆ ಸಲುಮಿ ॥ (8)

ಕಲೆಗೆ ಕಲೆ ಬಲಕೆ ಬಲ ಸಾಹಸಕೆ ಸಾಹಸಂ ।
ಮುಳಿಸಿಂಗೆ ಮುಳಿಸು ಶಾಂತಿಗೆ ಶಾಂತಿ ಲೋಕದೊಳ್ ।
ಕಲಿತ ವಸ್ತುಗಳೊಳಗೆ ಪೆಗ್ಗಳಂ ರಘುವೀರ ತೃಣಕೆ ತೃಣ ಘನಕೆ ಘನವು ॥
ಪಲವಜಾಂಡಗಳ ನಿರ್ಮಿಸಿ ಪೋಷಣಂಗೈದು ।
ಕೊಲುವ ಚಾತುರ್ಯಧುರ್ಯನ ಮಹಾನುಷೋಪಮಿತ ।
ಕಾಲಗೈದು ಶೋಕಿಸುವುದೇಂ ಪ್ರಯೋಜನ ತಿಳಿದು ನೋಡಿ ನಿಜತತ್ವವಿಡಿದು ॥ (9)

ತ್ರಿದಶಕುಲಂಗಳಂ ತಾಪಸಿಗಳಂ ಪೊರೆದು ।
ಚರದಹಿತ ಧರ್ಮಮಂ ಜಾಣ್ಮೆಯಿಂ ಮುಚ್ಚಿದರ ।
ಕರವಿಡಿದು ದಯಗೈದು ಸರ್ವಜನ ಸಂತೋಷಗೊಳುತ ಸನ್ನುತಿಗೈವ್ರೊಲು ॥
ನಿರತಿಶಯರಥವೇರಿ ಧರಣಿಜಾತೆ ಸಮೇತ ।
ಬರುವ ರಘುವರನ ಜವದಿಂ ಕಾಣ್ಬೈ ಶೋಕಕವ ।
ಸರಮಲ್ಲ ಚರಣಕೆರಗುವೆ ಕ್ಲೇಶಮಂ ಬಿಟ್ಟು ಶುಭವ ಚಿಂತಿಪುದು ತಾಯೆ ॥ (10)

ಅಮಿತವಿಭವಂಗಳಿಂದೈತಂದು ಮೃದುಲಪದ ।
ಕಮಲಂಗಳಿಗೆ ಮಣಿವ ಸುತರ ನಿಟ್ಟಿಸುತಲಾಗ ।
ಕ್ರಮದಿಂದಲಪ್ಪಿ ಮಸ್ತಕವನಾಘ್ರಾಣಿಸುತಲಾನಂದಕಂಬನಿಗಳ ॥
ವಿಮಲೋದಕಂಗಳಂ ಧರಣಿಯುಂ ಪ್ರಿಯಾಗೊಳವ ।
ಸುಮನಸತೆಯುಂ ಬೇಗ ತೋರ್ಪುದೆಂದಾತ್ಮೀಯ ।
ವಿಮಲ ಬುದ್ಧಿಯೊಳು ಸಂತೈಸಿದಳು ಕೌಸಲ್ಯೆಯಾನು ಸುಮಿತ್ರೆಯು ವಿನಯದಿ ॥ (11)
ಇಂತರಮನೆಯೊಳಮಿತಸಂತಸದೊಳಿರಲತ್ತ ।
ಮುಂತಕೈದುವ ರಾಮಚಂದ್ರಮನ ದಿವ್ಯರಥ ।
ಪಂಕ್ತಿಯಂ ಬಿಡದೆ ಬೆಂಬೊತ್ತಿ ಪೋಗುತ್ತಲಖಿಳಲೋಕವಮಾಪ್ರಿಯಗುಣಗಳ ॥
ಸಂತೆಯನ್ನುಚ್ಚರಿಸುತಡಿಗಡಿಗೆ ನುತಿಗೈವು।
ತಂತನಂತಸುಖಾಸ್ಪದಂಗಳಾಂತಂತಖಿಳ।
ಜಂತುಗಳನಿಚಯ ಪೋಪ್ಪುದ ಪೇಳ್ವೆನೇಂ ಭೂಮಿ ಬೆಸಲಾವ ಮಾಳ್ಕೆಯೊಳಗೆ॥ (12)
ಬರುವಖಿಳಪ್ರಜೆಯ ನೋಡುತ ರಾಮನಿಂತೆಂದ ।
ಭರತಗೀರಾಜ್ಯ ಪಾಲನೆಯ ನೇಮಿಸಿ ನಿಂದು ।
ಪೊರೆಯಲ್ಕೆದಿತ್ತ ಬರೆಬೆಸನ ಸದ್ಗುಣವಂತ ಚಿಂತಿತಾರ್ಥಪ್ರದಾತನು ॥
ನರನೊಳಗ್ಗಳನಾಕುಮಾರನೊಳ್ ಸಂಪ್ರಿಯವ ।
ನರಸಿ ಭಾವಿಸಲೆಲ್ಲರುಂ ಯಥೋಚಿತವಾಗಿ ।
ಕರುಣಿಸುವಮೃದುದಾಂತ ದಯಾವಂತನೀ ಪ್ರಜಾಪರಿಪಾಲನ ಸ್ವಾಂತನು ॥ (13)
ಯುವರಾಜನಾಗಿರ್ಪ ಯಾಕ್ತಸದ್ಗುಣಗಳಂ
ದವರವರ ವಿಧವರಿತು ಸಂರಕ್ಷಣಂ ಗೈವ ।
ಕುವರರೊಳಗೆಲ್ಲರಂ ಪ್ರಿಯಮಿಃಕ್ಕಟ್ಟ ನಿಟ್ಟಿಸಿದರುಭಯ ಲಾಭಲಭಿಪವು ॥
ಸುವಿವೇಕಮುಳ್ಳರೀ ಪ್ರಜೆ ಭೂಪನಾಜ್ಞೆಯಂ ॥
ಜವೆಯಂತೆ ಮೀರದನುವರ್ತಿಸುವರೆಂದಖಿಳ ।
ಭುವನದೊಳ್ಸತ್ಕೀರ್ತಿ ಧರ್ಮಾನುಸರಗಳವು ಕ್ಷಣದಿ ಕೈವಶ ಮಪ್ಪವು ॥ (14)
ಎಂದೆನುತ ವಿನಯೋಪಚಿತ ಮೃದುಲತರವಾಕ್ಯ ।
ದಿಂದಖಿಲಪ್ರಜೆಗಳಂ ಸಂತೈಸುತೈದುತಿರೆ ।
ಪಿಂದಿರುಗಲೊರ್ವರಿಗೆ ಮನಸಿಲ್ಲವಾದುದಾ ಸದ್ಗುಣಶ್ರೇಣಿಯೊಳಗೆ ॥
ಪೊಂದಿ ಪೊರಸೂಸದಿರೆ ಪರವಶತೆಯಿಂದಲಾ ।
ನಂದಾಶ್ರು ಕುಡಿವರಿವುತೆಲ್ಲರೈತರೆ ವಿಪ್ರ ।
ವೃಂದ ಮುತ್ತೈರದರರುಗಲತಿ ಶಕ್ಯಮಾಗದಿರಲುಸುರಿದರ್ಬಹುವಿಧದೊಳಿ ॥ ? (15)
ಆರಟ್ಟುಜಗಳ್ ಜಾತ್ಯಾಧಿಕಗಳೆನುಪದದಿ ।
ತೋರಲಘುಪದದಿಂ ಶತಾಂಗವುಂ ನಡೆಸದತಿ ।
ಘೋರಕಂಟಕಿತಪಂಥಾನ ದುರ್ಗಮವೆಮಗೆ ಬಾಲತಾರುಣ್ಯತತಿಗೆ ॥
ಆರಯ್ಯಲೀ ರಾಮ ಬ್ರಾಹ್ಮಣ್ಯನೆದರಿಂದ ।
ಭೂರಿಬ್ರಾಹ್ಮಣ್ಯಮನುಸರಿಸಿ ಬಪ್ಪುದು ಕೃಪೋ ।
ದಾರತೆಯಲೆಮ್ಮ ಪಾಲಿಪುದೆಂದು ಪ್ರಾರ್ಥಿಸಿದರಶ್ವಗಳನಾವಿಪ್ರರು । (16)

ಎನುತಮಿತ ವಿಪ್ರಸಂತತಿ ಪಿಂತೆ ಭೋರ್ವೆರೆವ ।
ದನುಕೇಳ ರಾಮ ರಥದಿಂದಿಳಿದು ಕಾಲ್ನಡೆಯ ।
ನನುಮತಿಸಿ ನಡೆವುತಿರಲನಿತರೊಳ್ವಪ್ರತತಿ ಜವದಿಂದಲೈದಿ ಮುಂದದಿ ।
ವನಜಾಕ್ಷರಾಮ ಲಾಲಿಪ್ಪುದೆಮ್ಮ ನುಡಿಯನೀಂ ।
ಮನುಜೇಶನತಿದಯಾವಂತನಾರ್ತನಸ್ವಾಂತ ।
ವಿನಯದಿಂದಖಿಳರಂ ರಕ್ಷಿಸುವ ನಿಶ್ಚಿಂತ ಸದ್ಗುಣನಿಶಾಂತನಲ್ತೆ ॥ (17)

ಫಲಿತ ಮಸ್ತಕರಾವು ತರುಣಜ್ಞಾನಾಧಿಕರು ।
ಕುಲವಂತರೆಲ್ಲ ಭವದೀಯ ಸದ್ಗುಣಗಳಂ ।
ಕಲಿತವಾಗುತ ನಿಳಯಗಳನುಳಿದು ಬಂದಿರ್ಪೆವೆಮ್ಮ ಬೆಗಲೇರಿ ಬಿಡದೆ ॥
ಸುಲಭಮಲ್ಲದ ಕ್ರತುಲಿಹಂ ಬರ್ಪ ಹಿಂಗಡೆಯ ।
ಚೆಲುವಶ್ವೇತಾತಪತ್ರಗಳ ವಿತಮಿದರಿಂದ ।
ಲಲಿತಸುಚ್ಛಾಯೆಗೈದಪೆವೆಂದು ಬಿನ್ನಪವ ಕೈಗೊಂಬುದೀಗಲೊಲಿದು ॥ (18)

ಭವದೀಯಗುಣರಜ್ಜುವೆಮ್ಮ ಬಂಧಿಸಿಸೆಳೆದ ।
ವವತಿರಸ್ಕರಿಸಲಳವಲ್ಲ ಸಂಗಡಬರ್ಪ ।
ರವಧರಿಸು ಸುಚರಿತ್ರಯಗ್ನ್ಯಹದೆಲಿಹರವರನುಳಿದು ಬರ್ಪುದನುಚಿತಂ ।
ನವನವಕಯಾಗ ಸಂತರ್ಪಣೆಯ ಫಲಗಳುಂ ।
ಭುವನಾಧಿಪತ್ಯ ಕೋಸುಗಕೈದಿ ವಿರಚಿಸಿದೆ ।
ವವಿರಳದೊಳದರಿಂದೆ ಪಿಂತಿರುಗಿ ಪಾಲಿಪ್ಪುದು ನಿಖಿಲಭೂದೇವತತಿಯ । (19)

ನಿಗಮೋದಿತ ವಿಧಿಗಳೆಲ್ಲ ಬಾಹುಜರಿಂದ ।
ಮಿಗೆ ಫಲಿತಮಪ್ಪುದದರಿಂದೆಮ್ಮ ಕರ್ಮಗಳ ।
ಸೊಗಯಿಸುವಸಫಲ ಗೈವೊಡೆ ಯೌವರಾಜ್ಯವುಂ - ಕೈಕೊಂಡುನಗರದೊಳಗೆ ॥
ಸೊಗಸಿಂದ ರಾಜ್ಯಪರಿಪಾಲನೆಂಗೈವುತಿರ ।
ಲಗಣಿತಾಧ್ವರಗಳಂ ಹರುಷದಿಂದಂ ಗೈದು ।
ಮಿಗೆ ಸುರರ ಸಂತೋಷಗೊಳಸುವೆವು ನಿನ್ನುಳಿದೊಡೆಂತು ಸುಖಕೈಸಾರ್ವುದು ॥

ತೊಳಲುತಿವೆ ಮೃಗ ಪಕ್ಷಿ ಕೀಟ ಸ್ಥಾವರಗಳುಂ । [(20)
ಬಳಲುತ ಪ್ರತಿಧ್ವನಿಗಳೆವುತಂ ಗುಣಗಣಗ ।
ಳೊಳುಮಗ್ನವೆಂದೆನಿಸಿ ಕ್ಲೇಶಗೊಳುತಿವೆ ಸರ್ವಭೂತಾನುಕಂಪಿಯಲ್ತೆ ॥
ಬಳಲಿಸದೆ ಜಂಗಮಾಜಂಗಮಗಳಂ ಕೃಪೆಯ ।
ಉಳಿದು ತೀರ್ಥ್ಯಂಗನೆಯ ಕರವಿಡಿದು ಗೋದ್ವಿಜರ ।
ಕುಲವ ರಕ್ಷಿಸವೇಳ್ಕುಮೆನುತ ನಾಲ್ದೆಸೆಯಳುಂ ಯಾಚಿಸಿದರಖಿಳ ಜನರು ॥ (21)

ಭೂದಿವಿಜನುಡಿ ಸತ್ಯಮೆನಿಸುವೊಡೆ ಸುಜ್ಞಾನ ।
ಬೋಧಿತದ ಧರ್ಮಮದನಾಳ್ದಾತ ನೀನಲ್ತೆ ।
ಭೇದಿಸಲಿನಿಸು ಜನವಾನಸಗಳಂ ಕೃಪಾದೃಷ್ಟಿಯಲಿ ನೋಳ್ಪುದೆನುತ ॥
ಮೋದದಿಂ ನಿಜಬಲಸಮೇತ ಪಡಿಬಲಕೆಂದು ।
ಹಾದಿಗಡ್ಡೈಸಿ ನಿಂದಂತೆ ಭೊರ್ಮೊರೆವುತವಿ ।
ನೋಡದಿಂ ಕಂಗೆಸೆಯೆ ಸೌಮಿತ್ರಿ ವೈದೇಹಿಯರೊಳೆಂದ ರಘುನಾಥನು ॥ (22)

ಪೊಂಬರಿದುಬರ್ಪ ಕೆಮ್ಮಿಗ್ಗಳಂ ಸಾಲ್ಗಳಂ।
ತುಂಬಿ ಬೆಂಬಿಡದೆ ಬಹನೊರೆಗಳಂ ತೆರೆಗಳಂ।
ಡೊಂಬಿಗೈದಲ್ಲಲ್ಲಿದನಿಗೈವ ಕಾರಂಡಚಕ್ರದಿಂ ನಕ್ರದಿಂದ॥
ಶಂಬರಾಹಿತ ಶಿಲೀಮುಖ ನಿಲಯಮೆನೆ ವೇಣಿ।
ಸಂಭ್ರಮಿತ ಮಾಗಿ ತೋರುವ್ರುದಿಂದು ಸುಖವಸತಿ।
ಗೊಂಬನೆನುತಾಜ್ಞಾಪಿಸಲ್ಕಾ ಸುಮಂತ್ರ ನಿಜರಥದಶ್ವಗಳನು ಪಿಡಿದು॥ (23)

ಸೂರಿಯನ ರಥದಶ್ವಮೈದೆ ಮೀರುವಿನತ್ತ।
ಪಾರುವವು ನಮಿಸುವ್ರೊಡೆ ಶುಚಿಗೈದು ಕಳುಪುವುದು
ದಾರ ಜಲದಿಂದ ಮೈದೊಳೆದು ತಣ್ಣೀರ್ಗುಡಿಸಿ ಕರಗಳಂ ನೀವರಿಸುತ।
ತೀರದೊಳ್ಚರಿಪಂತೆ ರಶ್ಮಿಗಳ ಬಲಿದು ಸಂ।
ಚಾರಗೈಸಿದನಿತ್ತ ರಘುವೀರ ಲಕ್ಷ್ಮಣನ।
ಚಾರು ವಚನದಿ ಕರವುತಿಂತೆಂದ ನೆಲೆವೆತ್ತ ಪೂರ್ವದಿನಮಿಂದಿನಿರುಳು॥ (24)

ವನವಾಸಕಿದು ಮೊದಲ್ದಿನವಾದ ಕಾರಣಂ।
ಮನಮದುತ್ಕಂಠತೆಯೊಳಿದೆ ನೋಡಾಕಾನನಂ।
ಜನಿತದುಃಖೋನ್ಮುಖದಿ ಬರುತಿವೆ ನಿಲಾಯಕಂ ಮೃಗಪಕ್ಷಿಗಳ್ಬೇಗದಿ।
ಜನಶೂನ್ಯ ಸ್ತ್ರೀ ಬಾಲರಮಿತ ಮಾಯೋಧ್ಯಮು।
ಜ್ಜನನಿ ಜನಕಾದಿಗಳ್ನೆನನೆನೆದು ಮರುಗುತಿಹ।
ರನುಪದದಿ ಭರತ ಧಾರ್ಮಿಕ ಶಿಖಾಮಣಿಯವರನಾಶ್ವಾಸಗೈವ ಬಿಡದೆ॥ (25)

ಇಂದಿನಿರುಳಾವು ಮರೆದುಮಲಗಲನುಚಿತ ಭಯಾ।
ಕ್ರಂದಮೀ ಸ್ಥಳ ಮೆಚ್ಚಗಿಂದರಲ್ವೇಳ್ಕುಮಿಂ।
ತೆಂದು ಸೌಮಿತ್ರಿಯೊಳ್ಪೇಳೆ ಸೂತನೊಳೆಂದ ರಾಮನತಿವಿನಯದಿಂದ॥
ಸಂದೆಗವನುಳಿದು ರಥವಾಜಿಗಳ ನೆಚ್ಚರೊ।
ಳೊಪ್ಪಂದಿ ರಕ್ಷಿಸುವುದೀದಿನ ಮುದಕದಾಹಾರ।
ದಿಂದ ಕಳೆದಪೆವೆಂದು ಪ್ರಿಯದಿಪಲ್ಲವಶಯ್ಯೆಕೈದಿದಂ ರಘುನಾಥನು॥ (26)

ಜಗದೀಶನಾದೊಡಂ ಪ್ರಾರಬ್ಧಮಂ ಮೀರೆ।
ಜಗತಿಗತಿದುಷ್ಕರಮೆನುತ್ತ ತೋರಿಸುವಂತೆ।
ಸೊಗಯಿಸುವ ಮೃದುಶಯ್ಯೆಮುಳಿದು ಯೆಲೆವಾಸಿಕೆಯೊಳೊರಗಿ ನೀರಾಹಾರಮಂ॥
ಮಿಗೆಕೊಂಡನೇನೆಂಬೆನುಳಿದಮಾನವಜನರ।
ಬಗೆಯ ವಿಧಿಕೃತವ ಮೀರಲ್ಕಕ್ಕುಮೇಯೆನುತ।
ಲೊಗುಮಿಗೆಯ ಮರುಕದಿಂ ಸೂತ ಸೌಮಿತ್ರಿಗಳಕ್ಕಯಿದ್ದರ್ದರೆಡಬಲದೊಳು॥ (27)

ಉದಪಾನದಿಂದ ಕೆಸಲಯತಳ್ಪದೊಳ್ತನ್ನ।
ಸುದತಿಸಹ ಶ್ರೀರಾಮ ನೊಪ್ಪಿರಲ್ ಲಕ್ಷ್ಮಣಂ।
ಹೃದಯದನುತಾಪದಿಂ ಸೂತನೊಡನೆಂತೆಂದನೀರಾಜಮೌಳಿಗಿನಿತು॥
ಕದಲಿ ಕೈಕಾಮಾತದೊಳಾಯ್ತೆಂದು ಧಿಕ್ಕರಿಸಿ।
ಸದಯರಾಘವನ ಸದ್ಗುಣಗಳಂ ಪೊಗಳುತ್ತ।
ವಿಧುವಸ್ತಮಿಸುವನ್ನಮತಿ ಜಾಗ್ರತೆಯೊಳಿರ್ದರಂದಿನಿರುಳೀ ವೇಳ್ಪೆನು॥ (28)

ಅನಿತರೊಳು ರಾಮಗೆಚ್ಚರುತೋರಲೆಚ್ಚೆತ್ತು ।
ಯಿನನುದಿಪದೆಸೆಯು ನಿಟ್ಟಿಸಿ ಕರೆದು ಲಕ್ಷ್ಮಣನ ।
ವಿನಯದಿಂದೊರೆದನೆಮ್ಮೊಡನೆ ಸ್ತ್ರೀಪುಂಸಾದಿಸರ್ವಜನಮೂರನುಳಿದು ॥
ಬನಕೆ ಬಂದಲ್ಲಲ್ಲಿ ಘನತುಹಿನಬಾಧೆಯೊಳು ।
ಕನಲುತೆದೆಗೆದೆಗೊರಸಿಕೊಂಡಿರ್ಪುದಂ ನೋಡು ।
ಜನಪ ಜನನಿಯರಿಂದಿಗಂ ನೆನೆದು ಶೋಕಿಸುವರತುಲಸಂತಾಪದಿಂದೆ ॥ (29)

ಪಾರವಿಲ್ಲದದುಃಖಮಡಸಿ ಪಿತೃಮಾತೃಗ ।
ಳ್ಘೋರಸಂಕ್ಲೇಶದಿಂ ಕಂಬನಿಗಳಂ ಕರೆದು ।
ದಾರಕಾರ್ಶ್ಯತೆಯಾಂತು ಜಡರಂಧರಂತಿರ್ಪರಾಗಳುಂ ಧರ್ಮವಿಡಿದು ॥
ಪಾರಮಾರ್ಥಿಕ ನುಡಿಯಲುಪಚರಿಸುವಂ ಭರತ ।
ಕಾರುಣ್ಯಮುಳ್ಳಾತ ನುದಿಸೆ ಭಾಸ್ಕರ ಜನರ ।
ಪಾರಕೋಟಲೆ ಗೊಳ್ಪರದರಿಂದಲಾವು ತೆರಳ್ವೇಳ್ಕೈಸೆ ಮುದದಿ ತನಯ ॥ (30)

ಎಂದಾಜ್ಞೆಯಂ ಕೊಡಲು ಸೌಮಿತ್ರಿಯಿದು ಸಹಜ ।
ಮೆಂದಾ ಸುಮಂತ್ರನಂ ಕರೆದಣ್ಣ ಪೇಳ್ದಂತೆ ।
ಕುಂದದರುಪಲ್ ಪೋಗಲೈದಿರಥದಶ್ವಗಳ ಪೂಡಿ ಸಂತೈಸಿ ಬಂದು ॥
ಇಂದೀವರಾಕ್ಷ ರಾಮಂಗರುಪೆ ನಸುನಗುತ ।
ಲಂದು ಸೌಮಿತ್ರಿ ವೈದೇಹಿಸಹ ರಥವೇರಿ ।
ಚಂದದಿಂ ತಮಸಾತರಂಗಿಣಿಯನುತ್ತರಿಸಿ ಪಥವಿಡಿದು ರಘುವೀರನು ॥ (31)

ಜನರಟ್ಟುಳಿಯನುಳಿಯೆ ರಥಮುದಙ್ಮುಖವಾಗಿ ।
ಸ್ವನಗೆಯ್ಯದೈದಿ ಪಿಂದಿರುಗಿ ಮತ್ತಾಮುಖವ ।
ನನುಸರಿಸಲೆಂದೊರೆಯಲಾಸೂತನಶ್ವಗಳನಪ್ಪಳಿಸಲ್ಮುದದೊಳು ॥
ಅನಿಲವೇಗದೊಳೈದಲಪರಿಮಿತ ಯೋಜನಗ ।
ಳನು ಕಾಣ್ಬರತುಲ ದುರ್ಲಭಮಾಯಿತಾಕ್ಷಣದೊ ।
ಳನುಜನೊಡನತಿಹಾಸಮೆಸಗುತಾರಾಮಮಂ ನಿಟ್ಟಿಸುತ ರಾಮ ನಡೆದಂ ॥ (32)

ಉದಿಸೆ ಭಾಸ್ಕರನನಿತರೊಳ್ ಲೋಕಮೆಚ್ಚೆತ್ತು ।
ಸದಯರಾಮನ ಕಾಣದಲ್ಲಲ್ಲಿ ನೋಡಿ ನಿಜ ।
ವದನಂಗಳಾರಲತಿಶೋಕದಿಂ ಭೋರ್ಗರೆದವರಖಿಲ ದಿಕ್ತಟಮೊದರ್ವೊಲು ॥
ಪುದಿದ ನಿದ್ರೆಯು ತಮಸ್ಸೆಂಬ ಸಂಕ್ಲೇಶದುರು ।
ಮದಗೊಳಿಸಿತೆಮ್ಮ ದುರ್ಬುದ್ಧಿಯಂ ಸುಡಲೆಂದು ।
ಗದುಗದಸ್ವನದಿಂದ ಮರುಗುತ್ತ ಗುಣಗಳನ್ನುಗ್ಘಡಿಸಲನುಗೈದರು ॥ (33)

ಎಲ್ಲಿ ಪೋದಂ ಸರ್ವಜೀವಾನುಕಂಪಿ ಮ ।
ತ್ತೆಲ್ಲಿಗೈದಿದ ಪೃಥೂರಸ್ಕಂ ಮಹಾಭುಜಂ ।
ಎಲ್ಲಿಗೈದಿದ ಭಕ್ತಜನರನುಳಿದೇಕಾಂತದೇಶಮಾವೆಡೆಯೊಳಹುದು ॥
ಎಲ್ಲಜನರಂ ಪುತ್ರರಂತೆ ತಿಳಿದನವರತ ।
ಸಲ್ಲಾಪ ಸೌಖ್ಯದಿಂ ಪಾಲಿಸುವ ರಘುವೀರ ।
ನೆಲ್ಲಿ ಪೋದನೆನುತ್ತ ಕಾನನದೊಳರಸುತ್ತ ಮರುಗಿದರ್ನಿಖಿಳ ಜನರು ॥ (34)

ಸಿರಿಯೆ ನಿಧನಂ ಮಹಾಪ್ರಸ್ಥಾನಭದ್ರಕರ ।
ಭರಿತಮಾಗಿದೆ ಶುಷ್ಕಕಾಷ್ಠಂಗಳಪರಿಮಿತ ।
ತ್ವರಿತದಿಂ ಚಿತೆಗೈದು ಕ್ರತುಭುಜನ ಸಂಸ್ಥಾಪನಂಗೈದು ಸರ್ವಜನರು ॥
ಭರದಲುರಿಯಂ ಪೊಕ್ಕ ತೆರನೆಸುತ ಶೋಕಸಂ ।
ಭರಿತ ಬಹುವಿಧಪ್ರಲಾಪಂಗೈವಜನರನೇ ।
ನೊರೆವೆ ಪೆತ್ತವರ ಸಂಕಟವ ಬಣ್ಣಿಪರೆಂತು ಮಾನವರಿಗಳವಕ್ಕುಮೇ ॥ (35)

ಎಂದು ವಿವಿಧ ಪ್ರಲಾಪದಿಂದಖಿಳಜನ ಹಿಂದು ।
ಮುಂದರಿಯದುನ್ಮತ್ತದತುಲಪ್ರಲಾಪಗಳ ।
ಕುಂದದೆಸಗುತ ಶತಾಂಗಂ ಪೋದ ಮಾರ್ಗದೊಳ್ ಪೋಗಿ ಪಿಂದಿರುಗಿ ಬಳಲಿ ॥
ಕಂದಿದಾನನದಿಂದ ತಮ್ಮ ತಾವು ಧಿಕ್ಕರಿಸು ।
ತೊಂದನೆಣಿಸದೆ ಮೃತೋಪಮರಾಗಿ ನಗರಕಂ ।
ಬಂದರಂದಿನದಿನದ ಕ್ಲೇಶಮಂ ಬಣ್ಣಿಪೊಡೆ ಫಣಿರಾಜಗಂ ಸಾಧ್ಯಮೆ ॥ (36)

ಶಶಿಯಿಲ್ಲದಾಗಸಂ ನೀರುಳದ ಕಾಸಾರ ।
ದೆಸಕಮಂ ತಾಳ್ದ ನಗರಿಯು ಪೊಕ್ಕು ಸರ್ವಜನ ।
ಪೊಸತೆನಿಪ ಗೃಹರತ್ನ ಸ್ತ್ರೀಬಾಲರಂ ನೋಡದಲ್ಲಲ್ಲಿ ದುಗುಡದಿಂದೆ ॥
ಮಿಸುಪ ಕರುವಣೆಗಳ ವಿಪಣಿವೀಥಿಗಳಲ್ಲಿ ।
ದೆಸೆದೆಸೆಯು ನಿಟ್ಟುಸುತೆ ರಾಘವನ ಗುಣಗಳಂ ।
ಪಸರಿಸುತ ಪಲುಬುತಿರಲನಿತರೊಳಗೈತಂದ ವಾಮದೇವಂ ಮುದದೊಳು ॥ (37)

ನೋಡುತಾ ವಿಪ್ರಸಭೆಯಂ ಮಿಸುಪ ಹಾಸದಿಂ ।
ಕೂಡಿರುವ ಮೃದುನುಡಿಗಳಂದೆಂದ ದುಗುಡದೊಳ ।
ಗಾಡಿರುವಿರಖಿಳಾಗಮಜ್ಞರುಂ ಚೋದ್ಯಮಹುದೇನು ಮಾನಸಕೇಗಳ್ ।
ಆಡವೇಳ್ಕುಮೆನುತ್ತಲೆಸೆ ಸಭಾಸದರೆಲ್ಲ ।
ನೋಡಿ ಋಷಿಗಂ ಪೇಳ್ದರೈಯ್ಯ ಶ್ರೀರಾಮನೀ ।
ನಾಡುಳದು ಬನಕೈದಲೆಮಗಾದುದತಿಕ್ಲೇಶಮೆನಲಾಗ ಯತಿ ನುಡಿದನು ॥(38)

ಪರತರ ಪರಾತ್ಪರಂ ಪಾವನಕೆ ಪಾವನಂ ।
ನಿರತಿಶಯನಿರಘ ನಿತ್ಯಾನಂದ ನಿರ್ಲೇಪ ।
ಪರಮಕಾರುಣಿಕ ಪರಬೊಮ್ಮನೀ ಲೋಕಮಂ ಪೊರೆವೊಡೆ ಪ್ರತಿಜ್ಞೆಗೈದು ॥
ಧರಣಿಯೊಳಗವತರಿಸಿ ದುರುಳರಂ ಸಂಹರಿಸಿ ।
ನಿರುತ ಭಜಿಸುವರಿಷ್ಟಮನ್ನೀಯಲೋಸುಗಂ ।
ನರನೆನಿಸಿ ಸಂಚರಿಪನಾಮಹಾಮಹಿಮೆಯಂ ತಿಳದನಿತ ವಿಸ್ತರಿಪೆನು ॥ (39)

ಪಿಂತೆ ತಮನೆಂಬಸುರ ದುರ್ಮೇಧೆಯಿಂ ವೇದ ।
ಸಂತತಿಗಳಂ ಕಳ್ದು ನೀರಧಿಯೊಳಂ ಪುಗಲ್ ।
ಚಿಂತಿಸುತಮನುಮತಿಸಿ ಪ್ರಾರ್ಥಿಸಲ್ಕಾತನಿಗೆ ಮೀನರೂಪವನೆ ತಾಳ್ದು ।
ಕುಂತಿಲ್ಲದಲೆ ಪ್ರಸನ್ನತೆ ವೆತ್ತು ದಾನವನ ।
ತಾಂ ತಲೆಯ ತರಿದು ನಿಗಮಂಗಳಂ ಕೈಗಿತ್ತು ।
ಸಂತೋಷಗೊಳಿಸಿದಂ ಬ್ರಹ್ಮಾದಿಸುರರೆಲ್ಲ ಮಣಿದು ಭಜಿಸುವಂತೆ ॥ (40)

ಮರಣಬಾಧೆಯು ನೀಗುತಮರತ್ವಮಂ ಪಡೆಯೆ ।
ಗುರುವಿಷಸುಮತಿಯಿಂದ ಗಿರಿಯಾಸುರದಧಿಯೊಳಿಟ್ಟು ।
ಉರಗನಂ ನೇಣ್ಗೈದು ಕಡೆವುತಲೆ ಕೈಬಿಡಲ್ ಶೈಲ ಪಾತಾಳಕಿಳಿಯೆ ॥
ಪರಮಕೃಪೆಯಿಂ ಕಮಠನಾಗಿ ಬೆನ್ನೊಳ್ ಪೊತ್ತು ।
ಕರದಮೃತವನ್ನೆರೆದು ತಣಿದಸುರಸಂತತಿಯು ।
ಪೊರೆದ ಬಿಡುಗಣ್ಣವರ ನಾಮಹಾಮಹಿಮನೀ ರಾಮಚಂದ್ರಂ ನಿಜ ಕಣಾ ॥ (41)
ಸೊಕ್ಕಿದತಿಬಲದಿಂದ ಭೂಮಿಯಂ ಕಂಕುಳೊಳ ।
ಗಿಕ್ಕಿ ಬಲಿ ಸದ್ಮಕೈದಿದ ಹೇಮಲೋಚನನ ।
ಕುಕ್ಕಿರಿಯಾಲೋಸಗಂ ಕ್ರೋಡರೂಪವನಾಂತು ಕಡಿದಿಟ್ಟು ದೈತೇಯನ ॥
ಸೊಕ್ಕ ದಾಡೆಯ ಕೊನೆಯಲೀ ತಿರೆಯನಮರತತಿ ।
ಯುಕ್ಕುವಾನಂದದಿಂ ನಿಗಮಾಗಮಂಗಳಿಗೆ ।
ಸಿಕ್ಕದತಿಶಯನೆಂದು ನುತಿಗೈವ್ರೊಲೆಸಗಿದವ ರಘುವೀರನೀತನು ಕಣಾ ॥ (42)
ಅಗಣಿತದ ತಪದಿಂದಲಾರ್ಜಿಸಿದ ಬಾಹುಬಲ ।
ದೊಗುಮಿಗೆಯ ಸತ್ವದಿಂದಖಿಳದೇವತೆಗಳಂ ।
ಜಗತಿಯೊಳಗಿಲ್ಲೆನಿಸಿ ಮುಮ್ಮೂರ್ತಿಗಳ ತಾತ ತಾನೆಂದು ವೈರಗೆಯ್ಯೆ ॥
ಮುಗುವು ಕರೆಯಲ್ ಕೂಭದಿಂದೊಡೆದು ದಾನವನ ।
ಬಗಿದಿಟ್ಟು ನಿಜಮಹಿಮೆಯಂ ತೋರ್ದ ಕರುಣಾಳು ।
ನಿಗಮಗೋಚರ ನೃಕೇಸರಿ ಜಗತ್ಪೂಜ್ಯನೀ ರಾಮಚಂದ್ರಂ ಕಣಾ ॥ (43)
ಸೆಳೆದು ಸುರರಾಜನೈಶ್ವರ್ಯಮಂ ದೇವತೆಗ ।
ಳೊಳಗೊರ್ವರಿಲ್ಲದಂ ತಟ್ಟಿಬಲಿಯುಪಟಳ ।
ಕ್ಕಳುಕಿ ಸುರರೈತಂದು ಪ್ರಾರ್ಥಿಸಲ್ಕಾ ವಿಪ್ರನುತಿಯಿಂದ ಭೂತಳದೊಳು ॥
ತಳೆದು ವಾಮನರೂಪಿನಿಂದಧ್ವರಕ್ಕೈದಿ ।
ಯಿಳೆಯ ಮೂರಡಿಯ ಯಾಚಿಸಿ ತ್ರಿವಿಕ್ರಮನಾಗಿ ।
ತುಳಿದು ದನುಜನ ಸಿರಿಯನಣ್ಣಗಿತ್ತವನಾತ ನೀತ ರಘುರಾಮನಲ್ತೆ ॥ (44)
ಭೂರಿವಿಕ್ರಮದಿಂದ ಬಲಿದು ಕೃತವೀರ್ಯಸುತ ।
ಪಾರುವನ ಘಾತಿಸಲ್ ತಣುಘೋರಶಕ್ತಿಯು ಕು ।
ಠಾರಮಂ ಪಿಡಿದು ಕ್ಷತ್ರಿಯಕುಲವ ಮೂರೇಳುಸೂಳಲರಿದರಿದು ಬಳಿಕ ॥
ತೋರರಕ್ತಪ್ರವಾಹದಿ ತರ್ಪಣಂ ಗೈದು ।
ಕಾರುಣ್ಯದಿಂದ ನೆಲನಂ ದ್ವಿಜರಿಗಿತ್ತನಾ ।
ದಾರ ಭೃಗುರಾಮ ನೀ ರಘುವಂಶಸಂಭೂತನಲ್ತೆ ನೀವರಿದು ನೋಡೆ ॥ (45)
ದುರುಳ ದಶಶಿರನುರುಬೆಗಾರದಮರರ ವೃಂದ ।
ಸರಸಿಜಾಸನ ಮುಖ್ಯರೆಲ್ಲ ಬಿನ್ನಪಗೆಯ್ಯೆ ।
ಧರಿಸಿ ಮನುಜಾಕೃತಿಯ ದಶರಥನೊಳವತರಿಸಿ ಪೊರೆದು ಮುನಿವರನ ಕ್ರತುವ ॥
ಹರಚಾಪಮಂ ಮುರಿದು ಧರಣಿಜೆಯ ಕರವಿಡಿದು ।
ತುರಗೇಶನಂದನೆಯ ಮತವಿಡಿದು ಬನಕೈದಿ ।
ಸುರರಿಷ್ಟಮಂ ಸಲಿಸಲೆಂದು ಸಂಚರಗೈವ ಕಪಟ ಮಾನುಷವೇಷದಿ ॥ (46)

ಗತಶೋಕ ಮೋಹನಿರ್ಲೇಪ ಚೇತಸರೂಪ ।
ಗತಿಶಯಂ ಕುಂದೆಂಬುದುಂಟೆ ನಿಜಮಾಯೆಯಿಂ ।
ನ್ನತಿಶಯದಿ ಬಲಿದು ಜನರಂ ಮೋಹಕಂಗೊಳಿಸಿ ಚರಿಸುತಿಹನಲ್ಲದುಳಿದ ॥
ರತಿಯುಂಟೆ ತಿಳಿದು ತಿಳಿಯದ ತೆರದಿ ಕ್ಲೇಶಗೊಳು ।
ವತಿಕಷ್ಟಮನುಚಿತಂ ನೆನೆದವುತ್ರದಿ ಪಾಪ ।
ತತಿಗಳೋಡುವವಾ ಮಹಾಪುರುಷಗೆಲ್ಲಿಯದು ಸಂಗ ವಿಷಯಂಗಳೊಳಗೆ ॥ (47)

ಎಂದೊರೆದ ನಿಜತತ್ವ ಬೋಧೆಯಿಂದಖಿಳಜನ ।
ಬಂಧುರದ ಹರ್ಷವಂ ತಾಳ್ದು ರಘುವೀರನಂ ।
ಇಂದಿರಾಪತಿಯೆಂದು ಭಾವಿಸುತ ಶುಭನಾಮಧಾಮವಂ ಧ್ಯಾನಿಸುತಲಿ ।
ಮಂದಿರಂಗಳಿಗೈದಿ ಸುಖಮಿರ್ದರಿತ್ತ ರಘು ।
ನಂದನಂ ವೈದೇಹಿಲಕ್ಷ್ಮಣರಕೂಡೆಗೊಂಡು ।
ನಂದನಂಗಳ ವಿಲಾಸಗಳ ನಿಟ್ಟಿಸುತ್ತೈದೆ ನಡೆದ ಗೋಮತಿಯ ತಟಕೆ ॥ (48)

ಶುಭವಾರಿಯುತ ದಿವ್ಯನದಿಯ ನೋಡುತ್ತಲಮಿತ ।
ವಿಭವದಿಂದುತ್ತರಿಸಿ ಪಂಥಾನವಿಡಿದು ಬಂ ।
ದಭಪಮಸ್ತಕಮಾಲೆ ಯೆನಿಪ ಭಾಗೀರಥಿಯ ಕಂಡು ಹರ್ಷವನು ತಳೆದು ॥
ಇಭವಿಶಾಲ್ಗಳಕಗಳ ಸುಳಿವ ಸುಳಿದೆರೆಗಳಂ ।
ನಭಕೇಳ್ವ ಪನಿಗಳಂ ಕಾಣುತ್ತ ದನಿಗೈವ ।
ರಭಸಂಗಳೊಳುಮೆಗಂ ನಸುನಗುತ ಶ್ರೀರಾಮ ಪುರದರಸನೊಪ್ಪಿರ್ದನು ॥ (49)

(ಸಂಧಿ 14, ಪದ 645.)

## ಹದಿನೈದನೆಯ ಸಂಧಿ.

ಸೂಚನೆ ॥ ಹಲವು ವಿಧದೊಳ್ ಕೇಳಿಕೊಂಡಾ ಸುಮಂತ್ರಂಗೆ ।
ತಳುವದಧಿಕಸ್ನೇಹಭಾವದಿಂ ನಿಜಭಕ್ತಿ ।
ನೆಲೆಯನೇಕಾಂತದೊಳ್ ತಿಳುಪಿ ಸಂತೈಸಿದಂ ಶ್ರೀರಾಮಚಂದ್ರನೊಲಿದು ॥

ಗಿರಿರಾಜತನುಜೆ ಕೇಳ್ ರಾಘವಂ ಪಥವಿಡಿದು ।
ಬರುತ ಪಿಂದಿರುಗಿ ನಿಜನಗರಿಯಂ ನಿಟ್ಟಿಸ ತೆ ।
ಮರುಕದಿಂದೆಂದನೆಲೆ ಸೂತ ಮಗುಳೆಂದಾವು ಬಂದು ಸಂತಸದಿಂದಲೆ ॥
ಸರಯೂತಟದ ವನದಿ ಮೃಗಯಾವಿಹಾರಮಂ ।
ವಿರಚಿಪೆವು ಸರ್ವಜನಸಂತೋಷಗೊಳುವಂತೆ ।
ಪರಿದವೆವು ಮನದ ಸಂಕ್ಲೇಶಮೆಂದರುಪುತ್ತ ಕಳೆದ ಕೋಸಲಭೂಮಿಯ ॥ (1)

ಎನುತಯೋಧ್ಯಾಮುಖದಿ ನಿಂದು ಕರಗಳ ಮುಗಿದು ।
ಮನುವಂಶದಧಿದೇವಿ ತಾಯೆ ನಗರೀಮಣಿಯೆ ।
ವನಕಪ್ಪಣೆಯ ಕೇಳ್ವೆ ಪಿತೃಋಣೋತ್ತಾರಣಂಗೈದು ಬಂದಪೆನು ಮಗುಳೆ ॥
ಎನುತಶ್ರುಪೂರಲೋಚನಗಳಂ ದಿಟ್ಟಿಸುತೆ ।
ಜನಪದವನನುಕಂಪದಿಂದಲತ್ತಿದೀನತೆಯ ।
ನನುಕರಿಸಿದಂತೆಲ್ಲಮುಪಚರಿಸುತ್ತೈದಿದಂ ಗಂಗಾತಟಕೆ ಮೋದದಿ ॥ (2)

ಕಂಡನುಂದಾಧಿಕ್ಯವೆರೆದು ರಘುನಂದನಂ ।
ಖಂಡೇಂದುಮೌಳಿಯ ಶಿರೋರತ್ನಕಂ ನಮಿಸಿ ।
ಗಂಡುಗಲಿಯಂ ಮೃದುಲ ನುಡಿಗಳಿಂ ನುತಿಗೈದು ದಿವ್ಯಕಾನನವ ನೋಡಿ ॥
ಮಿಂಡೆದ್ದ ಕೋಕಿಲಾರಾವ ಶುಕಕಲಕಲವ ।
ತಂಡತಂಡದಿ ಕೇಳುತತಿಹರುಷವೇಗಮಂ ।
ಕೊಂಡು ಬರಲಾಸೂತನಂ ಪೇಳ್ದಂ ರಥವ ನಿಲಿಸೆಂದು ಮುದದಿ ॥ (3)
ಸುರನದಿಯ ತೀರದೊಳ್ ತೋರುವೀ ಬನದೊಳಗೆ ।
ಇರುಳಿದ್ದು ಭಾಸ್ಕರೋದಯಮಾದ ಬಳಿಕ ಮುಂ ।
ದರುಗುವೆವೆನುತ್ತಿಳಿದು ಯಿಂಗುದೀಪಾದಪದ ಕ್ರೋಡಮಂ ಸಾರಿ ಕುಳಿತು ॥
ಕರುಣಾರಸೋತ್ಕಲಿತ ಮೃದುವಾಣಿಯಿಂದಮೃತ ।
ಮೊರವಂತೆ ಪ್ರೀತಿಯಿಂದಾಸುಮಂತ್ರನ ಕರೆದು ।
ಗುರುತರಪ್ರೇಮದಿಂದೊರೆದ ರಘುನಂದನಂ ಸುಮನಸಾನಂದಮೆನಲು ॥ (4)
ಧೀಮಂತ ಕೇಳ್ ನಗರದೊಳ್ ತಂದೆ ತಾಯಿಗಳ್ ।
ಮಾಮಕೇನವ್ಯಸನದತುಳಶೋಕಾಕುಲಿತ ।
ಭ್ರಾಮಕದಿ ತೊಳಲುತಿಹರವರಿಂದ ನೀಂ ಪೋಗಿ ತಿಳುಪು ಶಿವತಾತಿಗಳನು ॥
ಪ್ರೇಮಾಸ್ಪದಸ್ವಾಂತರೆನಿಸವೇಳ್ಕುಮೆನುತ್ತ ।
ರಾಮನಾಜ್ಞಾಪಿಸಲ್ಕಾ ಸೂತ ಶೋಕನಿ ।
ಸ್ಸೀಮನಾಗುತ ಮರುಗಿ ಗದ್ಗದಸ್ವರದಿಂದ ಮಗುಳೆ ವಿಜ್ಞಾಪಿಸಿದನು ॥ (5)
ದೇವ ನಗರಿಗೆ ಪೋಪುದೆಂದು ನೇಮಿಸಿದೊಡಾ ।
ನೇವೇಳ್ವೆ ಚರಣಮಿರ್ದೆಡೆ ಯಯೋಧ್ಯಾನಾಮ ।
ಪಾವನಸುಪತ್ತನಂ ಸರ್ವಜನರಿರ್ದೊಡಂ ಶೂನ್ಯ ನೀನುಳಿದ ತಾಣಂ ।
ಜೀವವಿಲ್ಲದ ತನುವನನುಸರಿಸಲೈದುವನ ।
ದಾವಪುರುಷನಿರ್ಪ ಭಾರ್ಗವಪ್ರಭೃತಿಮುನಿ ।
ಪಾವನತಪಾದದಿಂದಾಕಾರ ಮೂರ್ತಿಯಂ ಕಾಣದಾನೆಂತಿರ್ಪೆನು ॥ (6)
ಸನಕಾದಿ ಮುನಿಗಳನವರತ ಮಾಡುವ ಧ್ಯಾನ ।
ಕೆನಿಸಾದೊಡಂ ಸಿಲ್ಕದೀ ಚರಣ ಪಲ್ಲವದ ।
ಸನಿಹದಲ್ಲಿರುವ ಪರಮಾನಂದಮಂ ಬಿಟ್ಟು ಮಗುಳೆ ಕಾರ್ಯಾಂತರಗಳ ॥
ನೆನೆದವರೆ ಧೀಯುತರು ಕರಗತದ ನಿಧಿಯುಳಿದು ।
ಮನೆಮನೆಯ ಭಿಕ್ಷಾಟನಂಗೈವರೇ ದೇವ ।
ರೆನಗಮಾಜ್ಞಾಪಿಸಿದ ನೇಮಕರ್ಹನೆ ಮೀರುವೊಡೆ ಬೊಮ್ಮನಿಗೆ ಸಾಧ್ಯಮೇ ॥ (7)
ಭರತ ಭವದೀಯ ಭಕ್ತಾಗ್ರಗಣ್ಯಂ ರಾಜ್ಯ ।
ಸಿರಿಯ ಬಯಸುವನಲ್ಲ ಪಿತೃಮಾತೃ ಧನಧಾನ್ಯ ।
ಧೊರೆದೇವತೆಯ ನಿಮ್ಮ ಪದಸರೋಜಗಳೆಂದು ಭಾವಿಸಿದನಲ್ಲದಿಲ್ಲ ॥
ಅರಿತರಿಯದಾನುಸಿರ್ವ ಭಾಷೆ ಪುಸಿದಿಹುದೆಂಬ ।
ಪರಿಯೆಂಬುದಂ ಚಿತ್ತಮರಿಯಿಪ್ಪುದೀಜಗ ।
ದ್ಭರಿತಮೂರುತಿ ಬುದ್ಧಿಸಾಕ್ಷಿಗಾಂ ಬಿನ್ನವಿಪ್ಪುದೆಂತು ಕರುಣಾವನಧಿಯೇ ॥ (8)

ಇಂತಮಿತ ಸಂಕ್ಲೇಶದಿಂದ ಕಲುಷಿತನಾಗಿ ।
ಮುಂತಿರ್ದ ಸೂತನಂ ಸಂತೈಸಿ ಕಳುಪಲ ।
ತ್ಯಂತರಂಗಸ್ನೇಹದಿಂದ ರಘುನಂದನಂ ನುಡಿದಂ ಸುಮಂತ್ರನೊಡನೆ ॥
ಚಿಂತೆಯಿಂದೇಂ ಪ್ರಯೋಜನ ನಿನಗೆ ದೇಹಗಳ ।
ಪಂತಿದೆ ವಿಯೋಗ ಸಂಯೋಗ ಮಲ್ಲದೆ ವಸ್ತು ।
ವಾಂತಿರನು ಹರ್ಷದೈನ್ಯಗಳ ಸೋಂಕಿರುವಾತನತಿ ಮೂಢ ಲೋಕದೊಳಗೆ ॥ (9)

ನಿಸ್ಸಂಗನನುಭವನವ್ಯಯನಾದನೀದೇಹ ।
ದಾಸ್ಯವಾಯಿಗಳುಪಾಸಕರ ಧ್ಯಾನಾರ್ಥಕಂ ।
ತಸ್ಸಯ ಸುಕಲ್ಪಿತ ಮದಲ್ತೆ ವಸ್ತುತಮಲ್ಲ ಸಲೆಕೃತ್ರಿಮದ ತನುಗಳ ॥
ಉಸ್ಸವದೊಳನುದಿನಂ ಧ್ಯಾನಿಸಲ್ ನಿಜಭಕ್ತಿ ।
ನಿಸ್ಸೀಮ ಮೆರೆಲುದಿಸಲದರ ದೆಸೆಯಿಂ ಶೋಕ ।
ದುಸ್ಸಹಂ ಪೋಗಿ ನಿರ್ವಾಣಮಹದಾಚಾರ್ಯನಿಂದರಿತು ಸೇವಿಸಿದರ ॥ (10)

ಮೇಲಹುದು ಮುಕ್ತಿಯದರಿಂ ಭಕ್ತಿಯಂ ಬಿಡದ ।
ಲಾಲೋಚಿಸುತ್ತೀಶ್ವರಾಕೃತಿಯ ನೆಡೆವಿಡದೆ ।
ಲೀಲೆಯಿಂ ಭಜಿಸುತಿಹುದೆನೆ ರಾಮಚಂದ್ರಮನೊಳಿಂತಂ ಸುಮಂತ್ರ ನಯದಿ ॥
ಬಾಲಾದಿಮೂಢರುಗಳಿಂತರಿವರೇ ಪರಿಯ ।
ಪಾಲನಂಗೈದುಪಾಸನೆ ಭಕ್ತಿಯುದಿಸುವುದ ।
ನಾಲಸ್ಯಮಿಲ್ಲದುಪದೇಶಿಸು ವುದೆನುತಿರಗಷೋದ ರಘುನಾಥ ಮುದದಿ ॥ (11)

ಕೇಳ್ಸುಮಂತ್ರ ಮದ್ಭಕ್ತಿಶುದ್ಧಾಶುದ್ಧ ।
ಪೀಳಗೆಯಲಿರಡುವಿಧಮವರೊಳು ಕ್ರಿಯಾಮಿಶ್ರ ।
ಮಾಳಹುದ ಶುದ್ಧಗುಣಮಿಶ್ರಮೆಂದೆರಡುವಿಧಮವ ನಿರೂಪಿಸುವೆ ಮುದದಿ ॥
ಬೇಳ್ಪುದೇಂ ಸರ್ವಮೆನ್ನಿಂದಲಾಸರ್ವಮಂ ।
ತಾಳಿರುವೆ ಸರ್ವಮಂ ಮತ್ತಿಲ್ಲ ಮೆಂದರಿವು ।
ತೂಳಗಂಗೈವುದದೆ ಮುಕ್ತಿ ಪ್ರದಾಯಕಂ ಭಕ್ತಿಶುದ್ಧನಾಮಕಂ ॥ (12)

ಮಮಕಥಾಶ್ರವಣರತಿ ಪೊಗಳಪೊಗಳುವನುಮತಿ ।
ವಿಮಲಪದಸೇವನಾರ್ಚನ ದಾಸ್ಯನೇಹಾತ್ಮ ।
ಮಮತೆಯೆಂಬೀನವಂ ನವವಿಧದ ಭಕ್ತಿಗಳ್ ಕ್ರಿಯೆಯಿಂದ ಕೂಡಿರುವವು ।
ಕಮಲಸಂಭವ ಭವಾದಿಗಳು ವಾಲ್ಮೀಕಿಯುಂ ।
ಸುಮನಂ ಮರಿಚ್ಯಾದಿ ಭೂತನುಜೆ ಭರತನಾ ।
ಕ್ರಮದಿಂದ ಶಬರಿ ಪಾಲಸ್ತ್ಯ ಮಾರುತಿ ರವಿಜ ನೆರುಣಿಸುತರನುದಿನದಲಿ ॥ (13)

ಪಾವನೀಕೃತಕ್ರಿಯಾ ಮಿಶ್ರನೆನಿಸುವ ಭಕ್ತಿ ।
ಕೋವಿದರ ಮತದಲೊಂಭತ್ತು ವಿಧವಿಭಾಗಕುತಿ ।
ಯಾವನಾದರು ಸಿಲುಕಲದ ಮುಕ್ತನೆಂಬುದಿದು ಶ್ರುತಿಶಾಸ್ತ್ರಸಮ್ಮತವಲೆ ।
ಈ ವಿಧದ ಗುಣಮಿಶ್ರ ಭಕ್ತಿಮೂರ್ವಿಧಮವರ ।
ಭಾವಮೊಂದೊಂದು ಮೂರಾಗಿ ತೋರುವವದಂ ।
ಸೋವಿ ತಿಳಿ ಗುಣಮೂರು ಸಾತ್ವಿಕಂ ರಾಜಸಂ ತಾಮಸಗಳೆಂಬ ಪೆಸರು ॥ (14)

ಸಕಲಶಾಸ್ತ್ರಗಳಿಂದ ನಿಶ್ಚಯಿಸಿಕೊಂಡು ಮು ।
ತ್ತಕಳಂಕಬುದ್ಧಿಯಿಂದನುದಿನಂ ಜ್ಞಾನಿಸುತ ।
ಮದ್ಭಕುತಿಗೈದುವೊಡೆ ಸಾತ್ವಿಕದ ಸಾತ್ವಿಕಮೆನಿಪುದಖಿಳಭೂತಂಗಳೊಳಗೆ ॥
ಪ್ರಕಟಮಾಗಿರ್ಪೆನ್ನನು ಪರೋಕ್ಷದಿಂ ಭಜಿಪ ।
ಯುಕುತಿ ಸಾತ್ವಿಕ ರಾಜಸಾಖ್ಯಜಡಜಂಗಮ ।
ಪ್ರಕರದೊಳಗಿರ್ಪೆನ್ನ ತಾರತಮ್ಯದಿ ತಿಳಿವೊಡದುವೆ ಸಾತ್ವಿಕತಾಮಸಂ ॥ (15)

ಸತತನಿಷ್ಕಾಮಕರ್ಮಗಳ ಮಾಡುತ ಕ್ವಚಿ ।
ದ್ಗತ್ರಿವಿಧಿದು ಕಾಮ್ಯಕಳಿಸುವ ಭಕ್ತಿಗೈವ ನರ ।
ಮತಿವಂತ ರಾಜಸದಿ ಸಾತ್ವಿಕದ ರಾಜಸಂ ಮೋಹದಂಧಗಳಿಂದಲಿ ॥
ಅತಿಶಯದ ಭೋಗಕೋಸುಗ ಭಕ್ತಿಗೈವುದೇ ।
ಕ್ಷಿತಿಗೆ ರಾಜಸ ರಾಜಸಂ ಪ್ರಣಾದಾಕಾಂಕ್ಷೆ ।
ಕತಿಪಯಾರ್ತಿವಿನಾಶಕೆಂದು ಭಕ್ತಿಯ ಮಾಳ್ಪುದದುವೆ ರಾಜಸತಾಮಸಂ ॥ (16)

ಶಾರೀರಸಂಸಾರಭರಣಕೋಸುಗವಧಿಕ ।
ತೋರದಂಧದಿ ಕಳತ್ರನೆನಿಸಿ ಶರಣಂಪೊಗುವ ।
ದಾರಭಕುತಿಯ ತಾಮಸಸಾತ್ವಿಕ ಮೆನುತ್ತತಿಳಿ ಸ್ಫೋರ್ಧವಮಂ ಪಡೆವೊಡೆ ॥
ಹಾರವಿಸಿ ದಂಭದಿಂ ಮಾಳ್ಪಭಕುತಿಯು ತಿಳಿದೊ !
ಡೋರಂತೆ ತಾಮಸದ ರಾಜಸಂ ಮೂರ್ಖದಿವಿ ।
ಚಾರತನುದಂಡನೆಯು ಶಾಸ್ತ್ರಭಕುತಿಯೆ ಪರಮತಾಮಸಕೆ ತಾಮಸವಲೆ ॥ (17)

ಪರಿಪರಿಗಳಿಂತು ಮದ್ಭಕ್ತಿ ತನ್ಮಧ್ಯದೊಳ್ ।
ಪರಿಕಿಸಲ್ ಗುಣ ಮಿಶ್ರ ಮತ್ತಲ್ಲಿಗೆನೆ ಗುಣಂ ।
ಪಿರಿದು ಸಾತ್ವಿಕಮಪರೊಳಾಧಿಕ್ಯ ಮುತ್ತಿಕರ ತಿಳಿಯೆ ಸಾತ್ವಿಕಸಾತ್ವಿಕಂ ॥
ಹರುಷಗೊಂಬುವೆನಾವ ಭಕ್ತಿಯಿಂ ಭಜಿಸಿದರು ।
ಪರಮಹಿತಕರವೆಮಗೆ ಸಾತ್ವಿಕರ್ ಮನ್ಮಾರ್ಗ ।
ಮರಿತು ಸಚ್ಛಾಸ್ತ್ರಗಮಂಗಳನುಮತಿವಿಡಿದು ತೋಷಣಂಗೈವರೊಲಿದು॥ (18)

ಸರ್ವಭೂತಾವಾಸ ಚೈತನ್ಯರೂಪನಾ ।
ನೋರ್ವನೆಂದರಿತೆನ್ನ ಭಜಿಸುವರು ಸಾತ್ವಿಕದ ।
ಖರ್ವಸಂಪದಕಳಿಸಿ ರಾಜಸರು ಪೂಜಿಸುವರೈಸೆ ನೀರೇಜಭವನಂ ॥
ಪೂರ್ವದೇವಾದಿ ಭೇತಾಳಪತಿಯುಂ ಭಜಿಪ ।
ರುರ್ವಿಯೊಳ್ ತಾಮಸೀಜನರು ತಾಮಸದಿಂದ ।
ಬೇರ್ವರಿದು ರಾಜಸಂ ಪುಷ್ಟಿಗುಮುದನ್ನಳಿಯೆ ಸತ್ವಮುದಿಂ ಜನಿಪುದು ॥ (19)

ಕಳೆದು ರಾಜಸತಾಮಸಂಗಳಂ ಸಾತ್ವಿಕವ ।
ತಳೆದೊಂದು ಭಜಿಸುವರಿಗೀವೆ ಕೈವಲ್ಯಮಂ ।
ಬೆಳಗುವುದು ಸಾತ್ವಿಕದಿ ಮದ್ಭಕ್ತಿ ರಾಜಸದಲಹುದೈಕಭೋಗಾಪ್ತಿಯು ॥
ಕಳೆಗೊಳುವ ಗೀರ್ವಾಣ ಭೋಗಗಳ್ತಾಮಸಂ ।
ಬೆಳಸುವುದು ಮೋಹ ಭಯಗಳನಾಗುಣಂಗಳುಂ ।
ಪೊಳೆದಪುವು ಚಿತ್ತದಿಂದಾಚಿತ್ತಮಂದೆಸೆದ ದೆಸೆಯಿಂದ ವೃದ್ಧಿಯಹುದು (20)

ನರನಾವ ವಿಧದನ್ನಮಂ ಕೊಂಬನಾ ವಿಧದ ।
ಲಿರಕಮಾದಪ್ಪುದಾಮದರಿಂದ ದುರ್ವೃತ್ತಿಗಳ್ ।
ಬೆರೆದಪ್ಪುವು ದೇಹಾಭಿಮಾನದಿಂ ಮುಂದಪ್ಪ ಸುಗತಿಗಂ ಒಯು ಬರ್ಪುದು ॥
ಬರಡನಾಲಗೆಯ ಚಾಪಲ್ಯಮಂ ಪಳಯುಲುರು ।
ತರೇಂದ್ರಿಯಗಳೆಲ್ಲಮಂ ಜೈಸಿದಂತಪ್ಪುದದ ।
ನರನಿಕೃಂತನ ಕೃಧೀಕಾಸೋಪಮಂ ಕಳೆಯೆ ನಿರ್ಮಲಸ್ವಾಂತಮಹುದು ॥ (21)

ಅದು ನಿಮಿತ್ತದಿ ಸಾತ್ವಿಕಾನ್ನ ಭೋಜನಗೈಯೆ ।
ಹೃದಯು ನಿರ್ಮಲವಾಗಿ ವೈರಾಗ್ಯ ಸಂಜನಿಪ್ಪು ।
ದದರಿಂದೆ ದೇಹಾಭಿಮಾನ ನಾಶನಮಪ್ಪುದಭಿಮಾನಮೇ ಮಾಯೆಯು ॥
ಅದುವೆ ಜೀವರನೆಲ್ಲ ಬಂಧನಂ ಗೈದು ಮ ।
ತ್ತುದಯಶಾಸ್ತ್ರಮಾನಗಳ ಬಳೆಗುವದವಿದ್ಯೆಯಾದ ।
ರುದಯುಮಿಲ್ಲದರದೇ ಮುಕ್ತಿಯೆನಿಪುದು ಕೇಳ್ ಸುಮಂತ ನಾತಿಯಿಂದ [ತಿಳದು ॥ (22)

ಇತ್ತರದೊಳಭಿಮಾನ ಸಾಮಾನ್ಯ ವೈಶೇಷ ।
ಮತ್ತೆಮೊದಲದೆ ಶರೀರಾಭಿಮಾನಂ ಜಾರಿ ।
ಪುತ್ರಾದಿಭ್ರಮೆ ಯೆರಡನೆಯದೆಂದು ತಿಳ ಸತ್ಯ ಶಾಸ್ತ್ರ ಸಮ್ಮತಲೋಕದಿ ।
ಕೆತ್ತ ದೇಹಾತ್ಮಬುದ್ಧಿಯೆ ಪ್ರಥಮಮದರಿಂದ ।
ಬಿತ್ತರದ ಜಾತಿಗೋತ್ರಾಶ್ರಮ ಸಂಬಂಧಗಳ ।
ಮೊತ್ತ ವಿಭ್ರಮಗಳಾದಿಗುವವು ತತ್ವಜ್ಞಾತಿಯಭಿಮಾನಮಧಿಕಮಹುದು ॥ (23)

ಇದು ಜಾತಿಗಂ ವಿಹಿತವಿದು ನಿಷೇಧಮೆನುತ್ತ ।
ವಿಧಿಸುವ್ರೋಲ್ ಶಾಸ್ತ್ರಗಳ್ ವಿಹಿತಾ ಚರಣೆ ಪುಣ್ಯ ।
ಮದನುಳಿಯೆ ಪಾತಕಂ ಪುಣ್ಯಪಾಪಗಳೆರಡರಿಂದ ದುರ್ಗತಿಸುಗತಿಗಳ್ ।
ಉದಯಮಹವದರಿಂ ವಿಚಿತ್ರತರ ಜನ್ಮಂಗ ।
ಳೊದಗುವವು ಜನಿಸಿದೊಡೆ ಮೃತ್ಯು ಬೆಂಬಿಡದು ಮೃತಿ ।
ಯೊದಗೆ ಪುನರಪಿ ಜನನಮಪ್ಪುದಿದು ಸುಜ್ಞಾನದಿಂದಲ್ಲದುಳಿಯದನಘ ॥ (24)

ಜಂತುಗಳ ಕರ್ಮವಿದಿದಾ ಪಂಚಭೂತಗಳ ।
ಪಂತಿಯಿಂದೀಶ್ವರಂ ಸೃಜಿಪ ಸ್ತ್ರೀ ಪುಂಭೇದ ।
ಮಾಂತ ಪ್ರಾಣಿಗಳ ದೇಹವ ಧರಿಸಿ ಕುಲಗೋತ್ರ ಸೂತ್ರಾಶ್ರಮಂಗಳೆಲ್ಲ ॥
ಕೊಂತಿ ಶಾಖಾಶಿಖಾನಾಮ ರೂಪಕ್ರಿಯಾ ।
ಭ್ರಾಂತಿಯುಂಟುಮನು ತಾಯಿತಂಗಿ ಸತಿಸುತೆ ಸೊಸೆಯು ।
ರಂತೆ ತಂದೆಯು ಮಗಂ ಮೊಮ್ಮಮಾವಂ ಭಾವರೆಂಬ ಕಲ್ಪನೆಗಳಹವು ॥ (25)

ಇಂತು ಕಲ್ಪಿತದೇಹದಭಿಮಾನ ಕುಲಗೋತ್ರ ।
ಭ್ರಾಂತಿಯುಂ ಪುಣ್ಯಪಾಪಗಳ ಪಾಕಗಳೆಸಗು ।
ವಂತೆ ಶಾಸ್ತ್ರಗಳು ಹೇಳ್ದಪವದರ ವಾಸನೆಗಳಿಂದಖಿಳಜೀವರೆಲ್ಲ ॥
ಸಂತತಂ ಸಿಲ್ಕಿ ತೊಳಲುವರು ವಾಸನೆ ಮೂರ ।
ಪಿಂತುಳಿವರೊಮ್ಮನದೊಳೆಮ್ಮನು ಭಜಿಸುವಶುಭ ।
ಸ್ವಾಂತರಿಗೆ ಸಕಲಪಾಪಗಳಳಿದು ಸುಖರಾಶಿ ವಶಮಹುದು ಸುಲಭದಲ್ಲಿ ॥ (26)

ಎಲುತೊಗಲು ನರಮಜ್ಜೆವಮಾಂಸಾಸ್ತಿ ರಕ್ತಸಂ ।
ಕಲಿತಮಲಮೂತ್ರಾಂಶ ಸಂಭರಿತಮಶುಚಿಕರ ।
ನಿಲಯಮಿಾ ಪೊಲೆದೇಹ ಜಲಬುದ್ಬುದೋಪಮಿತಮುದಯಾಸ್ತಮಾನಬಿಡದೆ ॥
ಜಲದಿಂದ ಲೆನಿತುತೊಳದತಿಸಾರುತಿಹುದಿದಂ ।
ನಲವಿಂದಲೆನಿತಾ ತೀರ್ಥಸ್ನಾನ ಗೈಸಿದರು ।
ಪೊಲೆಯುಳಮ ಪಾವಿತ್ರ್ಯಮೆಂತಪ್ಪುದಾಶ್ರಮಕುಲಂಗಳಿಂದೇನು ಫಲವು ॥ (27)
ವಿಲಯಾತಿಶಯಮದಾಮಶ್ರವಿಕಮೂರುಗುಣ ।
ಮೊಲವಾಂತು ಬೇಳುವುದು ತಾದಾತ್ಮ್ಯಮಂ ಜಡದ ।
ಲುಲಿದಪುದು ಸ್ಮೃತಿಯುದರ ಮಾರ್ಗಾನುಸರಣೆಯುಂ ಮಾಳ್ಪುದು ಪುರಾಣತತಿಯು ॥
ಸುಲಭಮಲ್ಲದ ಪರಸ್ಪರವಾದಗಳ ಬಾಧೆ ।
ಸಿಲುಕಿಂದ ಮೋಹಕಂಗೊಳಿಸಿ ಭ್ರಾಮಕಗೊಳಿಸಿ ।
ಸಿಲುಕಿಪವು ಕಂಗಾಣದವರ ಕರವಿಡಿದರೇಂ ಸುಖದ ಹಾದಿಯು ದೊರೆವುದೇ ॥
ಪಾರುಮಂ ಪಳಮಾತಿನೊಳಗೆ ತಿಳದವ ಧರ್ಮ । [(28)
ಸಾರಮಂ ಬಲ್ಲಾತ ಚೆಲುವ ಚೆನ್ನಿಗನಿವನು ।
ದಾರವೈಷ್ಣವ ಶೈವ ಶಾಕ್ತೇಯ ಹೈರಣ್ಯಗರ್ಭಸೌರಾದಿಮತದಾ ॥
ಚಾರಣಂ ಗೈದಾತನೆಂದು ಭೂಷಣಗೈದು ।
ಕ್ರೂರಕರ್ಮವಿಹೀನ ಕೃಪಣ ಶಾರ್ಯನೆನುತ್ತ ।
ತೋರದಿಂ ಕ್ರತುಗೈವ ಲೋಕರಿಂದೇನಪ್ಪುದೈಯ ಪರಮಾರ್ಥಗತಿಗೆ ॥ (29)
ನಿಗಮಾಗಮ ಪುರಾಣಮಾರ್ಗಕಿತ್ತೇಷ್ಟಾಪೂರ್ತ ।
ಮಿಗೆ ನೇಮ ದಾನಾದಿ ಸಂಗತಿಯೊಳಿಂ ಸಿಲ್ಕಿ ।
ಬಗೆಬಗೆಯ ಮತ್ತವಚನಾರಚನೆಗಳು ಸಮ್ಮನಂ ಎಲ್ಲವು ಗ್ರಸಿಕಣಾ ॥ ?
ತೆಗೆದಿಟ್ಟು ಲೋಕದೇಹಾದಿ ವಾಸನೆಗಳಂ ।
ಬಗೆಗೊಳಿಸಿ ವೈರಾಗ್ಯ ಮದದಂಭವನು ಬಿಟ್ಟು ।
ಸೊಗಯಿಸಿದರೇಕಾಂತ ಭಕ್ತಿಯುದರಿಂದಾನು ಶಕ್ಯನುಳಿದರಿನಶಕ್ಯಂ ॥ (30)
ಕರುಣಾರಸಂ ಬೆರ್ಚಿ ನಿಜತತ್ವಸಂಗತಿಗ ।
ಳರುಪಿ ಜಗದಾರಾಧ್ಯನಂಘ್ರಿಗಾನತನಾಗಿ ।
ಪರಮ ಭಕ್ತಿಯೊಳು ಬಿನ್ನವಿಸಿದಂ ಜಗದೀಶ ಫಲಿತನುಡಿ ದಯದಿ ಬೇಳ್ದು ॥
ಪರಿಯನೆಲ್ಲವ ಕೇಳ್ದಿವೇಕಾಂತಭಜನೆಯಿಂ ।
ವಿರಚಿಸುವುಪಾಯಮಂ ದಯೆಗೈಯ್ಯ ಭವದೀಯ ।
ಚರಣಾರವಿಂದಗಳ ಪೊಂದಿ ಕೃತಿಯೆನಿಪೆನೆನೆ ರಘುನಾಥನಿಂತೆಂದನು ॥ (31)
ಕಳೆದು ವೈರಾಗ್ಯಮಂ ವಾಸನಾತ್ರಯಗಳಂ ।
ಕಳೆದಖಿಲಭೂತಾನುಕಂಪಮಂ ಪಡೆ ।
ದೊಳಗಿರ್ಪ ಸರ್ವೇಶನಾದೆನಗೆ ಸಂತತಂ ಸಕಲಧರ್ಮಗಳರ್ಪಿಸಿ ॥
ಚಲನೆಯಿಲ್ಲದೆ ಮನಮನೆನ್ನೊಳಿರಿಸುತ ಬೆರಗೆ ।
ತಿಳದನಿತಬೋಧಿಸುತ ಪಾಡಿಪೊಗಳುತ ಹರ್ಷ ।
ಗೊಳುವಾತನಾವನವನಗೀವೆ ನಕ್ಷಯಪದವನೀವ ನಿರ್ಮಲ ಭಕ್ತಿಯುಂ ॥ (32)

ಅನುದಿನ ದೊಳೇಕಾಂತ ದೊಳ್ ಕುಳಿತು ತನ್ನ ಹೃ ।
ದ್ವನಜದೊಳ್ ಮನ್ಮೂರ್ತಿಯಂ ಬಳಿದು ಧ್ಯಾನಿಸುತ ।
ಲನಿಶವುಪಚಾರ ಪದಿನಾರರಿಂದರ್ಚಿಸುತ ತನ್ಮಯಾವಸ್ಥೆಯೊಂದಿ ॥
ತನುಪುಳಕ ವೆರ್ಚೆ ಸ್ಸೈಮರೆದು ನಸುನಗೆಯು ಕಂ ।
ಬನಿಗಳುದುರುತಲಖಂಡಾನಂದ ರಾಜ್ಯಮ ।
ಸ್ನನುಭವಿಪ ನಾತನೇಕಾಂತ ಭಕ್ತನವಂಗೆ ವೆರತಿಲ್ಲ ಪೆಂದರಿವುದು ॥ (32)

ಫಲುತಪಃಪರಿಪಾಕದಿಂದೆನ್ನ ಭಕ್ತಿಯಿಂ ।
ದೊಲಿವುದವರಿಂದೆ ಸರ್ವಾತ್ಮನಾನೆಂದರಿದ ।
ಚೆಲುವ ಸುಜ್ಞಾನ ಸಂಪದವಹುದು ಮತ್ತದರ ದೆಸೆಯಿಂದ ವೈರಾಗ್ಯವು ॥
ಕಳಿತಮಪ್ಪುದು ಸದಾನಂದಮುಮನೆಂದೆನಿಸಿ ।
ನೆಲದಿ ಸಂಚರಿಪನಾ ಸತ್ಪುರುಷ ಮನ್ಮಾಯೆ ।
ಗೆಲಿದು ಸುಖಮಿರ್ಪ ಪ್ರಾರಬ್ಧದಂತ್ಯದೊಳು ಮಿಗೆ ನಿರ್ವಾಣಗಿದು ಸಿದ್ಧಾಂತವು ॥
[(34)

ಪ್ರೇಮದಿಂದೊಲಿದು ಸೂತಂಗಖಿಲತತ್ತ್ವಮಂ ।
ತಾಮರಸನೇತ್ರ ಬೋಧಿಸಲಾ ಮೃದೂಕ್ತಿಗಳ್ ।
ತಾಮಸೀಬುದ್ಧಿಗಳ ಪರಿಚಿಟ್ಟು ನಿಬಿಡತರದಾನಂದ ಮುಣ್ಮಿಸಲ್ಕೆ ॥
ರಾಮಪುರದರಸನತಿಭಕ್ತಿಯಿಂದಾವ ಪ್ರ ।
ಣಾಮ ಗೈದಭಿನುತಿಸಿ ಮಾರ್ಗದಿಯುಳವಲ್ಲ ।
ದಾಮಹಾಮಾತ್ಯನೊಪ್ಪಿದನಗಜೆ ಪೇಳ್ದರೆಂತಹುದು ಬ್ರಹ್ಮಾನಂದಮಂ ॥ (35)

(ಸಂಧಿ 15, ಪದ್ಯ 680)

## ಹದಿನಾರನೆಯ ಸಂಧಿ

ಸೂಚನೆ ॥ ಸುರತರಂಗಿಣಿಯ ದಾಂಟುವರೆ ನಾವಿಕಗತುಳ ।
ತರಪಣ್ಯವನುಜಮೈತ್ರೀರೂಪದಿಂದಿತ್ತು ।
ಹರುಷದಿಂದಖಿಲವಿಪ್ರೋತ್ತಮರನುಪಚರಿಸುತೈತಂದ ರಘುವೀರನು ॥

ಗಿರಿಜೆ ಕೇಳೇಕಾಂತಭಕ್ತಿಯಂ ಸೂತಂಗೆ ।
ಕರುಣಾಳುಗಳದೇವ ನೊರೆಯೆ ಪರಮಾನಂದ ।
ಭರತನೆಂದೆನಿಸಿ ಪಾಡುತ ಪೊಗಳುತಡಿಗೆರಗಿ ಬೀಳ್ಕೊಂಡು ಗಮಿಸಲಿತ್ತ ॥
ನರನಾಥ ನೋಡಿ ಲೇಖಾಧುನಿಯ ಸಂತಸಂ ।
ಬೆರೆದು ಸೌಮಿತ್ರಿಯಂ ಕರದೆಂದನಿರುಳಿರುವ ।
ದರರೆ ಈತಾಣಮತ್ರಿರಮ್ಯಕರವಾಗಿದೆಕೊ ನೋಡು ತೀರದ ಬನವನು ॥ (1)

ಎನುತ ಶ್ರೀರಾಮನೊರೆಯಲ್ಕಾಗ ಸೌಮಿತ್ರಿ ।
ಬನವನೊಳಪೊಕ್ಕು ನಾಲ್ದೆಸೆಯು ನಿಟ್ಟಿಸಿ ತನ್ನ ।
ಮನಕತೀವ ವಿಲಾಸವಾಗಿ ತೋರಿರಲೊಂದು ಇಂಗುದೀವಿಟಪದೆಡೆಗೆ ॥
ಸನುಮತದಿ ರಮ್ಯದಲೆವನೆಗೈದು ಬಂದು ಪದ ।
ವನಜಕಂ ಬಿನ್ನಪಿಸೆ ಜಾನಕಿಯನೊಡಗೊಂಡು ।
ಮುನಿಜನ ಸ್ತುತ್ಯನೈದಿ ತರುವೆಳಲೊಳೆಳೆಚಿಗುರಪಾಸಿಕೆಯೊಳ್ವಂಡಿಸಿದನು॥ (2)

ಅನ್ನೆಗಂ ರಾಮಯಾಗಮೋತ್ಸವದ ವೈಭವವ ।
ತನ್ನವರ ದೆಸೆಯಿಂದ ಕೇಳಕ ನಿಷಾದಪತಿ ।
ಉನ್ನತಾನಂದದಲಿಮಿಗೆ ವರ್ಚಿ ಹಿಗ್ಗುತಂ ಸಂತಸಂದಳೆದು ಮನದಿ ॥
ಪುನ್ನಾಗಲಕ್ಷಮುಖ್ಯಗಳಾ ಲಕ್ಷತ್ರಯಂ ।
ಸನ್ನದ್ಧಮೆನಿಸುವ ಧನುರ್ಧರರ್ ಸಪಲಕ್ಷ ।
ಮಿನ್ನಾದ ರಥಗಳಗಣಿತಮಾಗಿ ಪಯಣಕಂ ಸನ್ನಾಹಗೈದು ಬೇಗ ॥ (3)
ಮಧುಕಂದ ಮೂಲಾದಿ ಫಲಗಳಂ ಕರವಿಡಿದು ।
ಸದಯನಂ ಕಾಣಲುಜ್ಜುಗದಿಂದಲೈತಂದು ।
ಮುದನನಯ್ಯನೆ ಮತೀತಳಕ ಬಂದನೆನುತ್ತಲರಿತು ಭಯಭಕ್ತಿಯಿಂದ ।
ಮುದದಿಂದ ತಂದ ಕಾಣಿಕೆಗಳಂ ಮುಂದಿಟ್ಟು ।
ಕದನಕರ್ಕಶ ಜಗನ್ನಾಥ ಕೋದಂಡಧರ ।
ಬುಧಶಿರೋರನ್ನ ತವ ದಾಸದಾಸನೆನುತ್ತ ನುತಿಸಿ ಪೊಡಮಟ್ಟನೊಲಿದು ॥ (4)
ಸರ್ವಲೋಕಶರಣ್ಯ ಸಕಲಾಗಮಪುರಾಣ ।
ಗೀರ್ವಾಣಗಣ ವೇತಾಳ ಗಿರಿಜಾಮನೋಹರನ ।
ಖರ್ವಮಾನಸಸರೋರುಹಹಂಸ ಹಂಸಜನಹೃದಯಚಿದ್ದೀಪ ದೀಪ ।
ಉರ್ವಿಜಾರಮಣ ಸುರಗೇಶವಂದಿತ ಚರಣ ।
ನಿರ್ವಾಣದಾಯಕ ನಿಜಾನಂದಮಯ ದುಷ್ಟ ।
ಗರ್ವಭಂಜನ ರಾಮ ಸಲಹೆನುತ ದೂರದೊಳ್ ನಿಂದು ಕೈಮುಗಿದೆಂದನು ॥ (5)
ದೇವ ಲಾಲಿಪುದೆನ್ನ ಸತಿಸುತಾದ್ಯಖಿಲಜನ ।
ರೀ ವಸುಧೆ ಗಜತುರಗ ಮಣಿಕನಕಧೇನುಗಳ್ ।
ಭಾವವಾಚಕಕಾಯಕಂಗಳಿಂದಾಂ ಗೈದ ಸುಕೃತಾದಿಗಳ ನೆಲ್ಲಮಂ ॥
ಪಾವನಶ್ರೀ ಚರಣಕರ್ಪಿಸಿದೆ ಸನಕಾದಿ ।
ದೇವರುಗಳರಿಯದೀ ಸುಮೂರ್ತಿಯ ಕಂಡೆ ।
ಶ್ರೀ ವಧೂರಮಣ ಮರೆವೊಕ್ಕೆನೆನ್ನಂ ಸಲಹು ದುರ್ವೃತ್ತನಹೆನು ದಯದಿ ॥ (6)
ಎಂದು ಸರ್ವಸ್ವಮಂ ರಘುನಾಥ ಗರ್ಪಿಸುತ ।
ನಿಂದು ಕರಗಳ ಮುಗಿದು ಕಂಗಳೊಳಗಾನಂದ ।
ಬಿಂದುಗಳ ನುದುರಿಸುತ ಗದ್ಗದ ಸ್ವರದಿಂದ ನುತಿಗೈದ ಭಕ್ತಿಯಿಂದೆ ॥
ಇಂದು ಶೇಖರಪದ್ಮಭವನಾರದಾದಿಮುನಿ ।
ವೃಂದ ಪೊಗಳುವೊಡರಿಯದಾಪಾರಮಹಿಮನಂ ।
ದಂದುಗವ ಪಾಪಿಷ್ಠಕೈರಾತಗೋಚರಂ ಮೂಢ ನಾನೇಂ ನುತಿಪೆನು ॥ (7)
ಮಾತನಾಡುವರೆ ಮೊಗಮಂ ದಿಟ್ಟಿಯಿಂದೊಮ್ಮೆ ।
ಜಾತುಜಿತು ದಿಟ್ಟಿಸಲ್ ಬಾರದ ಜುಗುಪ್ಸಿತದ ।
ಜಾತಿಯೆನ್ನದು ದುರಾಚಾರ ಗೋಭಕ್ಷಕಂ ಕ್ರೂರಜನರಗ್ರೇಸರಂ ॥
ತಾತ ಕೇಳ್ ಶಬರ ಕಾಳಾಹಿಭ್ರಮಿ ಕಾಮಿಸುತೆ ।
ಯಾತುರನ ರುಕ್ಮಕಾರುಕ ಲತಿ ಜೀವಕನ ।
ಪಾತಕಂ ನಂಬದಿರುಮೆಂದು ನೀತಿಜ್ಞರುರಿ ಬೋಧಿಪರು ಶಾಸ್ತ್ರವಿರವ ॥ (8)

ಕಲಶಸಂಭವ ಮುಖ್ಯರತುಳ ಧ್ಯಾನಂಗಳಿಗೆ ।
ನಿಲುಕದಿಹ ಪರಬೊಮ್ಮ ಶುಭವಿಗ್ರಹಾಕಾರ ।
ಕಲನೆಯಿಂ ಕಂಗಳೆದಿರಲಿ ತೋರ್ಪುದಾಂ ಕಂಡೆ ಪೊಡೆವಮುಟ್ಟು ಭಕ್ತಿಯಿಂದೆ ॥
ಬಲುಜನ್ಮಕೃತತಪಃಪರಿಪಾಕದಿಂದ ಬಂ ।
ದೊಲಿದೆಯಲ್ಲದೆ ಹರಾದ್ಯಖಿಲರಿಗಗೋಚರಂ ।
ಸಿಲುಕಲಪ್ಪುದೆ ಭವನ್ಮೂರ್ತಿ ದರ್ಶನದಿಂದಲಾಂ ಧನ್ಯ ದೇವದೇವ ॥ (9)
ಕೃತಕೃತ್ಯನೆಂದೆನಿಸಿ ಕಾವುದೆನ್ನನೆನುತ್ತ ।
ಅತಿಭಕ್ತಿಯಿಂದೆರಗಿ ಬಿನ್ನವಿಸೆ ಶ್ರೀರಾಮ ।
ನತುಳಪ್ರೇಮದೊಳಾಪುರಾತನಂ ಸತ್ಕರಿಸುತಿಂತೆಂದ ವಿನಯದಿಂದೆ ॥
ಕ್ಷಿತಿಯೊಳ್ ಸಹಸ್ರರೊಳಗೊರ್ವನಿಗೆ ಮದ್ಭಕ್ತಿ ।
ರತಿಯುದಿಪುದಾ ಭಕುತಿಯಿಂದಾವನಾದೊಡಂ ।
ಮತಿಯುತರೊಳಗ್ಗಳನೆನಿಪ್ಪನಾಗುಪ ವ್ರತಾದಿಗಳಿಂದ ಪೂತನೆನಿಪ ॥ (10)
ಹರಕೇಶವದ್ವೇಷಿ ನೀಚ ಪಾಪಾಚಾರಿ ।
ನಿರತಗೋಹತ ಪುಲ್ಕಸ ಯವನ ಮೊದಲಾದ ।
ಪರಿಪರಿಯ ಕ್ಷುದ್ರಯೋನಿಜರಾದೊಡಂ ಜನಿಸಲೆನ್ನಲ್ಲಿ ಸದ್ಭಕ್ತಿಯು ॥
ನಿರುಗೆಯಾದಾಕ್ಷಣಂ ಪರಿಶುದ್ಧನೆನಿಸಿ ಬಂ ।
ಧುರದನಿಗಮಾಚಾರ ಕರ್ಮಸತ್ಯವ್ರತಾ ।
ಚರಿಪ ವಿಪ್ರೋತ್ತಮರಿನಿಂದಧಿಕನಹುದೆಂಬ ನಿಗಮಾರ್ಥಮಿದು ಸತ್ಯವು ॥ (11)
ಜಾತಿವರ್ಣಾಶ್ರಮಾಚಾರದಭಿಮಾನಿಗ ।
ಳ್ಗೀತರ್ಕ ಶಾಸ್ತ್ರ ಕರ್ಮಾಚಾರರತರಿಂಗೆ ।
ಜಾತಮಾಗದು ಭಕ್ತಿಯಾಗ ಯೋಗವ್ರತಂ ಸ್ವಾಧ್ಯಾಯ ತೀರ್ಥಂಗಳು ॥
ಪೂತಗೈಲಾರವೆಮ್ಮಯ ಭಕ್ತಿಪುಟ್ಟುವುದು ।
ಭೂತಳದಿ ಬಹುಜನ್ಮಸುಕೃತ ಪರಿಪಾಕದಿಂ ।
ದಾತಗೀ ಕರ್ಮಯೋಗಾದಿಜಂಜಡ ಕೃತ್ಯವೇಳ್ಪನಿತುವೇಡವನಘ ॥ (12)
ವಿಜಿತಮಾತ್ಸರ ವೀತರಾಗ ಸರ್ವಪ್ರಾಣಿ ।
ಋಜು ಮೈತ್ರಿಯಖಿಲಭೂತಂಗಳಲ್ಲಿ ಮದ್ಭಾವ ।
ಭಜನೆ ನಿರ್ಮಮತೆ ಯತ್ನವಿಶೂನ್ಯ ನಿಷ್ಪರಿಗ್ರಹ ನಿರ್ವಯನ್ನಿರಾಸೆ ॥
ಕುಜನರಲುದಾಸೀನ ದೊರೆದನಿತರಲಿ ತುಷ್ಟ ।
ತ್ಯಜಿಸಿ ಹರ್ಷವಿಷಾದಲಾಭನಷ್ಟಗಳಾವ ।
ಸುಜನಗಳವಿಷ್ಟರುವನವ ನೀಚನಾದೊಡಂ ಬ್ರಾಹ್ಮಣೋತ್ತಮಮಿದು ದಿಟಂ ॥ (13)
ನಿರತ ಪಾಪಾಚಾರ ಜಾತ್ಯಾಶ್ರಮ ವಿದೂರ ।
ಪರಪುಲ್ಕಸಪುಳಿಂದ ನೀಚಾಂಗನಾಗಮನ ।
ಪರನೆನಿಸಿ ಭೋಗಲಂಪಟನಾಗಿ ಸತ್ಕರ್ಮಪೊಂದಿಲ್ಲದತಿಗರ್ವಿತ ॥
ದುರುಳನಾದರು ಮದೀಯೈಕತಾನಸ್ವಾಂತ ।
ವೆರೆದ ಭಕ್ತಿಯೊಳರಲ್ಕೊಂಡು ವಿಪ್ರೋತ್ತಮಂ ।
ಪರಮಪಾವನನೆನಿಪನಿದು ಸತ್ಯಮೆಂದರಿಪುದಖಿಳವಾಮ್ನಾಯಮುತ್ತರದಿ ॥ (14)

ಕುಲಗೋತ್ರ ಜಾತಿಧರ್ಮ ಕ್ರಿಯಾದಿಗಳಿಲ್ಲ ।
ಬಲುತಪವ್ರತ ನೇಮನಿಷ್ಠೆಗಳ್ ಸಂತಾಪ ।
ನೆಲೆಗಕಾರಣದ ಧಾವತಿಯಲ್ಲದವರಿಂದಲೆಮ್ಮ ಮಾರ್ಗಂ ಸಿಲುಕದು ॥
ಪಲವುವಿಧಕರ್ಮಗಳಸಭಿಮಾನಗಳನುಳಿದು ।
ನೆಲವಿಂದಲೆರಕದಂತಿರುವ ಸರಿಯದ ಭಕ್ತಿ ।
ಸುಲಭ ನಾನೆಂದರಿವುದಿದು ಸತ್ಯತಥ್ಯವೆಂದರಿತು ಸುಖವನುಭವಿಪುದು ॥ (15)
ಎಂದೊರೆದ ವಾಣಿಯಿಂದಾನಂದನೆನಿಸಿ ಗುಹ ।
ಚಂದದಿಂ ತನ್ನಕರಗಳ ಮುಗಿದು ಮುಗುಳ್ನಗಿ ।
ನಿಂದು ದೂರದಲಿ ಭಯಭರಿತ ಭಕ್ತಿಯೊಳಾ ರಘೂತ್ತಮನೊಳಂತೆಂದನು ॥
ಬಂದಿರುವ ಗಜತುರಗ ರಥಪದಾತಿಗಳ ಸುಖ ।
ಬಂಧುರವ ಸಿರಿಯುರಸುತನವನವನಿವ್ಯಾಯು ಪದ ।
ದ್ವಂದ್ವಕರ್ಪಿಸಿದೆನಿದನೊಪ್ಪುಗೊಂಡೆನ್ನಂ ಕೃತಾರ್ಥನಂ ಮಾಳ್ಪುದೊಲಿದು ॥
ವರಸುಧಾಚರಣದಮೃತಾರ್ಪಣಂ ಗೈದಂತೆ । [(16)
ಪರಮಪುರುಷಗೆ ಚತುರ್ದಶಭುವನಪತಿಗೆ ।
ಧರಣಿಯೊಳಗೆಳ್ಳನಿತನಾಂ ನಿವೇದನಗೈದುದ ಪಹಾಸಮಲ್ತೆ ಜೀಯ ॥
ಚರಣಸೇವಕನ ಬಿನ್ನಪವ ಕೈಕೊಳವೇಳ್ಕು ।
ಕರುಣಾಳುಗಳ ದೇವ ಕಾಯಬೇಕೆಂದೆರಗಿ ।
ಪರಿಪರಿಯಲುಪಚರಿಸುವ ನಿಷಾದಪತಿ ಗುಹನ ನೋಡಿ ರಾಘವ ನುಡಿದನು ॥ (17)
ಆತ ಕೇಳ್ನನ್ನಿಂದಲತುಳ ಸನ್ಮಾನ ಸಂ ।
ಪ್ರೀತ ನೆಸಿರ್ದೆವಾವು ಸರ್ವ ತ್ರಿಭುವನದ ।
ನೇತಾಜ್ಞೆಯಿಂದ ಕಂಗಳ ಹಬ್ಬವಾಯ್ತೆಂದು ನಿನ್ನ ಕಾಣ್ಬುದರಿಂದಲಿ ॥
ಪೋತಾದಿ ಶಾಖಿರ ಸಂಬಂಧ ಜನರು ಸಹ ।
ಜಾತರಾರೋಗ್ಯ ಭಾಗ್ಯಕ್ಷೇಮವೇ ಎನುತ ॥
ಪ್ರೀತಿಯಿಂ ತೆಗೆದಪ್ಪಿ ಮುದ್ದಿಸಿದುದೇಂ ಪೇಳ್ವೆ ಭಜಕವಾತ್ಸಲ್ಯದಿರವ ॥ (18)
ನಿನ್ನ ಮನದತಿಶಯ ಪ್ರೀತಿಯುಂ ನಾಬಲ್ಲೆ ।
ನಿನ್ನಾಧಿಪತ್ಯದೈಶ್ವರ್ಯ ಮೆನ್ನದು ಲೋಕ ।
ಸನ್ನುತನೆ ಮತ್ಪ್ರಾಣ ತುಲ್ಯನನ್ನುಳದನ್ಯ ಮೇನುಂಟು ಮೇಣಧಿಕವು ॥
ಎನ್ನಯ್ಯ ನಾಜ್ಞೆಯಿಂ ಮುನಿವೇಷಮಂ ಧರಿಸಿ ।
ಪನ್ನೆರಡು ಮತ್ತೆರಡು ವರುಷ ಬನದೊಳಗಿರ್ಪ ।
ದನ್ನು ಸಂಕಲ್ಪಿಸಿರುವೀ ಧರ್ಮಕೋಣೆಯಂ ಬರಗೊಡಲ್ಬಾರದನಘ ॥ (19)
ಅದು ನಿಮಿತ್ತದೊಳಾತ್ಮ ಸಂಭಾರ ವಸ್ತುಗಳ ।
ಸದನಕ್ಕೆಕಳುಪು ಸುಪ್ರೀತರಾದೆವೆನುತ್ತ ।
ಸದಯ ನಾಜ್ಞಾಪಿಸಲ್ ಸದಯನಾ ವಸ್ತುಗಳ ಪಿಂತಿರುಗಿಸಲ್ಕನಿತರೊಳ್ ॥
ಪದುಮದಿನಯಂ ಪತ್ನಿಮುದಕಡಲ ಕನೆಗೈದೆ ।
ಮುದದಿಂದರಾಘವಂ ತತ್ಕಾಲ ಕರ್ಮಗಳ ।
ಚದುರಿಂದ ಗೈದು ತತ್ತರುನೆಳಲ ನಿವಾರಕ್ಕೆ ಸೌಮಿತ್ರಿ ಭಕ್ತಿಯಿಂದೆ ॥ (20)

ದೇವಗಂಗಾಜಲದಿ ಪದಪದ್ಮಗಳ ತೊಳೆದು ।
ಪಾವನಶ್ರೀ ತೀರ್ಥಮಂ ಕೊಂಡು ಮಗುಳೆ ಭೂ।
ದೇವಿಯರಾತ್ಮಜೆಗೆರಗಿ ಸ್ವಸ್ವರ್ದೀಯುದಕವಮಂ ತಂದು ಕರತಳಕೀಯಲು ॥
ಸಾವಧಾನದಿಕೊಂಡು ಜಾನಕೀಸಹಿತ ನರ ।
ದೇವ ತಳವರ್ಣಾಸಿಕೆಯ ಸಾರೆ ಲಕ್ಷ್ಮಣ ದೂರ ।
ಕಾವಿಡಿದು ಸಾಲ್ದಿಸೆಯಸಾರ್ವೃವೃತೊಪ್ಪಿರಲ್ಕಾಗ ಗುಹನಿಂತೆಂದನು ॥ (21)
ಅರಸ ನಿನಗೆಂದಾನು ತರಿಸಿರುವ ಪಾಸಿಕೆಗ ।
ಳುರುತರಾಹಾರಗಳನೊಪ್ಪುಗೊಂಡೆನ್ನನು ।
ದ್ಧರಿಸಿ ಶಯನಿಸವೇಳ್ಕುಮಿಂದಿರುಳೆಚ್ಚರದಲಿಹುದಾನು ಜಾಗ್ರತೆಯಲಿ ॥
ಪೆರತುಪದ್ರವ ಲೇಶಪುಟ್ಟದೋಲ್ ಕಾದಿರುವೆ ।
ಚರರು ವನಗೋಚರರು ಬಲ್ಲರೆಲ್ಲವರ್ಕ್ರ್ಪವೆಯು ।
ಪೆರದು ಪಾಲಿಪ್ಪುದೆಂದು ಬೇಡಿಕೊಳಲಾ ಗುಹಂಗೆಂದ ಸೌಮಿತ್ರಿ ನಯದಿ ॥ (22)
ಕೆಳೆತನದೊಳೆನಗೆ ನಿನ್ನಿಂದಧಿಕರಾರುಂಟು ।
ಜಲಧಿಮೇಖಲೆಯರಸ ರಾಜೋಪಭೋಗಗಳ ।
ನುಳದ ತಾಪಸರಂತೆ ತರುತಳದಲಿರ್ಪುದಂ ಪಂಬಲಿಸಿ ನೃಪತಿ ತನುವ ॥
ನುಳದಪಂ ಕೌಸಲ್ಯೆಯನುಸರಿಪಳಾ ಮಾತ್ರ ।
ಪಳಯುದೊಡನೈದುವಳ್ ಮಾನ್ಮಾತೆ ವಿಪರೀತ ।
ಗಳ ಕೇಳ ಶತ್ರುಘ್ನ ನಿಪ್ಪನೆಂತಾ ನಗರಮೆಲ್ಲ ಜೆಲ್ಲಿಹುದು ಬಳಕ ॥ (23)
ಇಂತವಂತವಿಧಂಗಳನಂತ ಚಿಂತಾನಿಚಯ ।
ಸಂತಾನ ವೃದ್ಧಿಯೆನಿಸಿಗೆ ನಿದ್ರೆ ಸುಖಸೌಖ್ಯ ।
ಮೆಂತಹದು ಪದಿನಾಲ್ಕು ಲೋಕನಾಥರಿಗಾಗಳಿದ ಮೀರಲಳವೆ ವಿಧಿಯ ॥
ಭ್ರಾಂತಿಗೊಂಡೇನು ಫಲವೆನುತ ಲಕ್ಷ್ಮಣವೇಳ ।
ಲಂತಸ್ಥವಾದ ಶುಚಿಮುಂಬರಿದು ಬರಲು ಗುಹ ।
ಸಂತಾಪದಿಂ ಮರುಗಿ ಪಲುಬುತ್ತುರೆ ಗಂಡೆರಳೆಯಂತೆದೈನ್ಯದೊಳಿದ್ದನು ॥ (24)
ಕರವ್ರತಲಿ ಕಂಬನಿಗಳುಸಿರುಸಿರೆನುತ್ತಲುಂ ।
ಪೊರಳ ಸಂಕಟಗೊಳುವ ಗುಹನ ನಿಟ್ಟಿಸಿ ಮನದ ।
ಮರುಕದಾ ಸೌಮಿತ್ರಿ ತನ್ನೊಳೆಂದಂ ಪೆರರ ತಾಪವಾತ್ಮೀಯವೆನುತ ॥
ಅರಿದು ಸಂಕಟಗೊಳುವ ನೀ ಮಹಾಪುರುಷ ಸ ।
ತ್ಕರುಣಾಳುಗಳಲಧಿಕ ತೊಳಲಲನುಚಿತವಿಾತ ।
ನುರುತಾಪಹೊಂಗೈಸುವೇಳ್ಕೆಂದು ಸೌಮಿತ್ರಿಯಾನಿಷಾದಪತಿಗೆಂದನು ॥ (25)
ಗೆಳೆಯ ನಿರ್ಮಲಚಿತ್ತ ನೀನಿದೇಂ ಕಾರಣದೊ ।
ಳಳುವರುಜ್ಜಗಗೈವೆ ಶ್ರೀರಾಮ ಪರಬೊಮ್ಮ ।
ನಿಳೆಯಭಾರವ ಹರಗೆಯ್ಯೆ ಮನುಜಾಕಾರವೆತ್ತು ಜನರಂತೆ ತೋರ್ಪ ॥
ಬೆಳಗು ಕತ್ತಲೆಯೊಳಂ ಸಿಲುಕುವುದೆ ರಘುವೀರ ।
ತೊಳಲುವನೆ ನರರಂತೆ ದುಃಖ ಕೋಟಲೆಗಳೊಳು ।
ತಿಳಿಯದಾರದಕೆ ಸಂಕಟ ಗೊಳುವದೇನುಂಟು ತಂಗಾಳಯೊಳಗೆ ನಂಟು ॥ (26)

ಆರಾದೊಡಂ ವಿಧಿಯು ಮೀರಲಸದಳ ದುಃಖ ।
ವಾರಿಂದ ಸಂಗಡಿಸಿತಂಬುದಮಿಳ ಭ್ರಾಂತಿ ।
ತೋರಸುಖಮೆನ್ನಿಂದಲೊದಗಿದುದು ನಾಂ ಗೈದೆನೆಂಬುದಭಿಮಾನ ಬರಿದೆ ॥
ಆರಿಂದಲುಪಕಾರವಪಕಾರವೆಂಬೆರಡು ।
ತೋರುವುವುಮೆಮತೊರೆವ ಸೊಲ್ಲು ಪುಸಿ ಪ್ರಾರಬ್ಧ ।
ಕಾರಣಂ ಸರ್ವಜಂತುಗಳಂಗೆ ನಿಜಕರ್ಮಾಣೇಣಿಂವ ಬದ್ಧವನಘ ॥ (27)
ಪಿರಿಯು ಮಿತ್ರದ್ವೇಷಿಗಳು ಬಂಧುವರ್ಗವೆ ।
ಲ್ಲರು ಹರವರ ಪರಕರ್ಮಾನು ಚರರೆನಿಸಿ ಬಾ ।
ಳ್ವಗುಳದ ವರಿಗವರಿಂದೆ ಸುಖದುಃಖ ಪ್ರಾರಬ್ಧಗಳ ನೋಡದಲೆ ಪೋಪುದೆ ॥
ನಿರತಮಾದೇಶ ಮಾಕಾಲಮಾದಿನಫಳಗೆ ।
ಯಿರದೊದಗಿ ಬರ್ಪುದನುಮಾನಮಿಲ್ಲದೆ ಶುಭವು ।
ಪಂಪಂಥುಮಶುಭಮೆಂಬೆರಡಾರನುಂ ಬಿಡದವನ್ನುಭೋಕ್ತವ್ಯಾಂಸಿಗಳ್ ॥ (28)
ವಿಧಿಕೃತಮಮೀರಲಳವಲ್ಲ ದೇವಾಸುರರು ।
ಪದುಮಭವಹರ ವಿಷ್ಣು ಯತಿತತಿಗಳೆಲ್ಲರುಂ ।
ಮುದದಿಂದಲನುಭವಿಸಿ ಮತ್ತುಳವರದರಿಂದಲೀ ಶುಭಾಶುಭವೆರಡರ ।
ಸವನವೀತನು ವಿದಕೆ ಪುಣ್ಯ ಪಾಪಗಳಂದ ।
ಮುಡಿಸುವುವು ಸುಖದುಃಖ ಮೊಂದೊಂದನುಳಯದಿದು ।
ಪದಿನಾಲ್ಕು ಲೋಕಸಂಭವರಿಂಗಲಂಘ್ಯಮಿವು ದಿನರಾತ್ರಿಗಳ ತೆರದೊಳು ॥
ನೀರೊಳಗೆ ಕೆಸರು ಕೆಸರೊಳ್ ನೀರು ತೋರ್ಪಂತು (29)
ದಾರ ಸುಖಮಧ್ಯದೊಳ್ದುಃಖ ದುಃಖದ ನಡುವೆ ।
ತೋರುವಮು ಸುಖಮಿವಂ ಪರಿಹರಿಸಲಳವಲ್ಲವಾರಿಂದ ತಿಳಿದುನೋಡೆ ॥
ಪೂರುವದ ಪ್ರಾರಬುಧವನುಭವಿಸದಲ್ಲದದು ।
ತೀರದಾರಿಂದಪ್ಪುದೇನುಯು ಪ್ರಾಕೃತಂ ।
ಕಾರಣಂ ಮತ್ತಿದಕೆ ಮರುಗಿ ಮಾಡುವುದೇನು ಬಯಲ ಭ್ರಾಂತಿಯುನು ನೆನೆದು ॥
ಈರೇಳುಭುವನಗಳ ಸೃಜಿಸಿಪಾಲಿಸಿ ಕಡೆಗೆ । [(30)
ಶಾರೀರದೊಳ್ ಮಡಗಿ ತಾ ನಿರಾಮಯನಾಗಿ ।
ತೋರಿ ತೋರದ ಸಕಲರೊಳಗಿಪ್ಪ ಚಿನ್ಮಯಂ ಲೋಕಾನುಸಾರವಿಡಿಸಿ ॥
ಪ್ರಾರಬ್ಧಮಂ ಮೀರಬಾರದೆಂದನುಕರಿಸಿ ।
ತೋರುವದೆ ಸುಖದುಃಖಲೀಕ ವಿಜ್ಞಾನಂದ ।
ಸೂಂಗೆತ್ತಣದು ಸೂರಿಯುಗುಂಟೆ ಪಗಲಿರುಳ ಸಂಬಾಧೆ ಲೋಕದೊಳಗೆ ॥ (31)
ಎನುತ ಲಕ್ಷ್ಮಣ ತತ್ವಕಥೆಯಿಂದ ಲೊಡಂಬಡಿಸು ।
ವನಿತರೊಳಗಾದಿತ್ಯನುದಯಾದ್ರಿಗೈತರ ।
ಲ್ಕಿನವಂಶದರಸನೆಳ್ಚತ್ತು ಪೂರ್ವಾಹ್ನಿಕಾರ್ಯವ ವಿರಚಿಸಿ ಬೇಗದಿ ॥
ಘನವದಗಂಭೀರನಿಸ್ವನದಿಂದ ಸೌಮಿತ್ರಿ ।
ಯುಸುಕರೆದು ಶೈವಲಿನಿಯುಂ ದಾಂಟಲುಪಯೋಗ ।
ವನು ಕೊಳ್ಳುದೆಂದು ನೇಮಿಸಲಾತ ನಾನಿಷಾದಪತಿಗಿಂದ ನೆಉಲಿದು ॥ (32)

ಉಡುಪವಂ ತರಿಸು ನದಿಯಂ ತರಿಸವೇಳ್ಕುಮೆಂ ।
ದೊಡೆಯು ನೇಮಗೈದನೆನೆ ಹಸಾದವೆನುತ್ತ ।
ನಡೆದು ದಾಯಾದ್ಯರಿಂಗರುಪಲಾಕ್ಷಣ ದಿವ್ಯನಾವೆಯಂ ಸಿಂಗರಿಸುತ ॥
ತೊಡರಿ ತಂದಾ ತಟಿನಿಯೆಡೆಗೆ ಸತ್ವರದಿಂದ ।
ಪೊಡವೀಶಗಭಿನಮಿಸಿ ಬಿನ್ನಪಂಗೆಯ್ಯೆ ಮುಂ ।
ಗಡೆಯುಲಿಷ್ಟಸುತಂಬುಸರಣಿಯಂ ಸಂತಸವ ತಾಳ್ದು ಮಿಗೆ ರಘುವೀರನು ॥ (33)

ಸುರುಚಿರ ಮೃದೂಕ್ತಿಯಿಂ ಕರೆದು ಗುಹನಂ ಜಗ ।
ದ್ಭರಿತವಿಕ್ರಮ ರಾಮಚಂದ್ರ ನುಡಿದಂ ಲೋಕ ।
ರಿರುವೆಡೆಯುಲಾವಿರುವುದನುಚಿತಂ ಮುನಿಸೇವ್ಯ ನಿರ್ಜನಸ್ಥಾನಕೈದಿ ।
ಪರಮಸುಖದಿಂದಿರಲ್ವೇಳ್ಕು ಋಷಿವೇಷಗಳ ।
ಧರಿಸಿ ವಿಪಿನದಿ ಚರಿಸೆ ಸೌಖ್ಯಮುದಂ ಬೇಗ ।
ತರಿಪುದಾಲದ ಪಾಲನೆನುತೊರೆಯಲಾ ಗುಹಂ ತಂದೀಯೆ ವಟಕ್ಷೀರವ ॥ (34)

ತಂದಿತ್ತ ಪಾಲಿನಿಂದಂ ರಾಮ ಜಡೆಗಟ್ಟ ।
ದಂದದಿಂ ಸೌಮಿತ್ರಿಯುಗ್ರಭವನೋಪಾದಿ ।
ಬಂಧಿಸಲ್ ವೇಣಿಗಳ ಲೋಕವಚ್ಚರಿವಟ್ಟು ಸಂಬಂಧಗೊಳುತಲಿರಲು ॥
ಇಂದೀವರಾಕ್ಷ ಸೌಮಿತ್ರಿಯರ್ ಮೌನಿಗಳ ।
ವೃಂದನಾಯಕರಂತೆ ಕಂಗೊಳಪ ಸಮಯದೊಳ್ ।
ಬಂದು ಪಿಚ್ಛಾಪಿಸಿದರರಸ ಲಾಲಿಪುದಂಬುಸರಣಿ ಬಂದಿರ್ಪುದೆನುತ ॥ (35)

ಸೌಮಿತ್ರಿ ಕೇಳ್ ನಾವೆ ಬಂದಿದೆಕೊ ! ಬೇಗ ।
ಭೂಮಿಜೆಯು ಸಹಿತ ತರಣಿಯನಡರವೇಳ್ಕಂದು ।
ನೇಮಿಸೆಹಸಾದವೆಂದಾ ವಿದೇಹಾತ್ಮಜೆಯು ಪೋತಾಭಿರೋಹಗೈಸಿ ॥
ಪ್ರೇಮದಿಂ ಬಿನ್ನವಿಸಿ ಗುಹನ ಕರಪಿಡಿದಾಗ ।
ರಾಮಚಂದ್ರಂ ಸುಮಿತ್ರಾತನಯ ಸಹಿತ ಬಂ ।
ದಾಮಹಾ ನಾವೆಯನಡರಂದಂ ಸುರನದಿಯ ದಾಂಟುವಾತುರದಿಂದಲಿ ॥ (36)

ನದಿಯ ಮಧ್ಯದಿ ನಾವೆಯೊಳ್ ನಿಂದು ವೈದೇಹಿ ।
ಮುದದಿ ಕರಗಳ ಮುಗಿದು ಮುನಿಜನಸ್ತುತೆ ದೇವಿ ।
ಸದಯೆ ನಾಂ ಪ್ರಾರ್ಥಿಪುದ ಚಿತ್ತದನುಕಂಪದಿಂ ಕೈಗೆಯ್ಯೆ ಭಕ್ತಿಯಿಂದ ॥
ಪದಗಳಂ ಪೂಜಿಸಿ ಸಹಸ್ರಗೋಧನ ವಸ್ತ್ರ ।
ಮದುಭುತದ ಚಿತ್ರಾನ್ನದಿಂದ ಭೂಮಿಸುರರ ।
ಸದರ ಸಂತಸ ಗೊಳಿಪೆ ಸಕಲೋಪಚಾರಗಳಲೊಂದು ಕುಂದೆನಿಸದಂತೆ ॥ (37)

ವನವಾಸವಂ ಕಳೆದು ಪ್ರೊಪ್ಪದಿಂ ಪತಿಸಹಿತ ।
ಪುನರಾಗಮನ ವಪ್ಪೊಲೆನ್ನ ಬಿನ್ನಪವ ನಿಜ ।
ಮನದೊತ್ತು ಸಾರ್ಚೆದಯೆಗೆಯ್ಯಲತಿ ಭಕ್ತಿಯಿಂದಾನು ಮಿಗೆ ಸಲ್ಲಲಿತದ ॥
ಘನತರತ ಸಾಸಿರಸುರಾಘಟದ ಮಾಂಸಗಳ ।
ಅನುಪದಂ ಪದವ ಪೂಜಿಪೆ ತಟಾಂತರವಾಗಿ ।
ಬನದೇವತೆಗಳನರ್ಚನಂಗೈವೆನೆಂದೆನುತ ಬೇಡಿಕೊಂಡಳ್ ಗಂಗೆಯ ॥ (38)

ಪಾವನತರಂಗಿಣಿಯು ದಾಂಟಿ ತಟವಂ ಸಾರಿ ।
ನಾವೆಯೊಳದಾಕ್ಷಣದಿ ತೊಳೆದು ಕರಪದಗಳಂ ।
ಕೋವಿದಾಗ್ರೇಸರಂ ಪುನರಾಚಮನಗೈದು ಕರೆದಾ ನಿಷಾದಪತಿಯು ॥
ತೀವಿದಾನಂದದಿಂದೊರೆದನೀಂ ಪರಿಪಾಲಿ ।
ಪಾವನಿಗೆ ನಡೆದೆಮ್ಮ ಮೂರ್ತಿಯಂ ಮಾನಸದಿ ।
ಭಾವ ಗೈದಾನಂದದಿಂದಿರ್ಪುದೆನೆ ನಮಿಸಿ ಗಮಿಸಿದಂ ನೃಪತಿ ನಯದಿ ॥ (39)

ಶೃಂಗವೇರಪುರಕ್ಕೆ ಕಳಪಿ ಗುಹನಂ ಚರಣಾ ।
ಸಂಗಡಿಗ ಲಕ್ಷ್ಮಣನೊಳೆಂದ ಮಾನುಷಲೋಕ ।
ಸಂಗವಿಲ್ಲದ ನೆಲಂ ಘುಡುಘುಡಿಸುತಿವೆ ಕ್ರೂರಶಾರ್ದೂಲಸಿಂಗಂಗಳು ॥
ಅಂಗನಾಮಣಿ ಜನಕತನಯಳೆಂದಿಗು ವಿಪಿನ ।
ದಂಘವಣೆಯಂ ತಿಳಿಯಳದರಿಂದ ಬೆದರದೋಲ್ ।
ಮುಂಗಡೆಯೊಳೈದಿ ನಾಲ್ದೆಸೆಯನಾರೈವುತಂ ಬರ್ಪ ಧರಣಿಜೆಯು ಪಿಂತೆ ॥ (40)

ಪಿಡಿದು ಶರಚಾಪಗಳನಾರೈದು ಸೌಮಿತ್ರಿ ।
ನಡೆಯೆ ಮುಂಗಡೆಯೆ ಪಿಂದೆಸೆಯೆ ರಾಘವ ಬರಲ್ ।
ನಡುವೆ ಜಾನಕಿ ಬರುತ ತೋರಿದಳ್ ತರವಮಾತ್ಮಪ್ರತ್ಯಗಾತ್ಮರ ಮಧ್ಯದಿ ॥
ತಡೆಯದೊಪ್ಪಿರ್ದ ಮೂಲಪ್ರಕೃತಿಯೆಂಬಂತೆ ।
ಸಡಗರದಿ ಮೃದುಪದನ್ಯಾಸಗೈವುತ ತನ್ನ ।
ಒಡಹುಟ್ಟಿದವನ ಸಂತಸಗೊಳಿಪಳೋ ಎನಲ್ ನೋಡಕರಿಗಚ್ಚರಿಯೆನೆ ॥ (41)

ಸೋಮಾರ್ಕರಂತಖಿಳ ಭೂತಳವ ಬೆಳಗುತ್ತಂ ।
ತಾಮಸೀ ರಕ್ಕಸರ ಭಯದಿ ಬಹ ಬ್ರಾಹ್ಮಣ ।
ಸ್ತೋಮಕಭಯವಕೊಡುತಲಿತಾತವಿತ ಸಂಪದವ ನಿಚ್ಚಸಿದ ಧನ್ಯರಿಂಗೆ ॥
ರಾಮಪುರಸವನ ರಾಜೀವನಿರ್ಜಿತ ವದನ ।
ನಾಮಹಾರಣ್ಯಮಂ ಕಳೆದು ಮುನಿಮಂಡಲದ ।
ಸೋಮ ಕಲಶೋದ್ಭೂತನಾಶ್ರಮನಿವಾಪಕಂ ಬಂದನಗರಾತ್ತನೂಜೆ ॥ (42)

(ಸಂಧಿ 16, ಪದ 722)

## ಹದಿನೇಳನೆಯ ಸಂಧಿ-

ಸೂಚನೆ ॥ ಮುನಿಗಳುಪಚರಣೆಯಂ ಕೈಕೊಂಡು ರಾಘವಂ ।
ಮನದ ಹರ್ಷದಿ ಭರದ್ವಾಜಾಶ್ರಮವ ಸಾರ್ದು ।
ವಿನಯಯುತರಸಲ್ಲಾಪದಿಂದಲಾ ರಾತ್ರಿಯಂ ಕಳೆದನಾ ರಘುವೀರನು ॥

ಹಿಮರಿಪುಜತನುಜೆ ಕೇಳ್ ರಾಮಚಂದ್ರಂ ಪ್ರಿಯದಿ ।
ವಿಮಲತಟನಿಯು ದಾಂಟಿ ಬನದೊಳ್ ವರಾಹಮಂ ।
ಸಮಹಾದುರುಂ ಪೃಷಾಮೃಷ್ಯಮೆನಿಸುವ ನಾಲ್ಕುವಿಧದ ಮೃಗಗಳನು ವಧಿಸಿ ॥
ಅಮರಧುನಿಯೊಳಗೆ ಸಾಯಾಹ್ನಿಕಕ್ರಿಯೆಗಳಂ ।
ಕ್ರಮದಿಂದ ರಚಿಸಿ ಫಲಭೋಜನದೊಳಂ ಕ್ಷುಧಾ ।
ಶ್ರಮನಿವಾರಣಗೈದು ಸಾರಿ ವಿಟಪಿಯ ನೆಗುತ ಲಕ್ಷ್ಮಣನೊಳಂತೆಂದನು ॥ (1)

ಇದು ಮೊದಲು ರಾತ್ರಿ ಬೇರಡವಿಯೊಳಿರ್ವರುಂ ।
ಇದು ಮೊದಲ್ಗೊಂಡು ಪುರಮಂ ಸೇರುವನ್ನೆಗಂ ।
ಸುದತಿ ಸೀತೆಯನು ರಕ್ಷಿಸೇಳ್ಕುಮೆಂದೊರೆದು ಸದಯ ಮಗುಳಿಂತೆಂದನು ॥
ಪುದಿದ ಸತ್ಕಂಠದಿ ಸುಮಂತ ಪಿಂತಿರುಗಿದುದು ।
ಹೃದಯಕ್ಕತೀವ ಸಂಕ್ಲೇಶಸಂಭವಮಾದು ।
ದವರಿಂದಲೆಮ್ಮ ನಗರಸ್ಮರಣೆಯಾಗುತಿದೆ ಪೇಳ್ವೆನೆಂತಾ ಪರಿಯನು ॥ (2)

ನೆನೆದಪ್ಪೆ ಮರುಗುತ್ತ ನಿದ್ರೆಯಂ ನೀಗಿ ।
ಮನದನುತಾಪದಿಂದ ತಾಂ ತೊಳಲುತಿಹ ನಾ ಭರತ ।
ಜನನಿ ಸಕಲಾಭೀಷ್ಟಮಾಯ್ತೆಂಬ ಸಂಭ್ರಮದಿ ಹಿಗ್ಗುತಿಹಳನವರತವು ॥
ತನಯ ಬರ್ಪನ್ನೆಗಂ ರಾಜ್ಯದಫಲಾಶೆಯಿಂ ।
ಜನಪನಂ ಬಾಧಿಪಳನಾಥ ವಾರ್ಧಕದೊಳಂ ।
ತನಗೆ ತೆತ್ತಿಗರೊರ್ವರಂ ಕಾಣದಳಲುತಿಹ ಪುಲಿಯ ಕಂಡೆರಳೆಯಂತೆ ॥ (3)

ಚಿತ್ತಾನುಸಾರಿಯಹ ಮಗನ ವಿಪಿನದ ಕಡೆಗೆ ।
ಮತ್ತನಾದರು ಕಳಪಲಾಪನೇ ಧರ್ಮಾರ್ಥ ।
ಮಿತ್ತಿರಕ್ಕಧಿಕಮಾಕಾಮಮೊಂದೇ ಮನಕೆ ತೋರುತಿದೆ ಭರತನಿಂಗೆ ॥
ಉತ್ತಮದ ಪದವಿ ಕೈಸಾರಲರಸಿನ ತೆರದಿ ।
ಮತ್ತಾರನುಂ ಗಣಿಸದಖಿಲಸೌಖ್ಯದೊಳಿರ್ಪ ।
ಮತ್ತಾವು ಬನಕೈದಲಯ್ಯಗಂ ಮುಪ್ಪಡಸಿ ಸತಿಯ ವಶವರ್ತಿಯಾಗೆ ॥ (4)

ಪರಿದು ಧರ್ಮಾರ್ಥಮೆರಡಂ ಕಾಮಮೊಂದನೇ ।
ಪರಿಸೇವಿಸುವನಾವನೆಮ್ಮ ಬೊಪ್ಪನತೆರದಿ ।
ನರರೊಳಗತಿಗರ್ಹಣೀಯಾಕರನೆನಿಪ್ಪನಿವ, ತಪ್ಪಲರಿದೇನೆಂಬೆನು ॥
ಅರಸಿನಂತಕ್ಕಮ್ಮ ಪೊರಡಿಪರೆ ರಾಜ್ಯಮಂ ।
ಭರತಂಗೆ ಕೈಗೈಯಲಶ್ವಪತಿಯಾತ್ಮಜೆಯು ।
ಪರಮಕಾರಣಮಾವಳೇನೆಂಬೆ ವೈಭವವ ಸೌಮಿತ್ರಿ ಪೇಳ್ವೆನೆಂತು ॥ (5)

ಸಿರಿಯ ಮದದಿಂ ಸೊಕ್ಕಿ ಕೈಕೆ ದುರ್ಮಾರ್ಗದಿಂ ।
ದರಸನಂ ಬಾಧಿಸುವಳಾ ದುಃಖದಿಂ ತೊಳಲು ।
ತಿರುವ ಕೌಸಲ್ಯೆಯ ಸುಮಿತ್ರೆಯ ಮಹದ್ಬಾಧೆಗೊಳಸದಿರಳನುದಿನದೊಳು ।
ಎರೆಯರಿಲ್ಲದನಾಥರಯ್ಯಿದೆಡೆಯೊಳಿರಸಲ ।
ಧರಣಿಜೆ ಸಮೇತ ನಾನಿರ್ಪ ಬನದೊಳ್ ಪೋಗಿ ।
ಹರುಷಗೊಳಸವ್ವೆಯರ ಧರ್ಮಪಂಥಾನಮೊಂದರಿತೆಮ್ಮ ವಾಕ್ಯಂಗಳ ॥ (6)

ಪೆತ್ತವರ ಚಿತ್ತಕಮಳಾನಂದ ಹರುಷಗಳ ।
ನಿತ್ತರಿಸುತ ಧರ್ಮ ಪುಟ್ಟಿದಂದಿಂ ಸಲಹೆ ।
ಬಿತ್ತರದ ಶೋಕಸಾಗರದ ನಡುಮಡುವಿನೊಳ್ ಮುಳುಗಿಸುವುದಳಲಿಸುವುದು ॥
ಪುತ್ತಾವಧರ್ಮಮೆನ್ನಂ ಪೋಲ್ವ ತನಯನಂ ।
ಪೆತ್ತಾಕೆಗಂ ಸುಖಂ ಪಡೆದವರಿಗತಿ ಶೋಕ ।
ಮಿತ್ತು ಜೀವನಗೈವ ದುರ್ಜನ್ಮಮಂ ಸುಡಲಿ ಫಲಮದೇಂ ಬದುಕಿ ಜಗದಿ ॥ (7)

ಸೌಮಿತ್ರಿ ಕೇಳಮ್ಮ ಮಾತೆಯರಿಗತಿಶೋಕ ।
ಭೀಮಧಾಮವನಿತ್ತಿ ಪುತ್ರನಾಮಕಶತ್ರು ।
ರಾಮನೆನಿಪಂ ಪುಟ್ಟಲೇತಕೆಂದಖಿಲ ಜನರಾಡುವರನೇಕವಿಧದಿ ॥
ಈ ಮಹಾದುಃಖಮಂ ಮನ್ನಿಸುವರಾರಕಟ ।
ತಾಮಸೋತ್ತಮನಾದೆ ನಪಕೀರ್ತಿಯಂ ತಾಳ್ದ ।
ಕಾಮಚರನೆಂದೆನಿಸಿತ್ತೈ ವಿಧಿಯದೇನೆಂಬೆ ತನಯ ಕೇಳ್ ದುಷ್ಕರ್ಮಕೆ ॥ (8)
ಇನಿತುಕ್ಲೇಶಮದೇತಕೆನುತಯೋಧ್ಯಾಪುರವ ।
ಮೊನೆಗಣೆಯೊಳಾಂ ಸಮಾಪ್ತಂಗೈವೆ ಕ್ಷಣಮಾತ್ರ ।
ವೆನಗಧರ್ಮಗೈಯದಿಹಪರಂಗಳ್ಕೆಡುವರೆಂಬರಲ್ತೆರದಭಯವು ॥
ಮನಕಂಡು ಮುಂಗಾಣದನುತಾಪಮೊಡೆಗೊಂಡು ।
ಬನದಿ ತೊಳಲುವುದಾದುದೆಂದನೇಕಾತುರದಿ ।
ವನಜಾಕ್ಷ ಮಾನುಷರ ಲೀಲೆಯಿಂ ಪೇಳುತಿಗ ಸೌಮಿತ್ರಿ ಭಯದಿ ನುಡಿದಂ ॥ (9)
ದೇವ ನೀಮಾನಸರ ಲೀಲೆಯಿಂ ಸುಖದುಃಖ ।
ಭಾವಭಾವಿತನೆನಿಸಿ ನಟಣೆಗೈವುದರಿಂದ ।
ದೇವಿ ಜಾನಕಿ ಪರಿತಾಪಗೊಳ್ಳುವಳೆನಗೆ ಭಯಶೋಕ ಮುಂಬರಿವುದು ॥
ಪಾವನಾಂಘ್ರಿಯನುಳಿದು ತನುವಿನೊಳಗಿರ್ದಪುದೆ ।
ಜೀವ ಧರಣೀತನುಜೆ ಗೆನಗೆ ಮಾತಂತಿರಲಿ ।
ತ್ರಿವಿಧರುಚಿಂತೆ ಪುಸಿ ನಿರ್ಲಿಪ್ತ ಪರಬೊಮ್ಮ ಕ್ಲೇಶಮೆತ್ತಣದು ನಿನಗೆ । (10)
ಜಗತಿಯೊಳ್ ಧರ್ಮಕೊಣೆಯು ಬಂದೊಡಾನುದಿಸಿ ।
ಬಗಿದಿಟ್ಟಧರ್ಮಮಂ ಧರ್ಮಸಂಸ್ಥಾಪನೆಯ ।
ಮಿಗೆ ಮಾಳ್ಪೆನೆಂದಮರರವುಗಳಿಗಭಯಮಂ ಮೊದಲಿತ್ತು ತಥ್ಯಗೈಯೆ ॥
ನಗೆಭೋಗಭೂಮಿಯೊಳಗವತರಿಸಿ ಸುಖದುಃಖ ।
ಬಗೆಗಳನುಕರಿಪುದಲ್ಲದೆ ನಿತ್ಯ ನಿರ್ಮಲಗೆ ।
ನಿಗಮಮಸ್ತಕಮಣಿಗದೆಲ್ಲಿಯದು ಸಂಕ್ಲೇಶ ಶುಚಿ ನೆನೆವರಿಂಗಪ್ಪುದೇ ॥ (11)
ಎಂದಖಿಲವೃದುತತ್ವನೀತಿಯುತ ವಾಕ್ಯಂಗ ।
ಳಂದ ಸೌಮಿತ್ರಿ ಬಿನ್ನಪಗೈಯಲವಧರಿಸಿ ।
ದಂದುಗದ ಶೋಕಮಂ ಪರಿದು ಹರ್ಷಾನಂದದನುಭವದೊಳಿರಲನ್ನೆಗಂ ॥
ಇಂದುವಾರುಣಿಯ ಕಳೆತನಕೆಳಸಲಾ ಲೋಕ ।
ಬಂಧು ಬಂದುದಯಾದ್ರಿಮಕುಟಮಾಣಿಕಮೆನಿಸ ।
ಲಂದು ಸುರನದಿಯ ಸ್ನಾನಂಗೈದು ರಚಿಸಿದಂ ಪೂರ್ವಾಹ್ನಿಕ ಕ್ರಿಯೆಯನು ॥(12)
ತದನಂತರದಿ ಧರಿಸಿ ಶರಚಾಪಮಂ ಬೇಗ ।
ಮದಹಸ್ತಿಗತಿಯಿಂದ ಮಾರ್ಗವಿಡಿದೈತರುತ ।
ಸುದತಿ ಸೀತೆಗೆ ವಿನೋದ ಕ್ರಮವ ತರುಗಳಂ ತೋರಿಸುತಲಾನಂದದಿಂದೆ ॥
ಕದನಕರ್ಕಶರಾಮ ಸೌಮಿತ್ರಿಸಹಿತ ಬಹು ।
ವಿಧವೃಕ್ಷಖಂಡಗಳ ಕಳೆಕಳೆದು ಮುಂ ।
ದದುಭುತದ ಪುಣ್ಯಬನ ಕಂಗೊಳಿಸೆ ದಿಟ್ಟಿಸಿದರತಿಮೋದಕರಚಿತ್ತದಿ ॥ (13)

ಅತಿವಿಚಿತ್ರದದೃಶ್ಟ ಪೂರ್ವಬನಗಳ ನೋಡು ।
ತತಿಹರ್ಷದಿಂದ ಸುರನದಿಸೂರ್ಯ ಸಂಭವೆಯು ।
ರತಿವೋದ ಸಂಗಮಸ್ಥಾನವಾದ ಪ್ರಯಾಗಮಂ ಕಂಡು ಸೌಮಿತ್ರಿಯೊಳ್ ॥
ಕ್ರತುವಹನ ಧೂಮಮಂಭ್ರಂಕವಾದಿಕಿ ಕಾಣ್ಬುದಿದು ।
ಯತಿಗಳಾಶ್ರಮ ಮೆಸುತ ತೋರುತ್ತಿದೆ ಚರಮಗಿರಿ ।
ಗತಿವಿಡಿದ ಭಾಸ್ಕರನುಮಿಂದಿನಿರುಳಲ್ಲಿರಲ್ವೇಳ್ಕು ಸಂತಸದಲೆನುತ ॥ (14)

ದೂರದೊಳ್ ವೈದೇಹಿಲಕ್ಷ್ಮಣರ ನಿಂದಿರಿಸಿ ।
ಸೂರವಂಶಾಗ್ರಣಿ ಮುನೀಂದ್ರನಾಶ್ರಮದೆಡೆಗೆ ।
ಸಾರಿ ಯತಿದಾರಕನ ಕರೆದು ನಗುತಿಂತೆಂದ ರಾಮಲಕ್ಷ್ಮಣರಿರ್ವರು ॥
ಧಾರಿಣೀಸುತೆಸಹಿತ ಬಂದಿರ್ಪರೆಂಬೀ ವಿ ।
ಚಾರಮಂ ಪಾರಿಕಾಂಕ್ಷಿಕ ಚಕ್ರವರ್ತಿಪದ ।
ಸಾರಸಕ್ಕರಿಪಿ ಬಹುದೆನೆ ವಟುಕ ಜವದಿಂದಲೈದಿ ವಿಜ್ಞಾಪಿಸಿದನು ॥ (15)

ವರಸುಧಾರಸಪಾನದಿಂ ತೃಪ್ತಿಯಾದಾತ್ಮ ।
ಹರುಷಗೊಳುವಂತಾ ತಪೋಧನಂ ಬಾಲಕನ ।
ಪರಮಮಾಧುರ್ಯತರವಾಣಿಯಂ ಲಾಲಿಸುತ ನಿಜತಪಃಫಲದ ರಾಶಿ ॥
ಕರತಳಕೆ ಬಂದುದಿಂದಿನ ದಿನಂ ಸುದಿನಮೆಂ ।
ದರಿದು ವೇಗದಿ ಪ್ರವೇಶಂಗೈಸವೇಳ್ಕುಮೆಂ ।
ದೊರೆಯಲಾವಟುಕ ವೇಗದೊಳೈದಿ ಶ್ರೀರಾಮನಡಿಗೆ ವಿಜ್ಞಾಪಿಸಿದನು ॥ (16)

ವಟುಕ ವಿಜ್ಞಾಪಿಸಲ್ಕಾಗ ವೈದೇಹಿ ಸಹ ।
ನಿಟಿಲ ಲೋಚನಮಿತ್ರನಾಶ್ರಮವನೊಳಪೊಕ್ಕು ।
ಘಟಿತ ಸಮ್ಯಕ್ ಜ್ಞಾನಕಲಿತಮುನಿಯಂ ಕಂಡು ನಿಜಗೋತ್ರನಾಮಂಗಳ ॥
ಪಟುತರೋಚ್ಚಾರಪೂರ್ವಕದಿಂದಲಭಿವಮಿಪ ।
ನಟನೆಯಂ ಕಂಡು ಮುನಿಪತಿ ಯಮಿತಹರ್ಷಸಂ ।
ಪುಟಿತ ಮನದಿಂದೆತ್ತಿ ಕುಳ್ಳಿರಿಸಿ ಪಂಪರಿಯ ನುಡಿಯಲುಪಚರಗೈದನು ॥ (17)

ಮತ್ತೆಮುನಿರಾಯನತ್ಯಾನಂದಸಂದೋಹ ।
ಮೊತ್ತರಿಸೆ ರೋಮಾಂಚಮಾಗಿ ಮೈಮರೆದಾರ ।
ಘುಣೋತ್ತಮಂಗರ್ಘ್ಯಪಾದ್ಯಾಚಮಾನಂಗಳಂ ಗೈಯಲನುಗೈಯ ನೋಡಿ ॥
ಪೊತ್ತಲ್ಲಮೆನುತಲುಪಚರಣೆಯಂ ನಿಲಿಸಿ ಮುನಿ ।
ಪೋತ್ತಮನೊಳಿಂದ ಸಂಯಮಿರಾಯ ಪೊಸತಿದೇಂ
ಚಿತ್ತವಿದುಮುಪಚಾರಗೈಯಲಿಚ್ಛೈಪೆಯೆನಗೆ ಕ್ಷತ್ರಕುಲಜಾತಗೆ ॥ (18)

ಅರಸ ದಶರಥನುದರದೊಳು ಪುಟ್ಟೆ ಸಕಲಸುಖ ।
ಭರಿತನಾಗಿರುತಿರ್ದ ರನ್ನೆಗಂ ಧರಣಿಪೊಳ ।
ತೆರೆಯನಾಗೆಂದೆನಗೆ ನೇಮಿಸಿದ ರಾಕ್ಷಣದಿ ಕೇಳು ಭರತನ ಮಾತೆಯು ।
ಸ್ಮರಿಸಿ ಪೂರ್ವದ ವರಗಳನು ಮಂದರಾವಚನ ।
ದುರುಬೆಯಿಂದವನುಯಾಚನೆಗೈಯಲಾ ದಿವ್ಯ ।
ಪುರುಷ ಧರ್ಮವ ಮೀರಲಳವಲ್ಲದಾರಾಜ್ಯಮಂ ದಯದಿ ಭರತಗಿತ್ತು ॥ (19)

ಪದಿನಾಲ್ಕು ವರುಷ ಬನದೊಳಗಿರ್ದು ಬರ್ಪುದೆಂ।
ದಧಿಪನಪ್ಪಣೆಯಿತ್ತೊಡಾಂ ಬರ್ಪೆನೆಂದೆನಲು ।
ಸುಮತಿ ಜಾನಕಿ ಸುಮಿತ್ರಾತನಯರೆರ್ವರುಂ ಬಂದರೆಡೆವಿಡದೆ ಮುದದಿ ॥
ಸದಯನಿವ ಸೌಮಿತ್ರಿ ಯೊಳಕೆ ಧರಣೀತನುಜೆ ।
ಪದಪಯೋಜಾನುಚರನಾನೆಂದು ಚಿತ್ತದೊಳ್ ।
ಚದುರಿಂದ ತಿಳದನುಗ್ರಹಿಸವೇಳ್ಕೆನೆ ರಾಮಚಂದ್ರನೊಳ್ ಮುನಿನುಡಿದನು ॥(20)
ಭವದೀಯಚರಣಕರುಣದೊಳರಿದೆನೀಲೋಕ ।
ವಿವರಗಳನೆಲ್ಲಮಂ ನಿನ್ನುಪಾಸನೆಯಲುದು ।
ಭವಿತವಾಗಿಹ ಪ್ರತೀಚೀದಿಟ್ಟಗಳ ಬಲದಿ ಕಾಲತ್ರಯಾವಸ್ಥೆಯಾ ॥
ಭವಣೆಯಂ ತಿಳದೆ ಪರಬೊಮ್ಮ ಲೋಕವ ಪೊರೆಯೆ ।
ಭುವಿಯೊಳವತರಗೈದು ದಂಡಕಾರಣ್ಯ ಸಂ ।
ಭವಋಷಿಗಳಂ ಸಲಹಲೈತರುವನೆಂದೆನಗೆ ಬಿದಿ ಪೇಳ್ದ ಪೂರ್ವಯುಗದಿ ॥ (21)
ಅಂದಿಂದಲಾನಮಿತ್ರ ನೇಮದಿ ಭವಚ್ಚರಣ ।
ಸಂದರ್ಶನಾಕಾಂಕ್ಷೆವಿಡಿದು ತಾವಕನಾಮ ।
ಬೃಂದಂಗಳಂ ಪಿಡಿಯುತ್ತಿಭಕ್ತಿಗೈದುದಕೆ ಕರುಣಾಳುಗಳ ದೇವನೆ ॥
ಬಂಧಿಸಿ ಜಟಾಭರವ ಚೀರವಾಸಗಳುಟ್ಟು ।
ಚಂದದಿಂ ಶರಚಾಪವಂ ಧರಿಸಿ ಸೌಮಿತ್ರಿ ।
ಒಂದೆಸೆಯ ವೈದೇಹಿಸಹಿತ ಕಂಗೆಸದೆ ಕೃತ್ಪ್ರಸುಫಲಂಗಳಂದೆ ॥ (22)
ಸರ್ವಭೂತಾವಾಸ ನೀಲಮೇಘದ್ಯುತಿಯೆ ।
ಪೂರ್ವದೇವಾಂತಕ ನಿರಂಜನ ನಿರಾತಂಕ ।
ಪರ್ವತಾತ್ಮಜೆಯ ಮಾನಸದೀಪ ಮುನಿತಾಪಹರಣ ನಿಜಚರಣಶರಣ ॥
ಶರ್ವನೀರೇಜಭವಕೇಶವಾದ್ಯರು ಮಾಳ್ಪ ।
ಖರ್ವವಾಚಾಮಗೋಚರ ಚರಾಚರಪೂರ್ಣ ।
ನಿರ್ವಾಣಪಕ್ಷ ದ್ವಿಜಸಂರಕ್ಷ ಚಿನ್ಮಾತ್ರ ನೀ ಕಣಾ ಪರಮ ಪುರುಷ ॥ (23)
ವ್ಯಾಪಕ ನಿರಂಜನ ಪುರಾಣಪೂರುಷ ಚಿತ್ತ ।
ಗೋಪಿಕಾನಂದಸ್ವರೂಪ ಶಾಶ್ವತ ನಿಖಿಲ ।
ರೂಪನಾನಕ್ರಿಯೆಗಳಳಿದುಳಿದ ಪರಬೊಮ್ಮ ವೇದಾರ್ಥ ವೇದರೂಪ ॥
ತಾಪಹರ ಹರವಿಷ್ಣು ಸೃಷ್ಟ್ಯಾದಿರೂಪ ನಿ ।
ರ್ಲೇಪ ಗಂಗಾಜನಿತಚರಣಪಂಕಜ ಚಿತ್ಸ್ವ ।
ರೂಪ ಪಾವನ ಪಾವನಾಂಘ್ರಿಯುಗ ಸನಕಾದಿಮೌನಿ ಹೃದಯಾಬ್ಜದೀಪ ॥ (24)
ತರಿದು ಭೂಭಾರಕರ ಪೊರೆದಖಿಳಧರ್ಮಗಳ ।
ನರರೂಪನಾಂತು ಗಳಸಲ್ಕೆಂದು ಬಂದು ನೃಪ ।
ವರನುದರಸಂಭೂತನೆನಿಸಿ ಮಾನುಷನಂತೆ ಮೋಹಿಸಿ ಜಗತ್ರಯವನು ॥
ಚರಿಪೆಯಲ್ಲದೆ ದುಃಖಸುಖಲೇಶಮೆಂಬೆರಡು ।
ಪೊರೆಯ ವೃದ್ಧಿ ಭವದೀಯಾಧ್ಯಾಸಂಗಳಂ ।
ದರಿತಿರುವೆ ನೆಲ್ಲಮಂ ವಂಚಿಸದೆ ಶರಣನಂ ಸಲಹು ದಯದಿಂದ ಪ್ರಿಯದಿ। (25)

ಎನುತ ರಘುಪತನ ಚರಣದ್ವಂದ್ವಗಳ ತೊಳೆದು।
ಮನದಣಿಯೆ ಪೊಸಮುಳ್ಳು ಮಸ್ತಕಾಗ್ರದಿ ತಳೆದು।
ತನಯಶಿಷ್ಯಾದಿಗಳಿಗಿತ್ತು ಸಂತಸವೆತ್ತು ತುತಿಸಿದಂ ಮಗುಳೆ ನತಿಸಿ॥
ಸನಕಾದಿಮೌನಿಜನವನುದಿನದಿ ಜಾನಿಸಲ್।
ಮನದ ಕೊನೆಗಂಟದೀ ಚರಣದಯುದಿಂದೆನ್ನ।
ಮನೆಯೊಳಂ ಕಂಡೆ ನಾನೇನು ಧನ್ಯಂ ಮಾನ್ಯ ನೀಜೀವದೊಳಗೆ ದೇವ॥ (26)
ಉಂಗುಟಾಗ್ರದಲಮರಧುನಿ ಜನಿಸಿಲೋಕರಥ।
ಸಂಗಮಿಲ್ಲದ ತೆರದೆೞಖಿಳಲೋಕಂಗಳ ಬೆ।
ಡಂಗಿನಿಂ ಪಾವನೀಕೃತಗೈದಳಾ ಜಲಮಂಭವ ಮೌಳಿಯಲಿ ಧರಿಸಿ॥
ಮಂಗಳಪ್ರದನಾಮನೆನಿಸಿದಂ ತಾವಕ ಪ।
ದಂಗಳಂ ಕಂಡೆ ಕೃತಕೃತ್ಯ ನಾನಾದೆ ಭವ।
ಪಿಂಗಿತೆಂದತುಲ ಸಂತಸವಿ ನುತಿಸುವ ಮುನಿಪಗಜಪೌತ್ರನಿಂತೆಂದನು॥ (27)
ಮುನಿತಿಲಕ ನೀಂ ಗೈವ ಸಂಸ್ತವದೊಳಂದೆನ್ನ।
ಮನಕತೀವ ಸುಹರ್ಷ ಸಂಭೂತವಾಯಿತು ನಿಜ।
ನೆನಹದೇನುಂಟು ಯಾಚಿಸಲೀವೆನೆನೆ ಮೌನಿ ಕೈಮುಗಿಯುತಿಂತೆಂದನು॥
ಇನುಕುಲಾಗ್ರೇಶ ಬೇಡುವೆನೊಂದ ಮಾತು ಬಂ।
ದೆನಗೆ ಮರೆಯಾಗದೊಲ್ ಭವದೀಯಮೂರ್ತಿ ನಿಂ।
ದನವರತ ಹೃದಯಾಬ್ಜದೊಳಗಗಲದಿರುವಂತೆ ಪಾಲಿಸನೆ ರಾಮನೆಂದಂ॥ (28)
ಜಗದೊಳುಳ್ಳಖಿಳವಸ್ತುಗಳ ಸಂಯಮಿಗಳಂ।
ಬಗೆಬಗೆಯೊಳರಿತು ಮನ್ಮಾಯೆಯುಂ ಪೊದ್ದಗೊಡೆ।
ದಗಣಿತದ ಮತ್ಪ್ರಸಾದೈಕಮಂ ಪಿರ ನಿನಗದಿದ್ದೆ? ಯೆಂದಿಗುಪೊದ್ದದು॥
ನೊಗಸಿರುವುದೀ ಮೂರ್ತಿ ಬಗೆಯುನಗಲದೆ ಸರ್ವ।
ರೊಗುಮಿಗೆಯೆನಿಪ್ಪನಿದ ತಪ್ಪದೆಂದಭಯಮಂ।
ನಿಗಮಗೋಚರ ರಾಮಚಂದ್ರ ನಾ ಮೌನಿವರಗಿತ್ತನತಿಕರುಣದಿಂದ॥ (29)
ಭಜಕಗೀಪರಿಯೊಳಭಯವನಿತ್ತು ಮುಂದಿನೊಲ್।
ಭಜಿಸಿ ಲೋಕಾಚರಣೆಯಂ ಮನುಷ್ಯರ ತೆರದಿ।
ಸುಜನಸನ್ನುತ ಮಹಾಮೌನಿ ನಿಮ್ಮಯಶ್ಯಾಲೆ? ಯೆಂದಾಸು ಧನ್ಯನೆನುತ॥
ವಿಜಯಸಂಪ್ರಾಪ್ತಿಗೈದುದು ಭವತ್ಸಲ್ಲಾಪ।
ಮಜಪದವಿಯಂ ನಿಮಿಷಮಾತ್ರದೊಳ್ ಕೈಗೈಸಿ।
ರುಜುಮನೋರಥ ಗೈದುದೇಂ ಪೇಳ್ವೆನೆನುತ ಉಪಚರಿಸಿದಂ ಮುನಿನಾಥನಾ॥
ದೊರೆಪ್ರಿಯಾತಿಥಿ ರಾಮನೈತಂದ ನೆಂದರಿದು। [(30)
ವರಮೌನಿ ಯರ್ಘ್ಯಪಾದ್ಯಾಚಮನ ಪುಷ್ಪಫಲ।
ವೆರೆದೋಪಚಾರಂಗಳಿಂದ ಸಂತಸಗೊಳಿಸಿ ಪರಪ್ರೀತಿಯಲಿ ಪೊಗಳಿ॥
ಪರಿಪರಿಯ ಚಿತ್ರಕಥೆಗಳ ಪೇಳುತಾನಂದ।
ಭರಿತನಾಗಿರ್ದಂ ಭರದ್ವಾಜಮುನಿ ರಾಮ।
ಪುರದಧೀಶನೊಳು ಸಂಭಾಷಣಂ ಗೈದ್ರತ್ತು ಕಳೆದನಾ ಯಾಮಿನಿಯನು॥ (31)
(ಸಂಧಿ 17 ಕ್ಕೆ ಪದ 53)

## ಹದಿನೆಂಟನೆಯ ಸಂಧಿ

ಸೂಚನೆ ॥ ಹರಿದಶ್ವನಂದನೆಯ ದಾಂಟಿ ಪಂಥಾನದೊಳು ।
ಮೆರೆವ ವಟವಿಟಪಿಯಂ ಕಂಡು ತತ್ಸ್ವಾವಸ್ನಾಯ ।
ನಿರುತ ವಾಲ್ಮೀಕಿಮುನಿಯಾಶ್ರಮಕೆ ನಡೆತಂದ ನಿಂದೀವರಾಕ್ಷ ದಯದಿ ॥

ಅಂಬುಜದಳಾಯತೇಕ್ಷಣೆ ಕೇಳು ಮಾನಿನಿಕು ।
ರುಂಬದೊಳ್ ಬೆರೆದವಿತ್ರಕಥೆಗಳಂ ಪೇಳುತಿರ ।
ಲಂಬುಜಾರಾತಿ ಪಶ್ಚಿಮದ ಕಡಲಂ ಸಾರಲನ್ನೆಗಂ ದ್ವಾದಶಾರ್ಕ ॥
ಬಿಂಬ ಪೂರ್ವೋದಧಿಯ ಸುಚ್ಚಳಿಸಿ ಕತ್ತಲೆಯ ।
ದೊಂಬಿಯಂ ತುಳವುತುದಯಾಚಲಾಗ್ರವ ನಿಲ್ಕೆ ।
ಲಂಬುಜೋದರ ತಪೋಧನರೊಡನೆ ಸಂಗಮಸ್ನಾನಕೈತಂದ ನೊಲಿದು ॥ (1)

ಸ್ನಾನಾಹ್ನಿಕ ಕ್ರಿಯೆಗಳಂ ರಚಿಸಿ ಸಕಲ ಸ ।
ಸ್ನಾನದಿಂ ಮುನಿತಿಲಕಗಭಿನಮಿಸಿ ಕುಳ್ಳಿರ್ದು ।
ಸಾನಂದದಿಂದ ಸಂಯಮಿಗೆ ವಿಜ್ಞಾಪಿಸಿದ ದೇವ ಪದಿನಾಲ್ಕು ವರುಷ ॥
ಆನಿರ್ಪರೊಂದುತಾಣವನರಿಪವೇಳ್ಕುಮೆನೆ ।
ಲಾನರೇಶನ ನುಡಿಗೆ ನಸುನಗುತ ಋಷಿನಿವಹ ।
ಮಾನಿತಭರದ್ವಾಜ ಮುನಿನಾಥನಿಂತೆಂದ ಬಂಧುರಸ್ನೇಹದಿಂದ ॥ (2)

ಅಮರಾಪಗಾಪುಣ್ಯಯಮುನಾನದಿಗಳಲ್ಲಿ ।
ವಿಮಲಸಂಗಮಶುಭಾಶ್ರಮ ವಿದು ಪ್ರಯಾಗಮಿದ ।
ಸುಮನಸರ್ ಬಯಸುವರನೇಕಸಂತೋಷದಿಂದೀ ತಾಣ ಬೇಕೆನ್ನುತ ॥
ನಮಿತಾಮರೇಂದ್ರ ನತರಕ್ಷಣದಯಾಸಾಂದ್ರ ।
ರಮಣೀಯಮಿಪಾವನ ಸ್ಥಾನದೊಳಗಿರ್ದೆಮ್ಮ ।
ಶ್ರಮನಿವಾರಣಗೈಯವೇಳ್ಕೆನಲ್ಕಾ ಮುನಿಪಗಿಂತೆಂದನಂಬುಜಾಕ್ಷ ॥ (3)

ಉತ್ತಮೋತ್ತಮ ಶುಭಸ್ಥಾನಮಹುದಾರ್ಯರಲೋ ।
ಗೋತ್ರಮರು ದಯದಿಂದಲೆಮ್ಮ ನಿಟ್ಟಿಸಿರೆಂದು ।
ಮೊತ್ತಗೊಂಡೈತರ್ಪರಾ ಜನರಸಲ್ಲಾಪಸಂಕ್ಲೇಶಹರ್ಷಂಗಳು ॥
ಸುತ್ತಿಗೊಂಡಪವಖಿಲಭೋಗಂಗಳುಳಮು ಮುನಿ ।
ವೃತ್ತಿಯಲ್ಲಿರ್ಪರಿಗೆ ಸಂಸರ್ಗದೋಷ ಋಷಿ ।
ಸತ್ತಮನೆ ವಿಜನರಮಣೀಯ ಸುಸ್ಥಲವೊಂದ ಸೂಚಿಸೆನೆ ಯತಿ ನುಡಿದನು ॥ (4)

ತಾತ ಕೇಳಲ್ಲಿಂದ ಮೂಗಾವುದವ ದಾಂಟೆ ।
ಜಾತರೂಪನಿಕಾಶಕೂಟವಿಶ್ರುತಶೈಲೋ ।
ದ್ಭೂತನಾನಾವೃಕ್ಷ ಮೃಗಪಕ್ಷಿ ಸಂಘಾತದಿಂದವಿಚಿತ್ರರಮ್ಯಮೆನಿಸಿ ॥
ವಾತಾತಪಂಗಳುಪಟಳಮಿಲ್ಲದತಿಸುಖ ಸ ।
ಮೇತಮಿಂ ಗಂಧಮಾದನದಂತೆ ಕಂಗೊಳಪು ।
ಪ್ರಿತನ್ನಕಾಂಚನದ ಶೈಳಶ್ರೇಣಿಷ್ಠಾಗಿಪ್ಪುದು ಪೋಗಿ ತೋರುವಂತೆ ॥ (5)

ಆಗಿರಿಯು ನಿಟ್ಟಿಸಿದರಿಂಗಖಿಲ ಸುಖಸಂಪ।
ದಾಗುವುದು ಲೇಶಪಾತಕ ಚಿತ್ರಸಂಭೂತ।
ಭೋಗದೆಂದಿಗೆನುತ್ತ ಲರಿತ್ತುತಾಪಸವರ್ಯರಾ ಶೈಲಕೂಟಂಗಳ
ಭೋಗಮಂದಿರಗೈದು ಬಿಡದಿರ್ಪರದರಿಂದ।
ರಾಗ ವೆಗ್ಗಳಿಕೆ ಸುರಕಿನ್ನರಾದಿಗಳಿಲ್ಲ।
ರಾಗಿರಿಯು ನಗಲದನವರತ ಸುಖದಿಂದಿರ್ಪರೇನೆಂಬೆ ನತಿಶಯಮನು॥ (6)

ಅಲ್ಲಿ ವೈದೇಹಿಸಹ ಸುಖದಿಂದಲಾನಂದ।
ದಲ್ಲಿರಲ್ಬಹುದೆನುತ ಪೇಳದ ತಪೋನಿಧಿಯು।
ಸೊಲ್ಲ ಕೇಳುತ ಹರುಷದಿಂದಲಭಿವಾದನಂಗೈದು ಬೀಳ್ಕೊಂಡು ಪೊರಟು॥
ಅಲ್ಲಿಂದ ಸೂರ್ಯಸಂಭವೆಯು ತಟದೆಡೆಗೈದಿ।
ಬಲ್ಲ ಹರದೆಸೆಯಿಂದ ಶೈವಲಿನಿಯಂ ದಾಂಟಿ।
ಚೆಲ್ಲಿಗಂಗಳ ಚೆಲುವೆ ಜಾನಕಿಯನೊಡಗೊಂಡು ನಡೆದ ಪಂಥಾನವಿಡಿದು॥ (7)

ಬರುತ ಬಟ್ಟೆಯು ವನವ ಕಡೆಗೊಳಿಸಿ ಮುಂದೆಸೆಯೊ।
ಮೆರೆವ ನೀಲಾಭ್ರನೀಕಾಶವತಿಶೀತಳತ।
ತರುಗಳರಸೆಂಬಂತೆ ಕಂಗೊಳಿಸೆ ವಟವೃಕ್ಷಸಾಕ್ಷಾನ್ಮಹೇಶನಂತೆ॥
ಧರಣಿಜಾತೆಯು ತೀವ್ರಹರುಷದಿಂದಭಿನಮಿಸಿ।
ಕರಗಳಂ ಮುಗಿದು ಪ್ರಾರ್ಥನೆಗೈದು ಭಕ್ತಿಯಿಂ।
ದೊರೆದಳಿಲೆ ನ್ಯಗ್ರೋಧಪಾದಪೋತ್ತಮ ಸಲಹು ವೇರಟವಿಯೊಳಗೆನ್ನುತೆ॥ (8)

ವನವಾಸವಂ ಕಳೆದು ಸುಖದಿಂದ ಪಿಂತಿರುಗಿ।
ಮನೆಗೆ ಬಪ್ಪವಸರದಿ ಮಂಗಳಪ್ರದಮೆನಿಪ।
ನನೆಗಳಂ ಫಲಸೀಧು ಪಕ್ವಾನ್ನಪಾನಂಗಳಂದರ್ಚನಂ ಗೈವೆನು॥
ಎನುತ ಪ್ರಾರ್ಥನೆಗೈದ ಜಾನಕಿಯು ದಿಟ್ಟಿಸುತ।
ಲಿನವಂಶಕೇತು ಸೌಮಿತ್ರಿಯೊಡನಿಂತೆಂದ।
ವನಿತೆ ಸೀತೆಯನು ಕರೆದೆಯ್ದು ಮುಂಗಡೆಯು ಪಿಂತಾಂ ಬಪ್ಪೆ ನೋಡುತೆನುತೆ॥ (9)

ಮುಂಗಡೆಯು ಲಕ್ಷ್ಮಣಂ ವೈದೇಹಿಯುರ್ನಡೆಯೆ।
ಸಿಂಗವಿಕ್ರಮರಾಮ ಮೆಲ್ಲಡಿಗಳಡುತನಡ।
ವಂಥವಣ್ಣೆಯಂ ಕಂಡು ಸರ್ವಲೋಕಾನಂದಗೊಳುತ ಭುಲ್ಲೈಸುತಿರಲು॥
ಅಂಗನಾಮಣಿ ಸೀತೆ ಯಾವ ಫಲಪುಷ್ಪಗಳ।
ನಂಗೀಕರಿಸಿ ಕೇಳಲಡಿಗಡಿಗೆ ಸೌಮಿತ್ರಿ।
ಹಿಂಗದೀವ್ರವಲಾ ಬನಂಗಳೊಳ್ ಚರಿಸಿದರನೇಕ ಸಂತೋಷದಲ್ಲಿ॥ (10)

ನುಡಿವ ಗಿಳಿಗಳನೊಂಪು ನಡೆವಂಚೆಗಳ ಗುಂಪು।
ಬಿಡಿವ ಮರುತನ ತಂಪು ತೊಡರುವಳಿಗಳ ಬೆಂಪು।
ನಡಗರದ ಪಂಚಮಧ್ವನಿಗಳಂ ಪಾಡುತಿಹ ಕೋಗಿಲಸ್ವನದ ನುಂಪು॥
ಬೆಡಗ ಬೀರುವ ಸೂರ್ಯಸುತೆಯ ತಟನಂದನದೊ।
ಳಡಿಗಡಿಗೆ ಚರಿಸುತ ವಿನೋದಗಳ ನಿಟ್ಟಿಸುತ।
ನಡೆದರಾಪಿನಮೇಕ ಕ್ರೋಶಮಾತ್ರವನಲ್ಲಿ ಮೆರುಗಾಣ್ಬವಟ್ಟರುಂಗಳು॥ (11)

ಮಾಡಿ ಸಂಧ್ಯಾವಂದನಾದಿಗಳ ಪಕ್ವಫಲ ।
ಮೂಡಿ ಸುಖನಿದ್ರೆಯಿಂ ಪವಡಿಸಿದರನಿತರೊಳ್ ।
ಮೂಡಗಡಲಿಂ ದೊಗೆಯಲರ್ಕನೆಚ್ಚೆತ್ತಾಗ ನಿಶಿಯು ಜಾಗರದಿಂದಲಿ ॥
ರೂಢಿಯೊಳ್ ಮಲಗಿರುವ ಲಕ್ಷ್ಮಣನನೆಚ್ಚರಿಸಿ ।
ಮಾಡಿ ಸ್ನಾನಾದ್ಯಖಿಲಕೃತ್ಯಂಗಳಂ ಜನವ ।
ನೋಡುತ್ತೈದಿದರು ಪಥವಿಡಿದು ವಾಲ್ಮೀಕಿ ಮುನಿಯಾಶ್ರಮಕೆ ಮೋದದಿಂದ ॥ (12)

ಸುರಪನಂದನದಂತನೇಕಫಲಪುಷ್ಪಸಂ ।
ಭರಿತವನನದಿನದಗಳಲ್ಲೆಸೆವ ಮೌನಿಗಳ ।
ಪರಮಪಾವನಿತ ಶುಭವಾಣಿಗಳನಾಲಿಸುತಲೊಳಪೊಕ್ಕು ದ್ವಿಜಪುವಹದಿ ॥
ಮೆರೆವ ವಾಲ್ಮೀಕಿ ಮುನಿಯುಂ ಕಂಡು ವೈದೇಹಿ ।
ವೆರದು ಚರಣಂಗಳಂಗಭಿನಮಿಸೆ ರಾಘವನ ।
ಪರಮಮಂಗಳಮೂರ್ತಿಯಂ ಕಂಡು ಹಿಗ್ಗಿದಂ ಪ್ರಾಚೇತಸಂ ಮುದದೊಳು ॥ (13)

ಕಂದರ್ಪನಿಭರೂಪಿನಮಿತ್ರಪ್ರತಾಪನಂ ।
ಬಂಧುರದ ನುಣ್ಚುರದ ಸುಜಟಾಕಲಾಪನಂ ।
ಇಂದೀವರಾಕ್ಷವೈದೇಹೀ ಸಹಾಯನುಂ ಸೌಮಿತ್ರಿ ಸಂಸೇವ್ಯನು ॥
ಮುಂದೆಸೆಯೊ ಗೋಚರಿಸಲೀತನೆ ರಮಾನಾಥ ।
ನೆಂದರಿತು ವಾಲ್ಮೀಕಿ ಋಷಿನಿವಹಸಹಿತೆದ್ದು ।
ಚಂದದಿಂದರ್ಘ್ಯಪಾದ್ಯಾಚಮನಂಗಳಿಂ ಸತ್ಕರಿಸಿ ಮಗುಳೆ ನುತಿಸಿ ॥ (14)

ಮಧುರತರಫಲಮೂಲಕಂದಂಗಳಂ ತಂದು ।
ಮುದದಿಂದಲಿತ್ತು ಸತ್ಕರಿಸಿ ಮತ್ತುಪಚರಿಸಿ ।
ಸದಯ ಸುಕ್ಷೇಮವೆ ಧರಾತಳಕ್ಷೇಮಕೆಂದೈತಂದಿರೆನುತ ನಯದಿ ॥
ಪದುಮನೇತ್ರನ ಮನುಷ್ಯೋಪಚಾರಗಳಂದೆ ।
ಹೃದಯಹರ್ಷಂಗೊಳುವ್ರೊಲೆಸಗಲಾ ಮುನಿವರನೆ ।
ಮುದದಿಂದಲೀಕ್ಷಿಸುತ ಶ್ರೀರಾಮನಿಂತೆಂದ ಮುಂತಪ್ಪ ಕಜ್ಜಮೊಂದ ॥ (15)

ಪಿತುರಾಜ್ಞೆಯಿಂದಾನು ಬನಕೆ ನಡೆತಂದ ಸಂ ।
ಗತಿ ದಿವ್ಯಚಿತ್ತಕಂ ವಿದಿತಮುಂಟಾದರೀ ।
ಸತಿ ಸಹಿತಸುಖದಲಿರ್ಪಾವಾಸಮಂ ತೋರೆ ಕೆಲಕಾಲಮಿರ್ದು ಬಳಿಕ ॥
ನುತಿಸಿ ಮುಂದೈದುವೆನೆನುತ್ತ ಪೇಳದ ನುಡಿಯು ।
ಯತಿಶಿಖಾಮಣಿ ಕೇಳಿ ನಸುನಗುತಲಿಂತೆಂದ ।
ಕ್ಷಿತಿಸುತಾರಮಣ ಸಜ್ಜನನಿಚಯಸಂಸ್ಕರಣ ಪೇಳ್ವೆ ಕೇಳ್ವ ಬುಧಶರಣ ॥ (16)

ನೀನೆ ನಿಖಿಲಾವಾಸನಿಲಯನಾದರು ಲೋಕ ।
ಸಾನಂದದಿಂ ಭವಸ್ಥಾನ ಧರಣಿಜೆಸಹಿತ ।
ಮಾನಿರ್ಪರೊಂದು ನೀಯವ ತೋರ್ಪುದೆಂದೊರೆದರದೇನ ವಿಜ್ಞಾಪಿಸುವೆನು ॥
ಮಾನಹಾನಿಯುಮಿಲ್ಲದು ಮಗುಳೆ ವೈರಗಳಿಲ್ಲದು ।
ಹೀನೋತ್ತಮಾಂಶಗಳಿಲ್ಲದಖಿಲ ಭೂತಸಂ ।
ಸ್ಥಾನಮಾನಸ ನಿಯತಮಂದಿರಂ ಭವದೀಯ ಚರಣಮಿರ್ಪೆಡೆಕೆ ಜೀಯ ॥ (17)

ಭವದೀಯ ನಾಮಕೀರ್ತನೆಯಿಂದ ಪಾವನಿತ ।
ಭವರಹಿತ ನಿರ್ದ್ವಂದ್ವ ನಿಸ್ಪೃಹ ನಿಜಾನಂದ ।
ಲವಲವಿಕೆಯಿಂತು ಧರ್ಮಾರ್ಥಧರ್ಮಗಳೆನುಳಿದು ಭವದೇಕಶರಣವೆನಿಸಿ ॥
ಶಿವಶಾಂತಿಯಂ ವಹಿಸಿ ಹರ್ಮ್ಯಬಿಮ್ಮಗಳುಳಿದು ।
ನವಲೋಷ್ಟಕಾಂಚನ ಸಮಾನಬುದ್ಧಿಯೊಳು ಮ ।
ತ್ತವಿರಳಾಚರಣಸಂಕಲಿತ ಮಾನಸಮುದುವೆ ಮಂದಿರಂ ಮನುಕುಲೇಶ ॥ (18)
ಪೊಂದಿ ಹಿತ್ರಮಂ ಹರ್ಷಗೊಳದರಿಷ್ಟಂಘಟಿಸಿ ।
ತೆ-ದು ದುಃಖಿಸದೆ ಸಂತತದಿವ್ಯತೇಜದೆ.ಳು ।
ಪೊಂದಿಸಿಯೆ ಮಾನಸವ ಮಗುಳೊಂದನರಿಯದಾನಂದದಿಂ ತುಷ್ಟಿವಡೆದು ॥
ಸಂದಿಲ್ಲದಖಿಲ ಭೂತಾವಾಸ ಪರವಸ್ತು ।
ವೊಂದೆನುತಲರಿತು ನಿರ್ದ್ವಂದ್ವ ನಿರ್ಲೇಪ ಸುಖ ।
ಮೊಂದರಿದಹೃದಯ ಮತ್ತಾಮಗ.ರೊಳ್ ಸೀತೆಸಹಿತ ನೀ ನಿರ್ಭಿದನಘಾ ॥ (19)
ನಿರತಬಿಡದಭ್ಯಾಸದಿಂ ದೃಢೀಕೃತವಾದ ।
ಚರಣಸೇವಾಸಕ್ತನಿಷ್ಠೆಯಿಂದನವರತ ।
ಪರಮಕೀರ್ತನೆಯಿಂದ ಪಾಪವಿರಹಿತವೆನಿಪ ಶಾಂತಮಾನಸವು ನಿನಗೆ ॥
ಪರಮಮಂಗಳಗೃಹಂ ನಿತ್ಯಕರಕೇಳ್ ನೀವ ।
ನೊರವೆನೇಂ ಭವದೀಯನಾಮ ಮಹಿಮೆಯ ಮಹ ।
ತ್ತರಿತೆಯನು ನಾ ಬ್ರಹ್ಮಋಷಿಯಾದುದೀ ಚೆಲ್ವನಾಮ ಪ್ರಭಾವಮಲ್ತೆ ॥ (20)
ಅವತರಣವಾಯಿತು ದ್ವಿಜಕುಲದೊಳಗೆ ಮತ್ತಖಿಲ ।
ಕುವಲಯ ತಿರಸ್ಕಾರವಾಚಾರ ಕೃತ್ಯಸಂ ।
ಭವಮಾದುದೆನಗೆ ಶೂದ್ರಾಂಗನೆಯರನವರತ ಸಂಸಾರಗೈವುತಿರಲು ॥
ಕುವರರುದುಭವಿಸಿದರನೇಕರವರಂ ಪೊರೆಯೆ ।
ನವನಿಸಿತು ಚೋರರೊಳ್ ಸಂಗಮಂದರಿಂ ತಾನು ।
ವಿವಿಧ ಶಸ್ತ್ರಾಸ್ತ್ರಗಳ ಧರಿಸಿ ಹಿಂಸಾಕರ್ಮದೊಳಗೆ ಶಮನಂತಾದೆನು । (21)
ಕೆಲಕಾಲವಿಾಪರಿಯ ದಿನಗಳೆಯುತಿರಲೊಂದು ।
ಜ್ವಲನ ಮೇಲಾಕಾರಮೆತ್ತಂತೆವಾಸರ ।
ಕುಲಶಿಖಾಮಣಿಗಳೈತರುತಿರಲ್ ಮಾರ್ಗದೊಳ್ ಕಂಡು ಕಡುಕೋಪದಿಂದ ॥
ನಿಲುನಿಲ್ಲಿಗೆ ಪೋಪಿರೆಂದು ಘರ್ಜನೆಗೈಯ್ಯು ।
ತ್ತುಲಿಯುತ್ತೈತರುವದಂ ಕಂಡು ಭಯಮಂ ಕೊಂಡು ।
ಚಲಿತಮಾನಸ ಮೆನಿಸುತಾಗ ಧೈರ್ಯದೊಳಿನ್ನು ಬೆಸಗೊಂಡರತಿವಿನಯದಿ ॥ (22)
ಪಾರುವಾಧಮ ದುಷ್ಟಶಬರಜನಕೃತ್ಯವ್ಯಾ ।
ಪಾರಮಂ ಕೈಕೊಂಡೆ ಯಾತಕೆನಲಾನೆಂದೆ ।
ನೋರಂತೆ ಪಸಿಯಿಪ್ಪ ಸತಿಸುತಾದ್ಯಖಿಲರಂ ಪೊರೆಯಲೋಸುಗಮೆನುತ್ತ ॥
ವೀರ ನೀಂ ಗೈದ ಪಾತಕ ಸುತಾದಿಗಳಿಂಗೆ ।
ಸಾರುವದೊ ಮಗುಳಿಲ್ಲವೋ ತಿಳದು ಕೋಶೀವಿ ।
ಚಾರಮಂ ಕೇಳ್ದು ಬಹುದೆನಲಾನು ಜವದಿಂದೆ ಗೃಹವ ಸಾರಿದನು ಬಳಿಕ ॥ (23)

ಸತಿಸುತಾದ್ಯಖಿಲರೆಲ್ಲರ ಕರೆದು ನಾಂಗೈದ ।
ಪ್ರತಿದಿನದ ಪಾತಕವನೆಲ್ಲರುಂ ಪಂಚಿಕೊಂ ।
ಡತಿಶಯದೊಳನುಭವಿಪ್ಪ ಪ್ರೋಮೇ ಖಿಲ್ಹ ಮೋವೇಳ್ವುದೆನಲೆಲ್ಲ ಕೂಡಿ ॥
ಕತಿಪಯಾಲೋಚನಂಗೈದು ನಿಶ್ಚಿತವಾದ ।
ಮತಿಯಿಂದ ಪೇಳ್ದರನುದಿನ ತಂದ ವಸ್ತುಗಳ ।
ಪ್ರತಿಜನರ್ ಕೊಂಬೆವಲ್ಲದೆ ದೋಷವೆಮಗಿಲ್ಲನುದಿ ಪೊಲ್ಲಪೋಪ್ರದೆನುತ ॥ (24)
ಕೇಳ ವಿಸ್ಮಿತನಾಗಿ ಭಯದಿಂದ ಪಥವಿಡಿದು ।
ಕಾಳದಾರುಚಿಂತೆಯೊಳ್ ನಿಗಳಪ್ಪಡೆಗೈದಿ ।
ಪೇಳೆ ವೃತ್ತಾಂತಮಂ ಶರಚಾಪಗಳ ಬಿಸುಟು ಪೊಡಮಟ್ಟು ದುಃಖದಿಂದ ॥
ಖೂಳತನದಿಂ ದುರಾಚಾರಕರ್ಮದಿ ಕಮಂ ।
ಗಾಳಾದೆ ನಿರಯಗಳ ನೆನೆಮ ನಡುಗುವ ಚಿತ್ತ ।
ದಾಳಾಪಮಂ ಕಳೆಸಿ ಬದುಕಿಪುದು ದಯಮೆರೆಸಿ ಮಾಳ್ದ ದುಷ್ಕೃತಗಳೊರಸಿ ॥ (25)
ಎನುತಲತಿದೈನ್ಯದಿಂದೆರಗಿದೆನ್ನಂ ನೋಡಿ ।
ಮುನಿಗಳತಿಕರುಣದಿಂ ನುಡಿದರೇವೇಳ್ ನಿನಗೆ ।
ಘನಸತ್ವಮಾಗಮಂ ಫಲಿಸಿತುಪದೇಶಿಸುನೆಮಮಿತಸುಖವಹ ಮಂತ್ರಮಂ ॥
ಮನವೊಲಿದೆನುತ, ತಮ್ಮೊಳ್ವೆ ದಿಶಿದಿಟ್ಟ? ।
ಯನುಕರಣಗೈದಿಪಂ ದುಷ್ಟ ವಿಪ್ರಾರ್ಥಮಂ ।
ವಿನಯದಿಂ ಮರೆವೊಕ್ಕನೀತನುದ್ಧರಿಸಲ್ಕದೇಂ ಪೇಳ್ವೆವೆನುತ ಮುದದಿ ॥ (26)
ಎಂದು ತಮ್ಮೊಳ್ ತಾಮೆತಿಳಿದು ಸರಸಿಜಪೀಠ ।
ನಂದನಂ ಭವವೀಯನಾಮವರ್ಣಂಗಳಂ ।
ಚಂದದಿಂ ವ್ಯತ್ಯಸ್ತಮಾಗಿ ಯೆನಗುಪದೇಶಗೈಯಲಾಂ ಭಕ್ತಿಯಿಂದ ।
ಹಿಂದುಮುಂದೆಣಿಸದನುದಿನ ಜಪಿಸು (ತಿರು) ತಿರುತ ।
ಪೊಂದಿದಂತಃಕರಣ ತನ್ಮಯಾವಸ್ಥೆಯಂ ।
ಬಂಧುರದ ಲೋಕದಾಟವ ಮರೆದು ಬಹುಕಾಲ ಸುಖಸಂತಸದಲಿರ್ದೆನು ॥ (27)
ಇರಲಿರಲ್ ಬತ್ತು ಪರಿವೇಷ್ಟನಂಗೈದೆನ್ನ ।
ಮರೆಸಲದರೊಳಗೆ ನಿಸ್ಸಂಗ ನಿಶ್ಚಲಹೃದಯ ।
ಬೆರೆದಿರಲ್ಬಹುಕಾಲ ಮಗುಳ್ ಬ್ರಹ್ಮರ್ಷಿಗಳ್ ಬಂದರಾಮಾರ್ಗ ವಿಡಿದು ॥
ಕರುಣದಿಂ ವಲ್ಮೀಕಮಂ ಕಂಡು ನೆನೆದೆನ್ನ ।
ಕರೆಯಲ್ ಪೆಸಗೊಂಡು ಗುರುವಚನಗೌರವದಿ ।
ಪೊರಮಟ್ಟು ಚರಣಕಾನತನಾಗೆ ದಿಟ್ಟಿಸುತ ಮುನಿಗಳತಿಹರ್ಷದಿಂದ ॥ (28)
ಪೋದುದೈಕ್ಯರಾತ್ರದನ್ನ ವಲ್ಮೀಕಭವ ।
ಪೊದುದರಿಂದ ವಾಲ್ಮೀಕಿ ಪೆಸರಿಂದ ಮುಕ್ತಿ ।
ಗಾಧಾರ ನಿಖಿಲಾರ್ಥವೀವ ಕೃತಿಯಂ ರಚಿಸಿ ತ್ರಿಜಗಮಂ ಪೊರೆವುದೆನುತ ॥
ಬೋಧನಂಗೈದು ಗಮಿಸಿದರಿತ್ತಲಂದಿಗಿಂ ।
ದೀಧರಾಧರದೊತ್ತಿಲಿರ್ದ ರಾಘವ ತ್ವತ್ಪ ।
ದಾದಿನಾಮಸ್ಮರಣಮಹಿಮೆಯೆಂತುಟೋ ಪೇಳ್ವರಾರ್ಗಳವು ಮೂಜಗದೊಳು ॥ (29)

ಮರಸೆಂದು ಜಪಿಸಿ ಸನ್ಮಾನಿಯರಾದೆಂ ಕ್ರಮದಿ ।
ಸ್ಮರಿಸುವರದೇನಹರೋ ತಕ್ಕಹಾ ಮಹಿಮೆಯಿಂ ।
ತೊರೆಯಲಪ್ಪುದು ಮತಿಗಗೋಚರನೆ ನೀಂ ಬಲ್ಲೆ ಎಲ್ಲದಾರರಿವರಕಟ ॥
ಚರಣ ಸೇವಕನಾದ ಕತ್ರದಿಂ ದಯಾರಸದಿ ।
ಕರುಣಿಸಿದೆ ಶ್ರೀರಾಮ ಪುರದರನೊತಲ್ಲ ।
ದುರುತವಸ್ವಾಖ್ಯಾಯು ಮಂತ್ರ ತಂತ್ರಗಳಲ್ಲಿ ಸಿಲುಕುವೆಯ ಪರಮಪುರುಷ ॥ [(30)

(ಸಂಧಿ 18, ಪದ 783.)

## ಹತ್ತೊಂಭತ್ತನೆಯ ಸಂಧಿ

ಸೂಚನೆ ॥ ಮುನಿಯು ಪುಣ್ಯಶ್ಲೋಕಚರಿತೆಯಂ ಸಜ್ಜನರು ।
ಮನವೊಲಿದು ಕೇಳುತಾನಂದಗೊಳುವಂದದಿಂ ।
ವನಚರಾಂಬಕನನಾಮ ಮಹಿಮೆಯಂ ಬಿತ್ತರಿಸಿದಂ ಶಿವೆಗೆ ಶಿವ ಮುದದೊಳು ॥

ಘೋರತರದುಷ್ಕರ್ಮವಶನಾಗಿ ಸಂತತಂ ।
ಚೋರತ್ವದಿಂ ಪಕ್ಷಿಮೃಗಹಿಂಸೆಯಿಂದೆ ನಂ ।
ನಾರಮಂ ಪೊರೆವಧಮನೀಚಜನ್ಮದೊಳುದಿಸಿ ಗೋವಿಪ್ರಹತಕನೆನಿಪ ॥
ಕೈರಾತಪತಿಗೆಂತು ಸುಜ್ಞಾನಮುದಿಸಿದುದು ।
ಕಾರುಣ್ಯದಿಂ ಬೆಸಸವೇಳ್ಕೆಂದು ಭಕ್ತಿಯೊಳ್ ।
ಧಾರಿಣೀಧರಜಾತೆ ಕೇಳಲ್ಕೆ ವಿನಯದಿಂ ಗೌರೀಶ ನಿಂತೆಂದನು ॥ (1)

ಚೆಲುವಾದುದಂ ಕೇಳ್ವ ಪ್ರಶ್ನೆ ರಾಜೀವಮುನಿ ।
ನೊಲವಾದುವಂಗಲ್ಲದುಳಿದಂಗಸಾಧ್ಯವಿದು ।
ನೆಲದೊಳೆಲ್ಲರು ಧನ್ಯರಪ್ಪ ಸಚ್ಚರಿತೆಯಂ ಬೆಸಗೊಂಡರದನಾಗಿರ್ಪೆನು ॥
ಪಲವುವೇದಾಂತಂಗಳರಿತ ವಿಪ್ರೋತ್ತಮರ ।
ಕುಲ ಲವತುನೆ ಪಿತಮಾತೆಯರಗಸುಯಲವ ।
ಪಲುಬುತೊಂದೆಡೆಯೊಳೊರಗಿರಲೊರ್ವ ಶಬರ ಕಂಡೆತ್ತಿ ಕೊಂಡೊಯ್ದು ಮುದದಿ ॥ [(2)

ಪೊರೆದನಾಶಿಶುವ ಕೆಲಕಾಲಂ ಪುಳಿಂದ ನಿಜ ।
ತರುಣನೆಂಬಭಿಲಾಷೆಯಿಂದ ಜವ್ವನಮವಗೆ ।
ಬರಲು ಜಾತೋಚಿತದ ಮದುವೆಯಂ ಮಾಡಿದಂ ತನಯನೆಂಬುತ್ಸವದಲಿ ॥
ಇರುತಿರುತಲಮಿತವೆಂಗಳ ಪಡೆಗಿ ಸಂತಸದಿ ।
ಕರುಣಮಂ ಪಡೆದು ಸುಖದಿಂ ಬಾಳುತಿಲ್ಲರಂ ।
ಪೊರೆವರೆ ಕಿರಾತಬಾಹುಳ್ಯಸಂಪಾದನಂ ಗೈದು ಬಾಹಾಬಲದಲಿ ॥ (3)

ಕ್ರೂರಹಿಂಸಾಕರ್ಮಗಳ ಮಾಡಿ ಕುಕ್ಕುಟಮ ।
ಯೂರ ಮಾಹಿಷವೃಷಭಮೃಗಧೂರ್ತಮೈ . . . ।
ವಾರಾಹ ಮೊದಲಾದ ಜಂತುಗಳ ವಧದಿಂದ ತೀರದಿರೆ ಸಂಸಾರವು ॥
ಚೋರ ಕಳವಿಂಗೆಳಸಿ ಪೇಟಖರ್ವಾದಿಗಳ ।
ತೂರಿದರ ವಿತ್ತಾಪಹಾರಗೈವುತಲುದರ ।
ದಾರ್ಢ್ಯಕೆಯ್ದಿಂದಿರ್ದ ಕೆಲವು ದಿನವೇನೆಂಬೆ ಯಮರಾಜನೆಂಬಂತಿರದಿ ॥ (4)

ಅತಿಕ್ರೂರ ಕಠಿಣ ಹಿಂಸಾ ನಿರತ ನಿರ್ಮೋಹಿ ।
ಪತಿತ ಪಿಂಗಾಕ್ಷ ಪಿಸುಣಂ ಸಾರಗೋವಿಪ್ರ ।
ಘಾತಕ ನೆನಿಸುತ ಚೋರವೇಷದಿಂ ಮಾರ್ಗಗಳ ಸುಲಿದು ಬಾಧಿಸುತ ಜನರ ॥
ಪ್ರತಿದಿನದೊಳೀಪರಿಯಲಿರುತಿರ್ದ ಘೋರನಂ ।
ಗತಿವಿಡಿದರಣ್ಯದೊಳ್ ಮನೆಗಟ್ಟಿ ಸಂತಸದಿ ।
ಸತಿಸುತಾದ್ಯಖಿಲ ಬಂಧುಗಳಿಂದ ಲೆರಡನೆಯ ಮೃತ್ಯು ತಾನೆಂಬಂದದಿ ॥ (5)

ಕೆಲವು ದಿನವೀಪರಿಯಲಾ ಶಬರನಿರಲಿತ್ತ ।
ನೆಲಕೊಂದು ಪನಿ ಬೀಳದಂತನಾವೃಷ್ಟಿ ಬಂ ।
ದೊಲಿದು ಪನ್ನೆರಡು ವತ್ಸರ ಭೂಮಿಯೊಳಗೆಲ್ಲ ಪಸುರಿಲ್ಲದಂತಾಗಲು ॥
ಕಲಿತಸಂಕಟದಖಿಲಪ್ರಾಣಿಗಳು ನಿಲ್ಲುವರೆ ।
ನೆಲನಿಲ್ಲದಂತಾಗಿ ಸಂವರ್ತಕಾಲದಂ ।
ತಲೆಯೆ ಭಯದಿಂದ ದೆಸೆದೆಸೆಗೋಡುತಸುಗಳಂ ಕಳೆದರತಿದುಃಖದಿಂದ ॥ (6)

ಇಂತಪಾರ ವಿಕಾರ ಜನಿಸೆ ಸಪ್ತಋಷಿಗಳ್ ।
ನಿಂತಿರರ್ ನೆಲವಿಲ್ಲದಲೆ ತೊಳಲಿ ಹಿಮನಗ ।
ಪ್ರಾಂತಕ್ಕೈದುಪವೆಯುತ ಬರುತಿರಲ್ ಪಥದೊಳಗೆ ಕಂಡನಾ ಶಬರನವರ ॥
ತಾಂ ತಳೆದು ಶರಚಾಪಗಳ ವೇಗದಿಂ ವಿಪ್ರ ।
ಪಂಕ್ತಿಗಂಡಡ್ಡೈಸಿ ಪೊಡೆದು ಸರ್ವಸ್ವಮಂ ।
ತಾಂ ತೆಗೆವೆನೆಂದೆನುತಲತಿವೇಗದಿಂ ಧೂರ್ತನೈತಂದ ಕೋಪದಿಂದ ॥ (7)

ಹಲಕಾಲಕೆನಗೆ ಸಿಕ್ಕಿತು ಬಹಳ ಧನಮೆನುತ ।
ನಲವೆತ್ತು ಕತ್ತಿಯಂ ಕಿತ್ತೆತ್ತಿ ಕೂಗುತ್ತಲೆಲೆ ।
ಎಲವೊ ಪೋಗದಿರು ನಿಲುನಿಲ್ಲು ನಿಲ್ಲೆನುತ ಲಯಕಾಲರುದ್ರನಂತೆ ॥
ಖಳ ಬರುವದಂ ಕಂಡು ಸಪ್ತಋಷಿಗಳ್ನಡೆವ ।
ರಳಮಾನಸದಿ ಮುಂದುಗಾಣದಲೆ ನಿಮಿಷದೊಳ್ ।
ಬಲಗುಂದಿ ಭಯದಿಂದಲೊರ್ವರೊರ್ವರ ನೋಡುತಾಲೋಚನಂಗೈದರು ॥ (8)

ಅಡಸಿದಾಪತ್ತಿನಲಿ ಧೈರ್ಯ ಗುಂದಲ್ ಕಾರ್ಯ ।
ಕೆಡುವದದರಿಂದಾವ ಪರಿಯಲಾಗಲಿ ಮನವ ।
ಪಿಡಿದು ಸಾಧಿಸವೇಳ್ಕುಮೆನುತೊರೆವ ಧೀಮಂತ್ರವಚನಮಂ ಸ್ಮರಣೆಗೈದು ॥
ಕಿಡಿಗಳುದುರಿಸುತಲಾರ್ಭಟಿಸುತೈತರುತ ದು ।
ರ್ನುಡಿಗಳಂ ಬೀರುವ ಪುಳಿಂದರಗ್ರೇಸರಂ ।
ಕಡೆಯಲೀಕ್ಷಿಸಿ ಕಮಲಪೀಠನ ತನೂಭವಂ ಪೇಳ್ದನುಪಾಯದಿಂದ ॥ (9)

ಜಲದಪತ್ರಸ್ಥಜಲಬಿಂದುವೆನೆ ಜೀವಿತಂ ।
ಜಲಬುದ್ಬುದೋಪಮಿತ ಶಾರೀರಭೋಗಗಳು ।
ಕಲಿತವಿದ್ಯುನ್ನಿಭಂ ಸಂಪದಭ್ರಚ್ಛಾಯೆ ಯೌವನಂ ಕ್ಷಣಭಂಗುರಂ ।
ಬಲುಶೋಕ ಕಷ್ಟತಾಪತ್ರಯ ವಿದೂಷಿತಂ ।
ಲುಲಿತಜರ್ಝರ ಕ್ರೂರಮಲಮೂತ್ರ ದುರ್ಗಂಧ ।
ನೆಲೆಯೆನಿಪುದೀತನುವ ಸ್ವಾಧೀನವೆಂದೆನಿಸಿ ನೀಚರುಂ ಜರಿಪರಕಟ ॥ (10)

ನೆರದಿಂದ ಬಲಿವುತಸ್ಥಿಸ್ತಂಭ ಸ್ನಾಯು ಬಿಗಿ ।
ವೆರದ ಮಾಂಸಕ್ಷತಜಲೇಪನಂ ಮತ್ತದಕೆ ।
ಪೊರೆವದಕೆ ಚರ್ಮದುರ್ಗಂಧರುಚಿ ಶೋಣಿತದ ಮಂದಿರಂ ಮಗುಳ್ ಕ್ಷಣಿಕಂ ।
ಸುರಿವಪಿತ್ತಶ್ಲೇಷ್ಮಮಶುಚಿಯಾಗಾರವಿದ ।
ನರಿಯದಲೆ ಹಿತವೆಂದು ಪರಲೋಕಶೋಕವಂ ।
ತೊರೆದು ನಿರಯವ ಸಾರ್ವರದರಿಂದವಮಶುಭವಿನ್ನೇನುಂಟು ಜೀವಿತರಿಗೆ ॥ (11)

ಭೂದಿವಿಜದೂಷಣಂ ತದ್ದ್ರವ್ಯಹರಣ ದಾ
ರಾದಿ ಸಂಕ್ಷೋಭಕರಣಾದಿಗಳ್ ಪಾತಕಂ ।
ಕ್ಷೋದಿಯುಹ ಸಾಬ್ರಹ್ಮಹತ್ಯಮಧುಪಾನ ಗುರುವಂಗನಾಗಮನ ಸ್ತೇಯ ॥
ಬಾಧಿಪವು ವಿಪ್ರವಿತ್ತಾಗ್ನಿಯೊಂದೇ ಧರ್ಮ ।
ಭೇದನಂಗೈದು ಭಸ್ಮೀಕರಣಗೊಳಿಸುವದು ।
ವಿಾಧಂತ್ರಿಯೊಳು ಶುಭಕೆಳಸುವರು ವಿಪ್ರಧನವಂ ಮುಟ್ಟಬಾರದಲ್ತೆ ॥ (12

ಪೊಂಪಿಪರ ಪೊರವುದಕೆ ಗೋವಿಪ್ರಲೋಕವಂ ।
ಕೊಂದು ತದ್ದ್ರವ್ಯವನ್ನಪಹರಿಸೆ ಪಾತಕಗ ।
ಳೊಂದನಿಟ್ಟಸಿ ಕ್ರೂರವಿಾ ಪಾಪಭೋಕ್ತೃಜನಕಂ ಹೋಮಂಗಳಲ್ಲದೀಯುನೆ ॥
ಎಂದು ತ್ರಿಳಯದೆನುತ್ತಲೊರೆಯಲಾ ಸಃಧುಜನ ।
ಸಂದರ್ಶನೋನ್ನತಿಮೆಯಿಂದ ಕಶಿಣಾವ್ಯಥ ।
ಪೊಂದಿದಂ ನಮ್ರತೆಯು ನೇನೆಂಬೆನೀ ವಿಪ್ರಜನಧರ್ಮ ಬೋಧನೆಗಳ ॥ (13)

ಸಾಧುಸಂಗತಿಯಿಂದ ಪಾಪ ಹತಮಹುದು ಮ ।
ತ್ತಾದಪುದು ಹೃತ್ಸಿದ್ಧಿ ಯದರಿಂದ ಪುಣ್ಯಸಂ ।
ಪಾದನಂ ದೊರಕುವುದು ತತ್ಫಲದಿ ಸ್ವರ್ಗಾದಿ ಭೋಗಗಳ್ ನೆಲೆಗೊಂಬುದು ॥
ಈಧರಾವಲಯದೊಳ್ ಸತ್ಸಂಗ ಕೈವಲ್ಯ ।
ಹಾದಿಯಲ್ಲವೆ ಚಂದ್ರಕರದಿಂದ ಶಿಲೆಗಳುಂ ।
ವೋದಗೊಳ್ಳವೆ ಸುಜನನಿದಿರಿನೊಳ್ ಕಾರುಣ್ಯ ನಿಲುವುದೇಚಧಿಕತರದಿ ॥ (14)

ಗಂಗಾವಗಾಹನಂ ತುಲಸೀಸಮರ್ಪಣಂ ।
ಸಂಗಸತ್ಪುರುಷರೊಳ್ ಹರಿಕೀರ್ತನಾದಿಗಳ್ ।
ಹಿಂಗಿಪುವು ಸಕಲಪಾತಕಸಮುದಯಂಗಳಂ ಸಾಧುಕರವೆಂದೆನಿಪವು ॥
ತುಂಗಪಾಪಿಷ್ಠಶಬರಂ ವಿಪ್ರವಾಕ್ಯಗಳ ।
ಸಂಗತಿಯು ಕೇಳ ಮತ್ತಭಿನಮಿಸಿ ಮೃದುನುಡಿಗ ।
ಳಂಥವಣೆಯಿಂದವೆಲ್ಲರ ಕುರಿತು ಕೇಳವಂ ತನ್ನ ಮನೆವಭಿಮತವನು ॥ (15)

ಮನೆಗೈದಿ ತನ್ನವರ ಕೇಳ ಬರುವನ್ನೆಗಂ ।
ಸನುಮತಿಸಿ ನೀವಿಪ್ರದಾನೆಂತು ನಂಬುವೆಂ ।
ಕೊನೆಗೆ ನಿಮ್ಮಯ ಜೀವಗಳ ಸೆಳೆಯದುಳಿಯೆ ನಾನೆಂತಿದಕುಪಾಯಗಳನು ॥
ಎನಗುಸಿರವೇಳ್ಕೆನಲೊಡದಲೆ ಮೈತ್ರಾವರುಣಿ ।
ವಿನಯದಿಂ ಪೇಳ್ದಕೇಳ್ ಶಬರ ಪ್ರಾತಃ ಸ್ನಾನ ।
ವರು ಬಿಟ್ಟು ಸಪ್ತಾಹವಿರ್ದ ವಿಪ್ರನ ಪಾಪಕಾನ್ಯೈದುಪೆನೆಂ ತಾಂಪೋದೊಡೆ ॥ [(16)

ಪಾದಜಗ್ರಾಮಸಂವಾಸಮೆಂದೆನಿಸಿ ಸಂ ।
ವ್ಮೋದದಿಂದೇಕಕೂಪೋದಕವ ಕೊಂಡಿರ್ದ ।
ಮೇದಿನಿಯಸುರ ಹೋಪ ಪಾಪಕಾಸ್ಪೈದುವೆಂ ಎನುತ ಗಾಧೇಯನೊರೆಯೆ ॥
ಸಾದರದಿ ವೈಶ್ವದೇವಂಗೈಯದನ್ನವಂ ।
ಮೋದುವ ದ್ವಿಜಾಧಮನ ಪಾಪಕ್ಕೈದುವೆ ಮುಂದೆ ।
ಪೋದೆನಾದೊಡೆನುತ್ತಲಕ್ಷಪಾದಂ ಬೇಳೆ ಜಮದಗ್ನಿ ತಾಂ ನುಡಿದನು ॥ (17)
ವ್ರತನಿಷ್ಠ ಶ್ರೋತ್ರಿಯಂ ವೃತ್ತಿಯಿಲ್ಲದೆ ದುಃಖ ।
ಜತೆಯಿಂದ ಬಳಲುತಿರಲಾತನ ತಿರಸ್ಕರಿಸಿ ।
ದತುಳಪಾತಕ ಬರಲಿ ಮುಂದಕಡಿಯಿಟ್ಟೊಡೆನಲಾ ಕಲಶಭವನೆಂದನು ॥
ಅತಿಶಯದ ವಿಭವದೊಳಗೇಕಸಾಕ್ಷಿಕನಾಗಿ ।
ಕ್ಷಿತಿಯೊಳನ್ನವನುಂಬ ವಿಪ್ರಪಾತಕವೆನಗೆ ।
ಜತ್ರೆಯಾಗಲಿಲ್ಲಿಂದ ಪೊರಪರೆಂದುಂ ನುಡಿಯೆ ಕಾಶ್ಯಪಂ ಮಗುಳೆಂದನು ॥ (18)
ತಂದೆತಾಯಿಗಳ ವಚನಂ ವಿಚಾರಿ ನಡೆದವಗಾವ ।
ಬಂಧುರದ ಪಾಪವಡಸುವದು ತತ್ಪಾಪಮೇ ।
ಬಂದಡಸಲೈದದೊಡೆನಲ್ಕತ್ರಿ ತಾಂ ನುಡಿದನಾವ ದ್ವಿಜ ಮತಿಯಿಲ್ಲದೆ ॥
ಬಂದು ಪ್ರಾಚೀಮುಖದಿ ವಿಣ್ಮೂತ್ರಗಳ ಜಡೆವ ।
ದಂದುಗಂ ಬಂದಡಸಲೆಂದೆಲ್ಲರೀಪರಿಯ ।
ಚಂದದಿಂದುಸಿರಲ್ಕೆ ಶಬರ ಸಂತಸಗೊಳ್ಳುತೈದಿದಂ ಮಂದಿರಕ್ಕೆ ॥ (19)
ಮೊರೆವ ನಾಯಿಗಳ ತಂಡ ಪರಿವ ನರಿಗಳ ಹಿಂಡಿ ।
ನರುಗಿಲ ವರಾಹಗಳ ಕೊರೆವಸ್ತ್ರಧಾರೆಗಳ ।
ಸುರಿವ ಶೋಣಿತವಮಾಂಸಕೆರಗಿ ಗೃಧ್ರೋತ್ತಂಸ ಮೊರೆವ ಕಾಳ್ಕುಕ್ಕುಟಗಳ ॥
ಪರಿದಿಟ್ಟ ಪಕ್ಕಗಳಲುರುಳ್ವ ಕಾಳ್ವಕ್ಕಿಗಳ ।
ಪರಪಿ ನಿಜತುಂಡಗಳ ಕಡಿವ ಪೇತಂಡಗಳ ।
ತರಿ ಕೊಲ್ಲುಕುಟ್ಟೆನುತಲಾರ್ಭಟಿಪ ಕೈರಾತಜನರಿಂದ ಪುರನೆಸೆದುದು ॥ (20)
ಒಂದೆಸೆಯ ಮಾಂಸರಾಶಿಗಳ ದುರ್ಗಂಧ ಮ ।
ತ್ತೊಂದೆಸೆಯ ಮಜ್ಜೆಮೇಧಸ್ಸಿನುರುಕಂಪಿಡಿದ ।
ವೊಂದೆಸೆಯ ಪಲವಗೆಯಮದ್ಯಭಾಂಡಂಗಳಂ ಸೂಸುತಿಹ ಪೊಲಸಿನಿಂದ ॥
ಒಂದೆಡೆಯಲಸ್ಥಿರಾಶಿಗಳ ಕೂರ್ಗಳಸಕ ।
ವೊಂದೆಡೆಯಲೆಲುಕಂಟಕಾಕೀರ್ಣ ಯಮಧರ್ಮ ।
ಮಂದಿರಕ್ಕಿಂದಧಿಕ ಮೆಂದೆನಿಸಿ ಕಂಗೊಳಸಿತೆಲ್ಲ ಭೂತಂ ಕಂಪಿಸೆ ॥ (21)
ಚಟುಲೋದ್ಯದಾಯುಧಗಳಂ ಪಿಡಿದು ಬಾಗಿಲೊಳ್ ।
ಭಟರಾರ್ಭಟಿಸುತಲ್ಲಿತೃಣಚಲನೆಯಾಗದಂ ।
ತಟನೆಗೈವುತ ಸರ್ವಜೀವರಂಗಗಮ್ಯಮೆನೆ ತೋರುವತಿಘೋರ ನಗರ ॥
ದಟವಿಗೈತರೆ ಶಬರ ಪತಿಯ ನಿಟ್ಟಿಸುತೆರಗಿ ।
ಪಟುತರಸ್ತುತಿಗೈವು ದಾಲಿಸುತ ಪೊಕ್ಕು ನಿಜ ।
ಮಟಕೈದಿ ದುರ್ಮ್ಮಾನದಿಂದ ಶಯ್ಯಾಗೃಹವ ಪೊಕ್ಕಲ್ಲಿ ಕುಳತಿರ್ದನು ॥ (22)

ದುಮ್ಮಾನದಿಂದ ಮಾತಾಡದೊಳ್ಳಮನೆಗೈದ ।
ಲುಮ್ಮಾನಸದ ಕದಡ ತಿಳಿಯಲ್ಕೆ ಮಯೂರ್ಯರ ।
ಧಮ್ಮಿಲ್ಲ ಪತಿಯು ಪೋರೆಗೈದಿ ಮಾಧುರ್ಯ ಮೃದುನುಡಿಗಳಿಂದುಪಚರಿಸಲು ॥
ಸುಮ್ಮನಿರಲಾಕೆಯತಿಶಯಾದಿ ಪದಗಳನೊತ್ತಿ ।
ಕಮ್ಮಗೋಲನ ಚದುರ ತೋರಲಾ ಶಬರಪತಿ ।
ಯುಂ ಮ್ಲಾನವದನದಿಂದಿಂತೆಂದ ಸತಿಯೊಡನೆ ಮಾಚದೆಳ್ಳನಿತಾದೊಡಂ ॥ (23)

ನಾರಿ ನಿನ್ನುಪಚಾರಶತಕದಿಂದಂ ಸುಖವು ।
ತೋರದೊಂದಂ ಕೇಳ್ವೆನಿದ ಸತ್ಯದಿಂದುಸಿರ ।
ಲಾರೈವೆ ದುಷ್ಟನಹೆ ಸತ್ಯಸದ್ಗತಿಜನಕ ವನೃತವೆನ್ನುವದೆ ನರಕ ॥
ಪಾರಮಾರ್ಥಿಕವಾಗಿ ಬೇಳ್ವುದೆನೆ ಸತಿ ನಗುತ ।
ಚೋರೇಶಗೆಂದಳಾಂ ತನುಮನಗಳರ್ಪಿಸಿಹೆ ।
ಕೂರ ವಂಚನೆಗೈಯೆ ದಯೆಗೈವುದೆನಲಾಕೆಗಿಂತೆಂದನಾ ಶಬರನು ॥ (24)

ಚೋರತ್ವಕೃಷಿತ ವಾಣಿಜ್ಯ ವಂಚನೆಯುತ್ತ್ಯ ।
ದಾರಮಿತ್ರದ್ರೋಹ ಗೋವಿಪ್ರಹತಿಗಳ ವಿ ।
ಚಾರಕೃತ ಕರ್ಮಗಳನೇಕಮಂ ನಾಂ ಗೈದು ಸಂಪಾದಿಸಿದೆ ವಿತ್ತಮಂ ॥
ಆರೈದು ಗಳಿಸಿದರ್ಥದಿ ಪುತ್ರ ಪೌತ್ರರುಂ ॥
ತೋರ ಸುಖದಿಂದಿರ್ಪರಿನಿಸುದಿನ ನಿನ್ನತ್ಯ ।
ದಾರಭೋಗವನುಂಡು ಸುಖಿಯಾದೆ ಸಂಪದಂ ವಶವಾಯ್ತು ನಿನಗೆ ಪ್ರಿಯದಿ ॥ (25)

ನಿಮಗೋಸುಗದೊಳನಿಸುದಿನ ಮಾಡಿದೀ ಪಾಪ ।
ವಮಿತವಿದರೊಳ್ ಕೆಲವನೀ ಪಂಚಿಕೊಳವೇಳ್ಕು ।
ರಮಣನರ್ಧಾಂಗ ನೀನಲ್ತೆ ಯೆನಲಾ ಚೋರಪತ್ನಿ ನಗುತಿಂತೆಂದಳು ॥
ಮಮತೆಯಿಂದೆನ್ನ ದಾಯಾದ್ಯಬಾಂಧವರುಗಳ ।
ಗಮಲಭೂಷಣವಸ್ತ್ರಮಾಲ್ಯಂಗಳಿತ್ತು ವಿ ।
ಕ್ರಮದಿಂದ ಪಾಲನಂಗೈದುದು ಯಥಾರ್ಥ ಸುಖದಿಂದಿರ್ದೆ ವಿನಿಸುದಿನವು ॥ (26)

ಎಲ್ಲರುಂ ಸೇವಕರು ಶಿಕ್ಷಾರ್ಹರುಂ ಮುನಿದು ।
ಕೊಲ್ಲಲುಂ ಪೊರೆಯಲುಂ ದಕ್ಷರಹುದದುಂದ ।
ಬಲ್ಲವಿಕೆಯಿಂದವರ ಪಾಪಂಗಳರಿತರಿತು ಶಿಕ್ಷೆಗೈವೇಳ್ಕು ಜವದಿ ॥
ಅಲ್ಲಿ ಪ್ರೇಮದಿ ಮೋಹದಿಂದ ಪಾಲನೆಗೈವ ।
ರೆಲ್ಲರೇಂ ಮಾಳ್ಪರದರಿಂದಕ್ಕಟ ಕೇಳ್ ಮತ್ತೆ ।
ನಲ್ಲ ನಿಮ್ಮಯ ಪಾಪಮಂ ಕೊಳ್ಳಲಾಗೈದ ರಾರಾದರುಂ ಕೊಳ್ವರೆ ॥ (27)

ತಾಂ ಗೈದ ಪಾತಕಗಳನ್ಯರುಂಬುದು ಶಾಸ್ತ್ರ ।
ದಂಭುವಣೆಯಲ್ಲ ಸತಿಪುತ್ರಶಿಷ್ಯರು ಮಾಳ್ಪ ।
ಮಂಗಳಂ ಗುರುವಿಗಂಟುವುದಲ್ಲವವರಿಗೀತನ ಪಾಪಸಮುದಯಗಳು ॥
ಸಂಗಿಯೆನಿಸವು ಪತಿಯು ಧರ್ಮಭಾಗಂ ಸತಿಗೆ ।
ಹಿಂಗದಾ ಸತಿಗೈದ ಪುಣ್ಯಪುರುಷಂಗೆ ನರ ।
ಪುಂಗವನೆ ಬರಲರಿಯದವರೆಲ್ಲ ವೇಳದಂತಿರ್ಪ ಸ್ವತಂತ್ರರಲ್ಲ ॥ (28)

ಮಾಡಿದವ ಮಾಡಿಸಿದ ನೋಡಿದವ ಪೇಳದರ್ ।
ಕೂಡುಂಬರೆಂದು ಧರ್ಮದಿ ಪೇಳ್ವರೀ ನಾಲ್ಕ ।
ನೋಡಲಧಿಕಾರಮೆಳ್ಳನಿತಿಲ್ಲದಂಗನೆಗೆ ಪೇಳದಂತಿರ್ದು ಕೊಟ್ಟು ॥
ದೂಡಿ ಮಗುಳುತ್ತರವ ನೀವೊಡಧಿಕಾರಮುಂ ।
ಮಾಡದವರಿಂ ಪಾಪಭಾಗಿಯೆನಿಸಳೆನುತ್ತ ।
ಲಾಲಿಸಲಾ ಶಬರಪತಿ ಸಂಕಟದಿ ತನಯನೊಡನಿಂತೆಂದ ಕ್ಲೇಶದಿಂದ ॥ (29)

ಪಾತಕಸಹಸ್ರಂಗಳುಪಪಾತಕಾಯುತಗ ।
ಳಾತುರದಿ ಮಾಡಿದುದನೆಣಿಸುವರಸಾಧ್ಯಮಾ ।
ಜಾತಿಕೃತ್ಯಗಳೊಳಗ್ಗಳನಾಗಿ ನಿಮ್ಮನುಂ ಪೊರೆದೆ ನಾನಿನಿಸುದಿನವು ॥
ಸೋತುದೆನ್ನಯ ಮನಂ ಸ್ಮರಿಸಿ ಪಂಕಮಗರ್ವ ।
ಬೀತು ಭಯಮುದಯಿಸಿದುದರಿಂದ ನೀಂ ಕೆಲವ ।
ನೋತುಕೊಳವೇಳ್ಕೆನೆ ನಸುನಗುತ ತಾತನೊಡನೆಂದ ನಿಷ್ಕರ್ಷೆಯಿಂದ ॥ (30)

ಕೇಳ ಕಿವುಡಾದವಾಡಲಮ್ಮದು ಜಿಹ್ವೆ ।
ತಾಳದುದು ಕಂಪನವ ಮನವೆನ್ನದೆಲೆ ತಾತ ।
ಜಾಳನುಡಿಯಿಂದದೇಂ ಫಲ ನಿನ್ನಪಾತಕದೊಳೆಳ್ಳನಿತ ಕೊಂಬುದಿಲ್ಲ ॥
ಆಳು ನಾಂ ದೊರೆ ನೀನು ಸ್ವಾಮಿಭೃತ್ಯನ್ಯಾಯ ।
ಕೇಳು ಪೋಷಕ ನೀನು ಪೋಷ್ಯ ನಾಂ ಪಿತ ನೀಂ ಕೃ ।
ಪಾಳು ಸುತನಾಂ ಶಾಸ್ತ್ರವಿಧಿಯಿಂದ ಸ್ತ್ರೀಸುತರ್ಗಿಲ್ಲವೆಳ್ಳನಿತು ಪಾಪ ॥ (31)

ಪರಿಜನದ ಭರಣಾಗಳಗರಿಯದೆಸಗಿದ ಪಾಪ ।
ದುರಿ ಪರರ ದಹಿಸುವದೆ ಪಲುಹಲೇಂ ಫಲಮಿದ ।
ನರಿತು ಧೀಮಂತರುಂ ಸತಿಸುತಾದ್ಯರ್ತ್ಥಮಾಂಗೆ ? ಸಗರಲೆ ಪಾತಕಗಳ ॥
ಸರಸಿಜದ ಪತ್ರದೊಳಗಿರುವ ಜಲಕಣದಂತೆ ।
ನಿರುಗೆಗೊಳುತಿರುತಿಲ್ಲದಂತೆ ಕಾಲವ ಕಳೆವ ।
ರೆರೆಯು ನೀ ನೆಸಗಿದುವ ನೀನುಣ್ಣದುಳಿದಪುದೆ ಪರರಿಂದಲುಂ ತೀರ್ವುದೇ ॥ (32)

ತನಯನಾಡಿದ ಮಾತ ಕೇಳ್ದು ಶಬರಾಧೀಶ ।
ಮನದೊಳಗೆ ಕಂದಿ ಕುಂದುತ ಚಿಂತೆಯೊಳ್ ನೊಂದು ।
ನೆನೆನೆನೆದು ಪೂರ್ವಕೃತದುಷ್ಕೃತಗಳಂ ನಿಲುಕದಾಳೋಚನೆಯ ಚಿತ್ತಕೆ ॥
ಜನಕಮಾದುದು ವ್ಯರ್ಥ ಬಯಲಾಸೆಯಿಂದ ಪರಿ ।
ಜನರಿಗೋಸುಗ ಶಮನಿಗಾಳಾದೆನೆನ್ನುತಾ ।
ಮುನಿಗಳಿರ್ದೆಡೆಗೈದಿದಂ ಶಬರ ನಿಂಗಳವ ತುಳಿದ ಮಾರ್ಜಾಲದಂತೆ ॥ (33)

ಮರೆದು ಧರ್ಮವ ವಿಷಯಪರಮೆಂದು ಹಿಂಸೆಯುಂ ।
ದರಿಯದಂದದಿ ಮನೋವಶನಾದನೆನ್ನಂತೆ ।
ನರಕಭಾಜನನಪ್ಪನಲ್ಲದುಳಿಯನೆನುತ್ತಲಾ ಪುಳಿಂದರ ನಾಯಕಂ ॥
ಕೊರಗುತಲಿ ತನ್ನೊಳಗೆ ಮುಂದೇನು ಗತಿ ಯೆನುತ ।
ತ್ವರಿತದಿಂದಂ ಬಂದನತಿಭಯಾತುರದಿಂದ ।
ಪರಮಪುರುಷರ ದರ್ಶನದ ಮಹಿಮೆಯಿಂದಲುದಯಮಾದ ಜ್ಞಾನದಿಂದ । (34)

ಎಂದು ಚಿಂತಿಸುತ ಬಿರುಗಾಳಿಯಂದದಿ ಬಹ ಪ್ರ।
ಳಂದನಂ ಕಾಣುತ್ತ ತಲ್ಲಣಿಸಿ ಭೀತಿಯಿಂ।
ಬಂಧುರಕ್ಲೇಶದಿಂದೊರ್ವರೊರ್ವರಂ ನೋಡುತಾಲೋಚನಂಗೈಯುತೆ ॥
ಇಂದಾದುದರಿಯ ಮನೆಯ ಮಾಮುಖದ ಬಾಧೆಯಿಂ।
ಕುಂದುಗೈದಪರಾರೆನುತ್ತ ಚಿಂತಿಸಿ ವಿಪದ।
ಬಂದೆಡೆಯ ರಘುವರನ ಮರೆಯೊಗಲ್ವೇಳ್ಕೆನುತ ನುತಿಸಿದಂ ಮಾರೀಚನು। (35)

ನಿಚ್ಚವೆಂದರಿತು ವಿಷಯಾನುಭೋಗಂಗಳನು।
ಮೆಚ್ಚಿ ಗುರುತರಪಾತಕಗಳೆಸಗಿ ನಿರಯಕ್ಕೆ ॥
ಬೆಚ್ಚದನುದಿನ ಹರ್ಷಗೊಳುತಿರುವೆ ಯುಗ್ರಕರ ಶಮನಕಿಂಕರರ ಬರವು ॥
ಬಚ್ಚಿಡುವೆನೆಂತು ಮೂರ್ತಿಯ ಮೂಢ ಬುದ್ಧಿಯಿಂ।
ಚುಚ್ಚಿ ಗುರುಪದವಿಡಿದು ಸಕಲಶೋಕಾಪಹರ।
ದೆಚ್ಚರಿಂ ನೆನೆ ಮನವೆ ರಘುವರನ ನೃಪವರನ ವಿಪುಳಕೋದಂಡಧರನ ॥ (36)

ಬಲುವಿಧದ ಕರ್ಮದೊಳ್ ತೊಳಲಿ ನಾನಾಯೋನಿ।
ನಿಲಯಗಳನುಳಿದಮಿತ ಪುಣ್ಯದಿಂಸದ್ವಿಪ್ರ।
ಕುಲಪುರುಷಜನ್ಮ ಸುವಿವೇಕಮಂ ಗಳಿಸಿರ್ದು ಪರವನುಂ ಮರೆದು ಬರಿದೆ ॥
ಕೊಲುವರೆಳಸುವೆ ನಿನ್ನ ನೀನೆ ಪಶುಕಬಳವಂ।
ನಿಲುಕದೆಡೆಯೊಳಗೆ ರೋಮಾಂಚ ಗೈವಂದಕುಂ।
ಸಿಲುಕದಲೆ ಮನವೆ ನೆನೆ ರಘುವರನ ನೃಪವರನ ವಿಪುಳಕೋದಂಡಧರನ। (37)

ಸತಿಪುತ್ರಮಿತ್ರಬಾಂಧವರೆಲ್ಲ ಸಂತತದಿ।
ನುತಿಸುವರದಕೇಳ ವೈಮನಸ್ಯಮೈಶ್ವರ್ಯಾದಿ।
ವಿತ್ತತದುರ್ಗರ್ವಪರ್ವತಮಸ್ತಕಾಗ್ರಮನ್ನಡರಿ ಮೋದದಲಿ ತೊಡರಿ ॥
ಕತಿಪಯಮನೋರಥಗಳಿಂದ ಚರಿಸುವೆ ಕ್ರೂರ।
ಮತಿ ನಿರಯಗತಿಯಪ್ಪುದದರಿಂದ ಮೌಢ್ಯಸಂ।
ಗತಿಯುಳಿದು ನೆನೆ ಮನವೆ ರಘುವರನ ನೃಪವರನ ವಿಪುಳಕೋದಂಡಧರನ ॥ (38)

ಜಾನಕೀಪತಿಯ ಸತ್ಕಥೆಯನನುದಿನ ಕೇಳಿ।
ಜಾನಿಸುತ ಮಾನಸದಿ ಮಂಗಳಸುಮೂರ್ತಿಯಂ।
ಸೂನಂಗಳಿಂದಲೆಡೆವಿಡದೆ ಪೂಜನೆಗೈದು ನತಿಸಿ ಮಗುಳೆರಗಿ ನುತಿಸಿ ॥
ಸಾನಂದಗೊಳುತಿರದೆ ಸತತಚಿಂತಾಸಕ್ತ।
ಮಾನಸದಲೇಂ ಫಲಂ ಮತ್ತೆ ಸಂಸಾರಸುಖ।
ಹೀನಮೆಂದರಿತರಿತು ನೆನೆ ಮನವೆ ರಘುವರನ ಕೋದಂಡಧರನ ॥ (39)

ಜರಿದಹಿತ ಷಡ್ವರ್ಗ ವೆಸನ ಸಪ್ತಕಗಳಂ।
ತರಿಬಿಟ್ಟು ಕ್ರೋಧಲೋಭಾದ್ಯಹಂಕೃತಿಗಳನು।
ಪರವನಿತೆ ಪರವಿತ್ತ ವಂಚನೆಗಳಂ ಕಳೆದು ದುರ್ಮಾರ್ಗಸಂಗತಿಗಳ ॥
ಪರಿದು ಸಜ್ಜನಸೇವೆಗಳನಪ್ಪು ಭಕ್ತಿಯಿಂ।
ಧರಣಿಜಾವರನಂಘ್ರಿಕಮಲಗಳ ಹೃದಯದೊಳು।
ಸ್ಮರಿಸುತಿರು ಮನವೆ ಶ್ರೀರಘುವರನ ನೃಪವರನ ವಿಪುಳಕೋದಂಡಧರನ ॥ (40)

ಪೆರರ ದೂಷಿಪ್ರದಘವು ಖುರ್ಚ್ಯವಚನವನುಡಿಯು ।
ದುರುಮರ್ಮಭೇದಗಳನುಳದು ಸಂಕೀರ್ತನೆಯು ।
ಪರಕೆಂದು ತ್ರಿಳದು ಹರಿಗೋವಿಂದ ಶ್ರೀ ವಿಷ್ಣು ಮಾಧವ ಮುಕುಂದ ಎನುತ ॥
ಸ್ಮರಿಸಿ ಸುಖದಿಂದಿರುವ ದಂದುಗವ ಬಳಸಿ ನೀ ।
ಕೊರಗುತಿರಲಿಳ್ಳನಿತು ಸುಖ ಜನಿಗದೆಲೆ ಮರುಳೆ ।
ಸುರವರಾರ್ಚಿತಚರಣನಂ ಬಿಡದೆ ಸ್ಮರಿಸು ರಘುವರನ ಕೋದಂಡಧರನ ॥ (41)
ಜಗತಿಯೊಳು ಪರಿಪೂರ್ಣ ಜಗದಾಕ ಯಂ ಸತ್ಯ ।
ಜಗಕನೀದೃಕ ಜಗದ್ರೂಪ ಜಗದಾಧಾರ ।
ನಿಗಮವಾಚಾಮಗೋಚರ ನಿರುಪಮಾನಂದ ಚಿನ್ಮಾತ್ರನೆಂದು ತಿಳದು ॥
ಬಗೆಯೊಳನುದಿನ ಭಾವಿಸು ತ್ರಿರಲು ಕರ್ಮಗಳ ।
ಸೊಗಡಳದು ನಿತ್ಯಸುಖ ಸಂಭವಿಪ್ರದದರಿಂದೆ ।
ಜಗಧೀಶನಂ ಬಿಡದೆ ನೆನೆ ಮನವೆ ರಘುವರನ ವಿಪುಳಕೋದಂಡಧರನ ॥ (42)
ಇಂತು ನಿಗಮಾಗಮೋದಿತಸಂಸ್ತವಂಗೈವು ।
ತಂತರಂಗದಿ ಶುಭೋದಯವಿಾವ ಮೂರ್ತಿಯಂ ।
ಚಿಂತಿಸಲ್ಕಾಖುಷಿಗಳಾರ್ತಿಯಂ ಪರಿಹರಿಸಲೆಂದು ಕರುಣಾವನಧಿಯು ॥
ಸಂತಸದೊಳಾ ವನಾಳಿತಾಳಶಿರವಿಕಾಂತಿ ।
ಯಾಂತರಿರ್ವ್ಯಾಕಾರದಿಂದ ಕಂಗೊಳಸಿದ ಮ ।
ಹಾಂತರಾನಂದಗೊಳಲಾ ಭಕ್ತವಶತೆಯಂ ಬೇಳ್ವರೆಂತಳವಪ್ಪುದು ॥ (43)
ಹರಿಯಜಭವಾದಿಗಳ್ ಪರಿಪರಿಯ ಭೇದಗಳ ।
ಪರಮ ವಾಕ್ಯಂಗಳಂದನವರತ ಪೂಜಿಸಲ್ ।
ಸಿರಿಸರಸ್ವತಿ ಗೌರಿಯರು ಮಾಳ್ಪ ಜಾನಕಿಂ ಸಿಲ್ಕದಿಹ ಪರಬೊಮ್ಮನು ॥
ಕರೆದಮಾತ್ರದಿ ಬಂದೊದಗಿ ಕಾನನದೊಳಗೆ ।
ಪರಿಪಾಲನಂಗೈವ ಪರಿಯನೇಂ ವರ್ಣಿಸುವೆ ।
ಸಿರಿಯಿರೆಯು ರಾಮಪುರವರನ ಭಕ್ತಾಧೀನನೆಂಬ ಬಿರುದುದ್ಧರಿಪೊಡೆ ॥ (44)

(ಸಂಧಿ 19, ಪದ 828.)

## ಇಪ್ಪತ್ತನೆಯ ಸಂಧಿ.

ಸೂಚನೆ ॥ ವರ್ಣಪಲ್ಲಟವಾಗಿ ಜಪಿಸಿದ ಕಿರಾತದ್ವಿಜ ।
ವರ್ಣವರ್ಣಿತನಾದ ಕಥೆಯ ವಿಸ್ತರಿಸಿದನು ।
ಪರ್ಣಾಧಿನಾಥ ಸುರಮೌನಿಗಣ ಸಂತಸದಿ ಕೇಳ ಭುಲ್ಲೈಸುವಂತೆ ॥
ಗಿರಿರಾಜಸುತೆ ಕೇಳ್ ದ್ವಿಜೋತ್ತಮರು ನುತಿಗೈಯ ।
ಶರಣಜನಮಂದಾರ ಶ್ರೀರಾಮ ದಯದಿಂದ ।
ಪೊರೆವೊಡಿಟ್ಟೈಸಿ ಮುಂಗಡೆಯ ತೇಜೋರೂಪಮನಿಸಿ ಕಂಗೊಳಸಲಲ್ಲಿ ॥
ಶರಚಾಪಗಳ ಧರಿಸಿ ಸುಸ್ಮಿತಮುಖೇಂದುವಿನೊ ।
ಳಿರುವ ಕಸ್ತೂರಿತಿಲಕ ಕೌಸ್ತುಭಾಲಂಕಾರ ।
ವಿರಷು ಸೀತಾಸುಮಿತ್ರಾತ್ಮಜರು ಸೇವಿಸಲ್ ರಾಜಿಸಿದ ರಘುವೀರನು ॥ (1)

ಆಪದುದ್ಧರಣ ಗೈವೊಡೆ ರಾಮಚಂದ್ರಮಂ ।
ತಾಪಸರಿಗಿಕ್ಕಡೆಯಲಿಸೆಯ ಕಂಡಾಮನ ।
ನ್ಯಾಪ ಜಗುಳಲ್ ಹಿಗ್ಗಿ ಸಂತೋಷದಿಂ ದಿವ್ಯ ಮೂರ್ತಿಯಂ ನೋಡುತಿರಲು ॥
ಕೋಪ ಕುಡಿವರಿಯೆ ಕೂಗುತೆ ಚೋರರಾಜ ಬಂ ।
ದಾಪರಮಪುರುಷರಿಗೆ ಸಾಷ್ಟಾಂಗದಿಂದೆರಗು ।
ತಾಪರಿಯ ಬಿನ್ನಪಂಗೈದ ನಿಜಭಕ್ತಿಯಿಂ ನಯವಿನಯ ನುಡಿಗಳಿಂದ ॥ (2)

ದೇವರಪ್ಪಣೆವಿಡಿದು ಪೋಗಿ ಗೃಹಮಂ ಸಾರು ।
ತಾವಧೂಸುತ ಭ್ರಾತೃಬಾಂಧವಾದಿಗಳ ಸಂ ।
ಭಾವಿಸುತ ಕೇಳದೆ ಮದೀಯಪಾಪವ ಪಂಚಿಕೊಳ್ಳವೇಳ್ಕೆನುತ್ತ ನುಡಿ ।
ಭಾವಮಂ ತಿಳಿದೆಂದರೆನ್ನೊಳೆಲ್ಲರ್ ತಮ್ಮ ।
ಕಾವರೀಶ್ವರ ನಿಮ್ಮ ಸೃಜಿಸಿರ್ಪರೆಲ್ಲರುಂ ।
ನೀವರಿಪಿದಂತಿರ್ದವರಿಂವ ಪಾತಕಂ ನಮಗಿಲ್ಲ ಪೋಗೆಂದರು ॥ (3)

ಇಂತವರ ವಚನಗಳ ಕೇಳ್ದನು ಭೀತಿಯು ।
ನ್ಮಾಂತು ಬಹುಕಂಪನದೊಳಾಮಸೆಯನುಳಪುತೋ ।
ರಂತೆ ಚಿಂತಾಕ್ರಾಂತನಾಗಿ ನೋಡಿದರಘವ ಪರಿವ ಪುಣ್ಯಾತ್ಮರೆನುತ ॥
ಶಾಂತರೆಡೆಗೈತಂದೆನ್ನೈಸೆ ಪರುಷಾಮೃದುಳ ।
ಮಾಂತಪ್ಪುದು ಘನವೆ ವಿಧುಹಸ್ತಸಂಸ್ಪರ್ಶಕಾ ।
ಕಾಂತಮತಿಮೃದುಳಮಪ್ಪುದು ಸಾಧುಸಂಸರ್ಗ ವೃದಿವಾಕಾರಣಮದಲ್ತೆ ॥ (4)

ಅತಿನೀಚಜನ್ಮಂಗತ್ರೀವ ಪಾತಕವೆನಗೆ ।
ಧೃತಿಗಳಿರ ಭವದೀಯಚರಣಸಂಸರ್ಗ ಬಂ ।
ತತುಲಪ್ರಾಕೃತಪುಣ್ಯಫಲದಿಂದಮಾಂ ಗೈದ ಪಾಪರಾಶಿಗಳ ಕಳಿಸಿ ॥
ಗತಿಯ ಕಲ್ಪಿಸಿ ಪೊರೆವುದೆಂದು ಬಳಕಂದು ಮುಂ ।
ದತಿಶಯದೊಳೆರಗಿ ಕೆಡೆದಿಹ ಕಿರಾತನ ನೋಡಿ ।
ಯತಿಗಳೆಲ್ಲರು ಭಯದೊಳಿರಲಾ ವಸಿಷ್ಠರಂ ನೋಡಿ ಕುರಂ ನುಡಿದನು ॥ (5)

ಇರಲೆಲ್ಲ ಮುನಿಗಳುಪದೇಶಮಂ ನೀಂ ಗೈದು ।
ಪೊರೆವುದೆನಲಾ ವಸಿಷ್ಠಂ ಪುಳಿಂದನೊಳೆಂದ ।
ನಿರಯಗತಿವಿಡಿವ ಕೈರಾತಭವ ಚೋರತಂ ಕ್ರೂರದುರ್ವರ್ತಿ ಕಠಿಣನು ॥
ನಿರತಮಾಂಸಾಹಾರಿ ಮಧುಪಾಯಿ ಶೂದ್ರ ನಿನ ।
ಗೊರೆವುದೆಂದತಿಶಯಿತಮಾಗಿರಲ್ಕರಿಯೆ ಬಂ ।
ಧುರದ ಗೋಗಣ ಗೈವೊಡಕ್ಕುಮೆ ದುರಾಚಾರ ಕೊಡದೈದೆಂದ ಕನಲಿ ॥ (6)

ಜ್ಞಾನಿಯ ವಿನೀತ ಶುದ್ಧಾತ್ಮ ಶ್ರದ್ಧಾಪರನಿ ।
ಧಾನಿ ದೃಢಕರ್ಮಾಭಿರತ ಸದಾಸ್ತಿಕ ನೆನಿಪ ।
ನಾ ನರಂ ದ್ವಿಜನಾದೊಡುಪದೇಶ ಯೋಗ್ಯನಹ ದುಶ್ಶೀಲನಾಗೆ ದ್ವಿಜನು ॥
ಜ್ಞಾನಾರ್ಹನು ಜಿತೇಂದ್ರಿಯ ಶೂದ್ರನಾದೊಡಂ ।
ತಾನರುಹನಾದುರಾಚಾರ ಗವಿಯಾದವಂ ।
ತಾನಿಪ್ಪುದು [illegible] ॥ (7)

ಮುನಿತಿಲಕ ನೀಂ ಭವಚ್ಛಿಷ್ಯ ದೃಢಚಿತ್ತದೊಳ್ ।
ಕೆನಿಸುಳದು ಮರೆಯೊಕ್ಕರೆಷ್ಟನುದ್ಧರಗೈವು ।
ದನುಚಿತಂ ತಾನಲ್ಲ ಸಾಧುಗಳು ಸರ್ವಜನ ಸಮದೃಷ್ಟಿವಿಹಿತರಲ್ತೆ ॥
ಎನಗೊಂದು ಕಾರಣೋದ್ಯೋಗಮಂ ತೋರುವೀ ।
ಮುನಿಗಳೆಲ್ಲರ್ ನಿಮ್ಮ ವಶರಾದ ಕತದಿಂದ ।
ನೆಱುಮತಿಸಿ ತತ್ಪದವ ತೋರುತಿಹರದರಿಂದೆ ಕೃಪೆವೆತ್ತು ಕಾಯ್ವುದೆನುತ ॥ (8)

ಕ್ರತುಲಿಹನವಮಾನ ಕೃತವಿದ್ಯಾಗಮಿಗಳಾಗ ।
ಳತಿಶಯಿತಮೆನಿಸುವ ವಿಪತ್ತಡಸಿದಾಗ ತ ।
ನ್ನತ್ರಿಕರುವ ಪರರ ನೀಚತೆಯು ಕೃತ್ಯಾಕೃತ್ಯಗಳನೆಣಿಸಬಾರದಲ್ತೆ
ವಿತತ ಗಹ್ವರ ಘೋರರಕ್ಕಸರಾತ ಹಸ್ತದೊಳ್ ।
ಜತೆಯಾಯ್ತುಸಿಮ್ಮಾಯು ಮಾನುಳಸಲುಳ್ಳದಪ್ಪುದು ।
ಕ್ಷಿತಿಯುಮರ ಮೂರ್ತಿಲಾಭಕ್ಕಧಿಕಮೇನುಂಟು ತಿಳದೆನ್ನ ಪೊರೆವುದುಚಿತಂ ॥ (9)

ಎಂದಮಿತಕಾರತರವಿನಯ ಮಿಶ್ರತನುಡಿಗ ।
ಳಂದಾಪ್ಪುಳಂದ ಬೇಳ್ವುದ ಕೇಳುತೀ ಋಷಿಗ ।
ಳೆಂದರು ವಸಿಷ್ಠನೊಡನೆಲೆ ಮಹಾಪುರುಷ ಕೇಳ ಸಮಯಮಂ ತಳವೊಡೆ ॥
ಹಿಂದು ಮುಂದೊಂದರಿಯ ಬಾರದಾಳೋಚನೆಯು ।
ತಂದು ನಿಶ್ಚಯ ಮನದೊಳೆಲ್ಲರಂ ರಕ್ಷಿಸುವ ।
ಬಂಧು ನೀನಲ್ಲದಿನ್ನಿಲ್ಲ ಕೋವಿದರನ್ಯರಾರೆನಲ್ ಮುನಿನುಡಿದನು ॥ (10)

ಚೋರರುಜೆಗಳ್ ವ್ಯಾಘ್ರಬಾಧೆಗಳ್ ವಿಪುಳತರ ।
ಘೋರವನನಿರ್ಜನತ್ರಾಣರಹಿತಸ್ಥಳದೊ ।
ಳಾರು ರಕ್ಷಿಸುವರಾಪತ್ಕಾಲಬಂದೆಡೆಯುಲತಿಕರುಣದಿಂ ಪೊರೆವೊಡೆ ॥
ನೀರದನಿಭಾಂಗನಾ ಶಬರಬೃಂದ ಭಂಗ ನಾ ।
ಪಾರುಮಸ್ತ್ರೀಪಾಪಹರಣ ಸುರನತಚರಣ ।
ವೀರರಾಘವನಲ್ಲದನ್ಯರಾರುಂಟಾತನಂ ಸ್ಮರಿಪೆನೆನುತ ತಿಳದು ॥ (11)

ಆಪದುದ್ಧಾರಕನನಖಿಲಭೂಧಾರಕನ ।
ಶ್ರೀಪದಸ್ಥಾಲಿಕನ ಶ್ರಿತಜನವ್ಯಾಪಕನ ।
ಪಾಪಸಂಭವಮಾದ ವ್ಯಾಧಿಭಯಸಂಹಾರ ಹರವಿರಿಂಚಿಪ್ರಮುಖರ ॥
ರೂಪಿನಿಂಮುದ್ಧರಿಸಿ ಸಂಹರಿಪ ನೆನೆವ ರಘು ।
ತಾಪೋಪಹರಣ ನಿಜಶರಣ ಶರಣಾಗಾರ ।
ದೀಪ ದೀಪ್ತಾಂಗ ರಘುಪುಂಗವನ ಭಜಿಸುವೆ ಜ್ಞೆರುಲ ಕೋದಂಡಧರನ ॥ (12)

ಎನುತಾತ್ಮರಕ್ಷಣಂ ಗೈಯುಬೋಸುಗ ಮುನಿಪ ।
ಮನದೊಳಗೆ ಶ್ರೀರಾಮಚಂದ್ರಮನ ಜಾನಿಸ ।
ಲ್ಕನುಮಾಗಿ ಬಾಹ್ಯವೃತ್ತಿಗಳಳಿದು ಮೌನದಿಂ ದಿಟ್ಟಿಸಲ್ಕೆನಿಮಿಷದಿ ॥
ಸನಕಾದಿಸೇವ್ಯ ಸಜ್ಜನವಿನುತಸಾಕಾರ ।
ಮಿನುಗಿದುದು ಸ್ವಾತ್ಮ ತತ್ವದೊಳ್ ತಿಳಿಮಿಲ್ಲ [illegible]
ಮೆನುವಂತೆ [illegible] (13)

ನೋಡುತಿರಲನ್ನೆಗಂ ಪರಮ ಮಂಗಳನಾಗಿ ।
ಮೂಡಿದುದು ಮರನೆಂಬ ಶಬ್ದವಾ ಮೂರ್ತಿಯಿಂ ।
ದಾಡಲೇನಾ ಭಕ್ತವತ್ಸಲತೆಯನಿತರರೊಳಗೆಚ್ಚತ್ತು ಮುನಿ ವೇಗದಿ ॥
ನೋಡಿದಂ ನಸುನಗುತ ವಿಪ್ರರಂ ಸಂತಸದ ।
ಲೂಡಿಸುವ ಮನವನವರೊಡನೆಂದನೀ ವೃತ್ತಿ ।
ರೂಢಿಗಚ್ಚರಿ ರಘೂತ್ತಮನ ಕರುಣೋತ್ತಮನ ಕಂಡುದಾಂ ಬೇಳ್ಪನೆನುತ ॥ (14)
ನೆನಪಿಡೆಯೊಳೊಂದು ಮಂಗಲ ಮೂರ್ತಿಯಂ ಕಂಡೆ ।
ಘನರವ್ರೋಪಮವಹಾದ ನಿಸ್ವನದಿ ಮರನೆಂಬ ।
ಧ್ವನಿಯೊಂದು ಕೇಳ್ಪುಟ್ಟಿದಾಮೂರ್ತಿ ಸರ್ವಾತ್ಮಕತ್ವದಿಂ ಕಂಗೊಳಿಸಿತು ॥
ಮುನಿಗಳರ ಮತ್ತಿದೇಂ ಕಾರಣವು ಕಾಣ್ಬುಡದೊ ।
ಲಿನಗೊರೆವುದೆನಲಾಗ ವಿಪ್ರರುಂ ಸಂತಸದಿ ।
ವಂಜಪೀಠನತನಯನೆಂದರಾ ಪ್ರತ್ಯಯದ ಪರಿಯ ವಿಸ್ತರವಹಾಗುತೆ ॥ (15)
ಮುನಿರಾಯ ಕೇಳ್ ಶಬರಗುಪದೇಶಗೈದಪುದು ।
ಘನನರಕವೆಂದರಿತು ಪ್ರಾಣಭಯದಿಂ ನಿನ್ನ ।
ಮನವಿ ವ್ಯಾಪಿಸಿ ನಿಖಿಲಭೂತಸ್ವರೂಪನಂ ಜಗದಭಿನ್ನತೆಯ ತೋರಿ ॥
ಬನದೊಳೀ ವ್ಯಾಧಗುಪದೇಶ ಗೈಯಲ್ಕೆಂದು ।
ವಿನಯದಿಂ ನೇಮಿಸಿದುದಲ್ಲದಿದು ಪೆರತಲ್ಲ ।
ಸನುಮತಿಸಿ ಮರನೆಂದು ಶಬರಗಂಬೇಳ್ದಮ್ಮನುಳಸುವುದೆ ಬೇಸೆಂದರು ॥ (16)
ಪರಮ ಮಂಗಳಮೂರ್ತಿಯೊರೆದುದದುವಂ ನೀಚ ।
ಗೊರೆಯೆ ಪಾಪಾನ್ಮುಕ್ತನಪ್ಪದಿದು ತಪ್ಪದೆಂ ।
ದೊರೆಯಲಾ ವಿಪ್ರರಾ ನುಡಿಯನಂಗೀಕರಿಸಿ ನಿರ್ಭರಾನಂದದಿಂದ ॥
ಮರೆಯೊಕ್ಕರಂ ಕಾಯ್ವುದಿದು ಧರ್ಮವೆಂದರಿತು ।
ಕರದಾ ಕಿರಾತನಂ ಬೇಳ್ದ ವಸಿಷ್ಠನೀಂ ।
ಹರುಷದಿಂ ಕೇಳ್ದ ಮಂತ್ರವನೀವೆ ಕೊಳ್ಳಲಿದರಿಂದಪ್ಪುದಖಿಲಮೆನುತ ॥ (17)
ದ್ವಿಜನೊರೆದ ವಾಣಿಯಂ ಕೇಳ ಸಂತಸದಾಳ ।
ಗಜರುವದನುಳದು ಪದಪದ್ಮಕಾನತನಾಗಿ ।
ಭಜಿಸಿ ಮತ್ತೆರಗಿ ಕೈಮುಗಿದು ನಿಂದೆಡೆವಿಡದೆ ನುತಿಗೈದನತಿಮೋದದಿ ॥
ಸುಜನಚಿತ್ತಂ ವೈರಹಿತ ಮುಳದುದಲ್ತೆ ನಿಜ ।
ಭಜಕರಂ ಕೃತಕೃತ್ಯರೆನಿಸಿ ಭೂಮಂಡಲ ।
ಕ್ಕಜಪದವಿಯಂ ಕೊಡುವುದಲ್ತೆ ರವಿಶಶಿಕರಗಳಂತೆ ಪೂತಂಗೈವುದು ॥ (18)
ಅತಿನೀಚ ಪಾಪಿ ದುಷ್ಟಾಚಾರ ಗೋಭಕ್ಷ ।
ಕ್ಷಿತಿಯಮರಘಾತಕಂ ಮರೆಯೊಕ್ಕನೆಂದರಿವು ।
ದತಿಶಯಭವಾಂಬುಧಿಯದಾಂಟುವರುಪಾಯಮಂ ದಯೆಗೈಯ್ಯಲಿಹಪರಗಳ ॥
ಹಿತವುಕಾರಣದಿಂದಲೆಸಗಿ ನಿಜಕರುಣದಿಂ
ಕಿತವನಂ ಪಾಲಿಪನದಾರು ಸರ್ವಪ್ರಾಣಿ ।
ಹಿತರಲ್ಲದುಳದರಿಂ ಸಕುದೆ ಕಳೆಗೊಳಿಸಿಧೆಂ ಪಾಪಸಾಗರ ಜಾಲಘಂ ॥ (19)

ಭವವೀಯದಿಷ್ಟವಮಾತ್ರದಿಂದ ಕೃತಕೃತ್ಯ ।
ಭವಮಹಾಂಭೋನಿಧಿಯ ದಾಂಟಿದ ದುಷ್ಕೃತ ಪ್ರಸ ।
ಭವವಿಲ್ಲದತಿಶಯಿತಶುದ್ಧನಾದೆಂ ಜೀವಧಾತನುಮನಂಗಳಿಲ್ಲ ॥
ಯುವತಿಸುತರೆಲ್ಲರಂ ಚರಣಕರ್ಪಿತಗೈದೆ ।
ತವಕದಿಂ ಶುಶ್ರೂಷಣಂಗೈವ್ರೊಡಾನಿರ್ದೆ ।
ನವಕವೆನಿಸುವ ವಸ್ತುನಿಚಯಂಗಳವೆ ಬೇಡಿದುದನೆಲ್ಲ ವರ್ಪಿಸುವೆನು ॥ (20)
ಗುರುಪಾದವಂದನಂ ತತ್ವೇವೆ ತದ್ವಾಕ್ಯ ।
ಭರಣಾವಿಹಪರಮೆರಡನನೆನಿವಿಷದೊಳಗಿತ್ತು ।
ಪೊರೆದಪವು ಕೈಯೊಡನೆ ಪರಬೊಮ್ಮನೆಂದರಿಯಲೊವಗುವ್ರದು ಸಂಪದಗಳು ॥
ಚರಣೋದಕವಕೊಂಡೆರಖಿಲಪಾತಕರಾಸಿ ।
ಜರಿದವಂಗಲ ಸುಮಂಗಲಮಪ್ಪದದಿಂದ ।
ದೊರಕಿದುದು ಪೂರ್ವಕೃತಸುಕೃತದಿಂದೆನೆಗೆ ಗುರುಸಾನ್ನಿಧ್ಯಪದವಿಾವ್ರೊಡೆ ॥ (21)
ಪರಮ ಪುರುಷನೆ ಗುರುತತ್ವವು ರೂಪಿನಿಂ ಸುಳದು ।
ಕರುಣಿಸಿದರಾಕ್ಷಣಂ ಕೈವಲ್ಯ ನಿತ್ಯಸುಖ ।
ಕರತಲಾಮಲಕವೆಂದೆನಿಪುದಿದು ಸಿದ್ಧಾಂತಮದರಿಂದ ಗುರುಪದಗಳ ॥
ನಿರತಪ್ರೂಜಿಸವೇಳ್ಕು ಕರುಣಾಪಾತ್ರದಿಂದು ।
ಸ್ಮರವೆನಿಪ ಪಾತಕಾಂಬುಧಿಯ ಗೋಷ್ಪದಿಯೆನಲ್ ।
ತರಿವೆ ಮಾರು ತಿಯಂತೆ ಯೆನುತ ನುತಿಗೈಪುತಂ ಮುಗುಳಿರಗಿದಂ ವ್ಯಾಧನು ॥(22)
ಎಂದೊರೆದ ಶಬರನುಡಿಗಳ ಕೇಳುತಚ್ಚರಿಯ ।
ಪೊಂದಿ ಮುನಿಪುಂಗವಂ ಋಷಿಗಳೊಡನೆಂತೆಂದ ।
ನಿಂದಿದೇನತಿಶಯಂ ಚೋರಂ ಗವಾಶನಂಗೀ ತತ್ವಬೋಧೆಯಲ್ಲಿ ॥
ಬಂದೆಂದಗಿತಕಟ ಶಾಸ್ತ್ರೀಯವಿಧಿಯಂವಿಾರ ।
ದಂದದ ವಿರಾಗವಮಾಂತಿಹೆ ಹೃದಯ ಮನಸಿನೊಳ್ ।
ಗೊಂದಿರುವ ನುಡಿಯು ದಾಟಿಪುದು ನಾಲಗೆಯಳ್ತೆ ಸಂಭವಿಸಿದುದ ನುಡಿದರೆ ॥ (23)
ಜನನವಿಾತಗೆ ಕಿರಾತರೊಳಾಗಲೀತತ್ವ ।
ಜನನವಪ್ಪದೆ ವಿಪ್ರಜಾತ ದುಸ್ಸಂಗಮವ ।
ನನುಕರಣೆಗೈದು ಪಾತಿತ್ಯಮಾಡಿದನಲ್ಲದಿವ ಶೂದ್ರಜನ್ಮನಲ್ಲ ॥
ಘನತರದ ಪುಣ್ಯಪೂರ್ವಾರ್ಜಿತಪ್ರಬಲದಿಂ ।
ಜನಿಸಿ ಸುಜ್ಞಾನ ಮಜ್ಞಾನಬಾಧೆಯ ಬಿಡಿಸಿ ।
ಕೊನೆಗಾಣಿಸುವವಲ್ಲದುಳದರಿಗೆ ವೈರಾಗ್ಯಕಲಿತವಾಗುವ್ರದೆ ಮನಕೆ ॥ 24)
ಬದ್ಧ ವಸ್ತುವಿಗೆಂವಿಗಾದರುಂ ಜ್ಞಾನಸಂ ।
ಬದ್ಧವಾಗದು ಕೃಷ್ಣ ಶುಕ್ಲಮಾಗದ ತೆರದೊ ।
ಳುದ್ಧತಾಚಾರದಿಂ ಪತಿತನೆನಿಸಿರ್ದವನ ಪೊರೆದು ಕಳುವುದುಚಿತವು ॥
ಸಿದ್ಧಂ ಶ್ರುತಾಕ್ಷರದ್ವಯವನುಪದೇಶಗೈ ।
ದುದ್ಧರಿಸವೇಳ್ಕೆಂದು ನಿಶ್ಚಯಿಸಿ ಸನ್ನಿಧಿಯ ।
ಶುದ್ಧಿ ಕಹೋಲವದೇಶಂಗೈದ ಸಪ್ತಪುತ್ರರಾ ಪುಳಿಂದನೊಳಿದು ॥ 25

ಪರಮಂತ್ರ ಕರ್ಣಪ್ರವೇಶವಾಗಲ್ ಪಾಪ ।
ಪರಿದು ನಿರ್ಮಲಿತಾಂತರಂಗವಾಗಲ್ಕಾಗ ।
ಚರಣಕಭಿನಮಿಸಿ ಸಂತಸಗೊಂಡು ಗೋಧನಂ ರತ್ನ ಮುಕ್ತಾಫಲಗಳ ॥
ಪರಭಕ್ತಿಯೊಳ್ ಯಥೇಷ್ಟಂತಂದು ಮುಂದಿಟ್ಟು ।
ಮೆಗೆವ ಶ್ವೇತದುಕೂಲ ರುದ್ರಾಕ್ಷಮಾಲೆಗಳ ।
ಗುರುಚರಣಕರ್ಪಿತಂಗೈದು ಕೃತಿಯ ನಿಸಿದನದೇನೆಂಬೆನರೆನಿಮಿಷದಿ ॥ (26)
ಧನಕನಕವಸ್ತುವಾಹನಗಳ ನೊಪ್ಪಿಸಿ ।
ವಿನಮಿತಾನನದಿಂದ ವಿವಿಧತರಪಾಪಗಳ ।
ವನಧಿಯಂ ದಾಂಟ ಪೂರ್ಣಾನಂದಮಯ ನಾದೆನೆನುತ ಪೇಳಲ್ ಶಬರನು ॥
ಮುನಿಗಳಚ್ಚರಿಗೊಂಡು ಸಲ್ಲಾಪಗೈದರಿವ ।
ಗಿನಿತೊಮ್ಮೆ ವೈರಾಗ್ಯ ಬಂದೊದಗಿ ಹರಿಭಕ್ತಿ ।
ಜನಿಸಿದುದು ಪೂರ್ವಸುಕೃತದ ಪಾಕಮಲ್ಲದಿದು ಚಿರಕಾಲಕಂ ಸಾಧ್ಯಮೆ ॥ (27)
ಎಂದು ತಮ್ಮೊಳು ತಾವೆ ಮಾತನಾಡುತ ಹರುಷ ।
ದಿಂದಲವನಿತ್ತ ವಸ್ತುಗಳೆಲ್ಲಮಂ ಕೊಂಡು ।
ಮುಂದಕೈದಲ್ ಹಿಮಾಚಲದತ್ತ ಸಾರಲವರಿತ್ತ ವ್ಯಾಧಾಗ್ರೇಶನು ॥
ಎಂದಿರ್ದ ವೇಷಮಂ ತ್ಯಜಿಸಿ ಶರಚಾಪಗಳ ।
ಪಿಂದಕಂ ಬಿಸುಟು ನದಿಯೊಳ್ ಮಿಂದು ವೈರಾಗ್ಯ ।
ದಿಂದ ವಲ್ಕಲಧಾರಿಯಾಗಿ ಕರದೊಳ್ ಪಿಡಿದ ರುದ್ರಾಕ್ಷಮಾಲೆಯನ್ನು ॥ (28)
ಸುರುಚಿರಸ್ಥಾನಮಂ ಕಂಡಲ್ಲಿ ಕುಳಿತು ಬಂ ।
ಧುರಕಪಥಮಂಗೈದ ಮಂತ್ರಾಧಿದೇವತೆಯ ।
ಕರದಲ್ಲದೀತಾಣಿ ಸಿಂದೇಳದೊಮ್ಮನದೊಳಾನಿರ್ದೆನೆಂದೆನುತ್ತ ॥
ಧರಿಸಿ ಧೃತಿಯಂ ತದೇಕಾಯತ್ತಚಿತ್ತದೊಳ್ ।
ಸಿರಿಯರಸನಂಘ್ರಿಯಂ ಪಿಡಿದು ಮುನಿವರನಿತ್ತ ।
ಪರಮಮಂತ್ರವ ಜಪಿಸುತಿರ್ದ್ದ ಬೆರತಂ ಪೊರ್ದ್ದದಾನಂದನಿಧಿಯ ನಾರ್ದು ॥ (29)
ಧರಿಸಿ ಮಾರುತನ ಹೃದ್ದೇಶದೊಳ್ ಬಾಹ್ಯಮಂ ।
ಸ್ಮರಿಸನಲೆ ಚಿತ್ತನುಗ್ರಹಗೈದು ಸಿಂದ್ರಿಯ ಗ ।
ಳಿರಕವಿಲ್ಲದೆ ಜಪಿಸಿದಂ ಮಹಾಮಂತ್ರಮನನ್ನಾದಿಯ ನಿತಿಲ್ಲದೆ ॥
ಹರಣಸುಖಮಂ ನೋಡ ಫಲಮೂಲ ಪರ್ಣಜಲ ।
ಮರುತನಾಹಾರದಿಂ ಕೆಲಕಾಲಮಿಾ ಪರಿಯ ।
ಲಿರುತಿರುತ ಹಲಕಾಲ ನಿತ್ಯೋಪವಾಸಮಂ ಕೈಕೊಂಡನಾ ಲುಬ್ಧನು ॥ (30)
ಇಂತು ತಪದಿಂದಾತನಿರುತಿರಲ್ ಸತಿಸುತರ್ ।
ಕಾಂತನಾಗಮನಮಂ ನೋಡಿ ಬರೆ ಕಡೆಯಲ ।
ತ್ಯಂತಸಂಕಟದಿಂದ ಪ್ರಿಯಬಂಧುಗಳ್ ಕೂಡಿ ವಿಪಿನದೊಳ್ ತೊಳಲುತರಸಿ ॥
ಚಿಂತಿಸುತ ಕಾಣದಾವೆಡೆಯೊಳಂ ದುಮ್ಮಾನ ।
ಮಂತು ಮಿಡುಕುತ ಬರಲ್ ಕೃಪಲಿನಿಯರು ತಟದಿ ।
ಮೊಂತ ಕಂಗಳ ಮುಗಿದು ಪಾಶಸಿಂ ಕುಳ್ಳಿರ್ದ ವಿಗ್ರಹವನೊಂ ಕಂಡರು ॥ (31)

ಕುರುಪಿಡಿದು ಸಾಧುಸಹುದೆನುತ ಪೊರೆಗೈತಂದು ।
ಕರೆವರತಿವಿನಯದಿಂ ನುತಿಗೈದು ನುಡಿಯುದಿರ ।
ಲರಸಿ ಸುತ ಮಿತ್ರಾದಿಗಳ್ ಕೆಲದಿ ಕುಳ್ಳಿರ್ದರ್ ಮೊದಲಿಸಿ ಮಾತಾಡಿಸಿ ॥

ಅರೆಗೊರಡಿನಂತಲುಗದುಲಿಯದಲೆ ಕಂಗಳಂ ।
ತೆರೆಯದಿರಲಹುದಲ್ಲವೆನುತ ತಮ್ಮೊಳ್ ತಾವೆ ।
ಪರಿಪರಿಯ ಯುಕ್ತಿಗಳೊಳಿಚ್ಚರಂಗೊಳಸುವೊಡುಪಾಯಗಳ ಮಾಳ್ದರೊಲಿದು ॥ (32)

ತಪಮನಾಚರಿಸುವುದು ಭೂದಿವಿಜಕ್ಷತ್ರಿಯರ್ ।
ತಪಿಸುವದಯೋಗ್ಯಜಾತಿಕ ನಿನಗದೆಲ್ಲಿಯದು ।
ವಿಪರೀತಕರಬುದ್ಧಿ ಕರಗತಸುಭೋಗಂಗಳಾಳದು ಕೃಪಣನ ತೆರದೊಳು ॥

ತಪಿಸುತಿಹೆ ದಾರಿದ್ರ್ಯವ ಡಸಿದವಗಂ ಪುಣ್ಯ ।
ವಿಪುಳತೀರ್ಥಂಗಳ ನಿಷೇವಣಂ ಸುಖಕಾಗ ।
ವಿಪುಳಶ್ರೀಕನಿಗಾತನಿದ್ರಲ್ಲಿ ಘಟಿಸುವವನೇಕಸುಕೃತಂಗಳೊಲಿದು ॥ (33)

ಚೋರಕರ್ಮಂ ಬೇಂಟೆಯಿಂದೆಮ್ಮ ಜೀವನಂ ।
ತೋರದೀ ಪರಿ ಶಬರಕುಲದೊಳಲ್ಲಿಯು ದಯಾ ।
ದೂರ ಕೈರಾತರೊಳ್ ಸನ್ಯಾಸಮೌನಂಗಳನುಚಿತಂ ಪುಲ್ಕಸರೊಳು ॥

ಆರ್ಯ [illegible] ಯಾರನರೊಳಂ ಸ್ನೇಹಕದರಿಗಳು ।
ನಾರಭೋಗಂಗಂಡುದಿಲ್ಲ ಮಿದು ಪೊಸತೆನುತ ।
ವೀರರಾಗಳಿಡಬಲದೊಳೀ ಪರಿಯ ಮೊದಲೆಗಳಂದ ಮಾತಾಡಿಸಿದರು ॥ (34)

ಸುರರು ಮುನಿಗಳು ಬ್ರಹ್ಮಚಾರಿಗಳು ಪಿತೃದೇವ ।
ರರಸುವರು ಗಾರ್ಹಸ್ಥ್ಯವಂ ಬಯಸುತಿಪನುಳಿಯೆ ।
ನಿರವಲಂಬನದಿಂದ ಧರ್ಮ ಘಟಿಸದು ಪರಂ ಕೈಸಾರದೇವೆನುತಲಿ ॥

ಅರಿದು ದುರ್ಬುದ್ಧಿಯಂ ಕೇಹಿತರು ಬೋಧಿಸುವ ।
ಪರಿಮಿಾದು ಸತಿಪುತ್ರ ಪೌತ್ರ ಬಾಂಧವಜನರ ।
ಹರುಷಗೊಳಸಾತ್ಮಸುಖಭೋಗಂಗಳಂ ತ್ಯಜಿಸಲಿದು ಸಮಯಮಲ್ಲೆಂದರು ॥ (35)

ಆವವಿಧದಿಂದರಿಪಲಾ ಚಿತ್ರ ಪರತರಕೆ ।
ಪಾವನಿತವೊಳಗಂಟೆ ಮುಗುಳ್ ಪೊರಸೂಸದಿರೆ ।
ಜೀವನಿತಕೆಂದರಿದು ಬಂಧುಜನರತಿಕ್ಲೇಶಗೊಳ್ಳೆ ಮತ್ತಿಂತೆಂದರು ॥

ಆವನೀಪರಿಗೈದ ನಾಂದ ವಂಚನೆಗೆ ।
ತಾವಾರೆ ಭ್ರಮೆಯೌಷಧಿಗಳತ್ತು ಕೆಡಿಸಿದನ ।
ದಾವ ಪುಣ್ಯಾತ್ಮನೋ ಚೋರಬಾಧಾಹರಣಗೈಯಲೀ ಪರಿಯೊರೆದನು ॥ (36)

ಕುತಕಮಂತ್ರೌಷಧಿಗಳತ್ತು ಬರೆದೊಳ್ ಮರನೆ ।
ಜತೆಗೈಸು ಕುಲವಪೋಗಾಡಿ ಪರಸುಖವೆನ್ನು ।
ವತಿಶಯವ ತೋರಿ ಭೋಗವ ತಾರಿ ಭ್ರಷ್ಟನಹ ತೆರಗೈದ ನಿಂದಾವನೊ ॥

ಜತೆಯಾದ ವ್ಯಷ್ಟಾನ್ನವಂ ಬಿಟ್ಟು ತಿರಿವುದರ ।
ಯತನಗೈದಂತಾಯ್ತು ನಿಜಕುಲೋತ್ತಮನುಳಿಯೆ ।
ಗತಿಯಹುದೆ ಮೂರ್ಖತೆಯನುಳಿದು ಸುಖದಿಂ ಬಾಳ್ವುದನು ಬಯಸು ಮತಿವಿಡಿದು ॥ (37)

ನಿರುತ ದುಷ್ಕರ್ಮಿಗೆ ದುರಾಚಾರರತನೆನಿಪ ।
ಗುರು ನೀಚಕುಪಿತ ನಿಜ ಕುಲಧರ್ಮಮುೞಿದಾತ ।
ಗೆಱಗುವವೆ ಶುಭಗಳವನೇಂಗೈದೊಡವು ತಪ್ತಲೋಹಸ್ಥ ಬೀಜವಂತೆ ॥
ನೆಱೆ ಪೊಳೆಯುಲಮ್ಮವೀ ಮೂರ್ಖಗಂ ಸಗ್ಗಮೇಂ ।
ದೊರವುದೆ ನಿರರ್ಥವಾದೊಱಗಿ ಫಲವೇನಱಸ ।
ಕರಕರಂ ನೋಡು ಸುಖ ಮೂಡೆನುತ ಬಹುವಿಧದಿ ಪೇಳ್ದರೆಡಬಲದೊಳೊಡನೆ ॥ [(38)

ರಾಮನಾಮಾಕ್ಷರದಲೆರಕವಾಗಿಹ ಚಿತ್ತ ।
ಭ್ರಾಮಕದ ನುಡಿಯ ಮೆಚ್ಚುವುದೆ ಪರಮಾನಂದ ।
ಭೂಮಿಯುಂ ವಶಗೈದು ಸುಖದೊಳಿಹ ನಿರ್ಮಲಿತ್ರಕರಣ ವಿಷಯಕ್ಕೆಱಗುಮೆ ॥
ಈ ಮಹಾ ಮಹಾಮಹಿಮ ನೀ ದುಷ್ಟಜನ ಸಂಸರ್ಗ ।
ಭ್ರಾಮಕಕ್ಕಲುಗುವನೆ ಬಂದೆ ಸಂಕಟಗೊಂಡ ।
ರೇಮ್ಮನೆಗೆ ಪೋಗುವೆವೆನುತ್ತಲವರೊಳಗೊರ್ವ ವೃದ್ಧಶಬರಂ ನುಡಿವನು ॥ (39)

ಪರದೊಳೆರಗಿಹ ಚಿತ್ತ ತಿರುಗಲಮ್ಮದು ದೋಷ ।
ವಿರುವದೆಮಗಿನ್ನಿಂಬಲಾತ್ಮಸುಖದಿಂದಾತ ।
ನಿರಲಿತ್ತಲಾವು ಪೋದಪೆವೆಂದು ವೃದ್ಧರ್ ನುಡಿಯಲವನ ಸತಿಸುತರೆಲ್ಲರು ॥
ತಿರುಗಿದರ್ ನಿಜಕುಲವ ಬೈವುತ್ತಲಿವನಿತ್ತ ।
ನಿರತಿಶಯ ತಪದಿಂದಲಿರೆ ಸರ್ವಭೂತಗಳ್ ।
ಪರಿಪರಿಯ ಶ್ಯಾಲೆಯನ್ನೆಸಗುತ್ತೈದಿದ ಪರಿಯನೇಂ ಪೇಳ್ವೆ ತಪದ ಸಿರಿಯ ॥ (40)

ಧರಣಿ ಜಲ ಮರುತಹುತಭುಗ್ನಭಗಳುಂ ತಪದ ।
ಭರಕಂಜಿ ನಿಜವೃತ್ತಿಗಳನುಳಿದು ಪೂರ್ವದಂ ।
ತುರುತರನಿಜಸ್ತುತಿಯ ನನುಕರಿಸಿ ಸೇರಿಸಲ್ಲಾದುದಾ ಬನ ನಿಮಿಷದಿ ॥
ವರಚೈತ್ರ ರಥ ನಂದನವನಾಧಿಕ್ಕೃತಿಗೈದು ।
ಪರಿಮಳತಕುಸುಮ ಷಡೃತುಗಳೊಂದೇಬಾರಿ ।
ಎರಕವಾದಂತೆ ಆದುದತಿಶಯವನೇಂ ಪೇಳ್ವೆನುರುತರತಪೋಮಹಿಮೆಯ ॥ (41)

ಮರನೆಲ್ಲ ಕಲ್ಪತರುಗಳತೆರದಿ ಫಲಪುಷ್ಪ ।
ಭರಿತದಿಂ ಪರಿಮಳಸುತಾರಾರು ಬೇಡಿದುದ ।
ಕರೆದೀವುತಿರೆ ಸೂರ್ಯಕ್ರತುಭುಜನಿರ್ಜತಾಪಗಳನುಳಿದು ಜೀವತತಿಯ ॥
ಪೊರೆವುತ್ತಬರಲುದಕ ದೋಷಮಂ ಬಿಟ್ಟಮೃತ ।
ಪರಿಯಾಗಲರಿತು ಮಾರುತ ಮೃದುಲತರಮೆನಿಸು ।
ತಿರೆ ಮಧುರತರ ವಾಕ್ಸೃಜನೆಗೈದಲಾಮಹದಚ್ಚರಿಯೆನಲ್ ಭೂತಳಕ್ಕೆ ॥ (42)

ಒಲಿದು ಪದ್ಮಾಸನವ ಚಲಿಸದಂತಿರೆ ಪಕ್ಷಿ ।
ಕುಲಮೆಲ್ಲ ಮಸ್ತಕದಿ ಮನೆಗಟ್ಟಿ ಕೃಮಿಕೀಟ ।
ಕುಲಜಂತುಗಳು ಶರೀರಾಶ್ರಯದಿ ಮಾಂಸಮಂ ತಿನುತಲಿರೆ ಪರದೊಳಿಟ್ಟು ॥
ಚಲುವ ದಿಟ್ಟಿಯು ಮುಗುಳ್ದಿರೆ ಸ್ಥಾಣುವೆಂಬಂತೆ ।
ಜಲಜಾಕ್ಷರಾಮಪುರಪತಿನಾಥನಂ ಭಜಿಸು ।
ವಲಘುತಪದಿರವ ನಭಿವರ್ಣಿಸುವರಾರ್ಗಳವು ವ್ಯಾಳಾಧ್ಯಗಂ ಸಾಧ್ಯವೆ ॥ (43)

(ಸಂಧಿ 20, ಪದ 871.)

## ಇಪ್ಪತ್ತೊಂದನೆಯ ಸಂಧಿ.

ಸೂಚನೆ ॥ ಬ್ರಹ್ಮಾದ್ಯನೇಕ ಋಷಿಗಳ್ಮೌನದಿಂ ।
ಬ್ರಹ್ಮನಿಷ್ಠೆಯೊಳಿರ್ದ ತಾಪಸಕುಲೋತ್ತಮಗೆ ।
ಬ್ರಹ್ಮವಿದ್ಯಾಧಿಗತವರಗಳಂ ಪಾಲಿಸುತ ಬೆಸಸುತ್ತಿರತಿಮೋದದಿಂ ॥

ಗಿರಿಜೆ ಕೇಳೇಕಾಂತವಾಗಿ ತರುಮೂಲದೊಳ್ ।
ಧರಿಸಿ ವಲ್ಕಲವಜಿನವಸ್ತ್ರಂ ಕುಶಾಸನದಿ ।
ಗುರು ಪೇಳ್ದ ರೀತಿಯೊಳ್ ತಾರಕವ ಜಪಿಸುತಂ ರಾಘವಾರ್ಪಿತಚಿತ್ತದಿ ॥
ಧರಿಸಿ ತಾಣಂಗಳಂ ಪಂಚೇಂದ್ರಿಯಂಗಳುರು ।
ತರತಾಪವಂ ನೀಗಿ ತಪಿಸುತಿಹ ತಾಪಸನೆ ।
ವರುಷಗಳ್ ದಿವ್ಯಸಾಸಿರವೊಂದು ನಿಮಿಷದಂತಾದುದೇನೆಂಬೆ ಪರಿಯು ॥ (1)

ಅನ್ನೋದಕಂಗಳಂ ತ್ಯಜಿಸಿರುವ ನತಿತಪಿಪ ।
ಬನ್ನವಂ ಕಂಡಖಿಲದೇವತೆಗಳಿಗೆ ಭೀತಿ ।
ಚೆನ್ನಾಗಿ ಪುಟ್ಟಿದುದು ಸ್ವಸ್ಥಾನಕೇನಹುದೊ ವಿಪರೀತಮೆಂದೆನುತ್ತ ॥
ಖಿನ್ನಮಾನಸದಿಂದ ನೆರೆದೆಲ್ಲರುಂ ಮಘವ ।
ಸನ್ನಿಧಿಯನೈದಿ ಸಂಕಟದಿಂದ ಮುನಿವೃತ್ತ ।
ವನ್ನು ವಿಜ್ಞಾಪಿಸಲ್ಸುರಪ ಚಿಂತಿಸಿ ಮನದೊಳಾಲೋಚನಂಗೈದನು ॥ (2)

ಆವ ಪರಿಯಿಂದಾದರೀ ತಪವ ಕೆಡಿಸದಿರೆ ।
ದೇವಾಧಿಗಾರವಂ ಪೋಪುದೆನುತಂ ಗಾನ ।
ಕೋವಿದರ ಗಾಂಧರ್ವರೆಂಬಾದ್ಯನೇಕಸುರನಾಯಕೀನಿಚಯವನ್ನು ॥
ಕಾಮಂ ಬಸಂತ ತಂಗಾಳಿ ಸಹಿಯರ್ ನಿಖಿಲ ।
ದೇವರ್ಕಳೆಲ್ಲರಂ ಕರೆದೊರೆದ ಘೋರಪ್ರ ।
ಭಾವವಗ್ಗಳಿಕೆಯಂ ಲಲಿತಗೊಳಿಸು ಪ್ರೌಢೋಪಾಯಗಳಂ ವಿನಯದಿಂದ ॥ (3)

ನೆಲದೊಳಗೆ ವಿಜಯನಾಮಕ ಘೋರ ತಪದಿಂದ ।
ಗೆಲಲಖಿಲಲೋಕಗಳ ಧೃತಿಯಿಂದೆ ಕುಳ್ಳಿರ್ಪ ।
ಬಲುತಪದ ಕಾಕೆನಿಂ ಪದಿನಾಲ್ಕು ಲೋಕಗಳ್ ನಡುಗುತಿವೆ ಭೀತಿಗೊಂಡು ॥
ಪಲವುಪಾಯಗಳಿಂದಲಾ ತಪೋವಿಘ್ನಮಂ ।
ಸುಲಭದಿಂಗೈದು ಕಲ್ಯಾಣಮಪ್ಪಂದದಿಂ ।
ಕೆಲಸಗೈವೇಳ್ಕೆನುತ ಸುರನಾಥ ನೇಮಿಸಲ್ ದೇವತೆಗಳೈತಂದರು ॥ (4)

ಮೇನಕೆ ತಿಲೋತ್ತಮೆ ಸುಕೇಶಿಯೂರ್ವಶಿರಂಭೆ ।
ಮಾನಿನೀಮಣಿಚಂದ್ರರೇಖೆಯು ಮದಾಲಸೆಯು ।
ಮಾನಸಪ್ರಂಬರಿಯನಿಧಿಚಂದ್ರವದನಾಪ್ರಮುಖ ಪಪ್ಸರಸ್ತ್ರೀಯರೆಲ್ಲ ॥
ಗಾನಕೋವಿದಕಲಾಕುಶಲಗಾಂಧರ್ವತತಿ ।
ಸೂನಾಸ್ತ್ರ ಮರುತಮಾಧವರೊಳ್ಗೂಡಿವೆರದಾಗ ।
ಸ್ನಾನಂಪದಿಂ ಧರಾತಳಕಿಳಿದರೇನೆಂಬೆ ಮೂಲೋಕ ಮೋಹಿಪಂತೆ ॥ (5)

ಸುರವಸೆಪ್ಪಣೆಯಿಂದ ಧರೆಗಿಳಿದು ದೇವತೆಗ ।
ಳುರುತರದ ಮೋಹನಾಕೃತಿಗೈದು ಕಲ್ಪರಗ ।
ಳರಳುವಂದದಿ ಜಗನ್ಮೋಹನಂಗಳ ರಚಿಸುತಾ ಬನದ ಕೆಲಕೆ ಸಾರ್ದು ॥
ಪರಮಪಾವನವುನಿ ಯತಿಘೋರತಪದೊಳಹ ।
ನಿರಿಗೆಯಂ ಕಂಡು ಭಯಗೊಂಡು ಪ್ರತ್ಯೂಹಗಳ ।
ವಿರಚಿಸಲ್ಕೊರ್ವರೊರ್ವರ ಮುಖವ ನೋಡುತ್ತಲಾಲೋಚನಂಗೈದರು ॥ (6)
ನೋಡಿದಾಕ್ಷಣ ಮರುಳ್ಗೊಳ್ಳುವಂದದಾಕಾರ ।
ಗೂಡಿ ಪಾಡುತ ನೃತ್ಯಗೈವುತ್ತ ಬನದಿ ಸುಳ ।
ದಾಡುತ್ತಲಾ ಬನದ ವೈಭವವ ನೋಡುತ್ತಲಾಶ್ಚರ್ಯಗೊಳುತ ಮನದಿ ॥
ಊಡುತಮೃತೋಪಮಿತಫಲಗಳಂ ಕುಸುಮಗಳ ।
ಸೂಡಿ ಮಧುಪಾನದಿಂ ನೂಲೇರಿ ಮೈಮರೆದ ।
ರಾಡಲೇನಂಜಿಸಲ್ಪೋಗಿ ತಾನಂಜದಂತಾದ ವೈಭವದೇಳ್ಗೆಯು ॥ (7)
ಇನಿತು ಮಾಯೋಪಮಾನಗಳೆಸಗಿ ತಪದಿಂದ ।
ಮುನಿಯವಂಚಿಸಲೆಂದು ಬಂದ ದೇವಾದಿಗಳ ।
ಮನದಿರವ ನೋಡಿ ರಾಘವ ಭಕ್ತವತ್ಸಲಂ ನಿಜಮಾಯೆಯನ್ನು ನೆಗಳ ॥
ವನಜಭವಹರ ವಿಷ್ಣುಗಳ ಪಿಡಿವ ಗುಣಮಾರ
ನನುಕರಿಸಿ ಬಹುಯೋಗಿ ಸಂಭೂತರೆಂದೆನಿಸಿ ।
ಬಿನದದಿಂ ನಟನೆಗೈಸುವಮಾಯೆಗೇಂ ಗಣನೆ ಮೋಹಿಪ್ಪುದು ದೇವತತಿಯ ॥ (8)
ಆ ಘನಂ ರಾಘವಾತ್ಮತೆಯಾಗಿ ಕಂಗೊಳಿಸಿ ।
ತೀವೇಳ್ವ ತರು ತರುಗಳೆಡೆಯಲ್ಲಿ ರಾಘವನ ।
ಪಾವನಾಕೃತಿ ಜಗನ್ಮೋಹನಾಕೃತಿಯೆನಿಸಿ ತೋರಲಪ್ಸರಸಿಯರಿಂಗೆ ॥
ಭಾವಭವನಾಟದೊಳ್ ಮುಗಿದರು ಮೂರ್ತಿಯಲ ।
ತೀವಾನುರಾಗಮುಂ ಬರುದುಬರೆ ನಿರ್ಲಜ್ಜೆ ।
ಯಾ ವಧುಗಳಂಗುದಿಸಲಾದುದು ಪರಸ್ಪರ ಭ್ರಾಂತಿ ಮಗುಳೇನೆಂಬೆನು ॥ (9)
ಜಿತಮದನಸ್ಮಿತವದನ ಶುಭರದನ ಸೌವರ್ಣ ।
ವಿತತಕೋದಂಡೆಸತ್ಕಾಂಡದೋರ್ದಂಡ ಸಂ ।
ಭೃತದಿವ್ಯ ಚೇಲವನಮಾಲಾ ವಿರಾಜಿತ ಸುವಕ್ಷಸ್ಥಳಂ ರಾತ್ರಿಯು ॥
ಪತಿ ಯುಷಾಪತಿ ರತಿಪತಿಯರಂ ಧಿಕ್ಕರಿಸಿ ।
ಸತಿಯರತಿಮೋಹ ದುಸ್ಸ್ಪಹನೇಹದಿಂದೈದಿ ।
ಕ್ಷಿತಿಜಾಪತಿಯನಪ್ಪಲಸುಗೈದು ತರುತರುನಿಕುಂಜಪುಂಜಗಳರಸಲು ॥ (10)
ಇದೆ ರಾಮನೆನುತ ಬಯಲನ್ನಪ್ಪಲೊರ್ಮ ದಿ ।
ರದೆ ರಾಮನೆಂದಪ್ಪಲೆಳಸಿ ಪಾರಲ್ಕೊರ್ವ ।
ಬದಿಯೊಳಹನೆಂದರಸಿ ತಕ್ಕೈಸಲೊರ್ವ ಯಾಗಸವಸಚರಿಯಿಂದಲಿ ॥
ಇದಿರಾಗಿ ಪಾರ್ಶ್ವದಲಿ ಪಿಂದೆಡೆಯ ದೂರದೊಳ್ ।
ಚದುರಿಂದ ಮೋಹನಾಕೃತಿ ವಿಶ್ವರೂಪಾಂತು ।
ಸುದತಿಯರ ಕಂಗಳಿಗೆ ತೋರಲೆಡೆಯಾಡಿದರದೇನೆಂಬೆ ಕೌತುಕವನು ॥ (11)

ಕೈಗೆ ಸಿಕ್ಕದತೆರದಿ ಕಾಣ್ಬಡದ ರೀತಿಯೊಳು ।
ಮೈಗೆ ಮೈಯುಂಟದಂತನುರಾಗದಿಂ ತಮ್ಮ ।
ಕೈಗೆ ಕೈಗಳ ಪಿಡಿವುತ್ತೊರ್ವರೊರ್ವರನಪ್ಪಿ ಬನದಿ ಧಾವತಿಗೊಳ್ಳುತೆ ॥
ಸುಯ್ಗಂಪ ಬೀರುತೆಡೆಯಾಡುತೆ ಸುರುಸುರೆನುತೆ ।
ಸೈಗವಂತಪ್ರಚಾರಣವಿಡಿಯುದವ್ವಳಸಿ ।
ಭೋಗೇಚ್ಛೆಗೈವ ಮುಕ್ತಿಯುರಿರವನೇಂ ಪೇಳ್ವೆ ಭ್ರಮಿಗಳುಪವಿತೆಯಾದುದು ॥ [(12)

ಅರಸಿಕೊಳಲುಪವನದೊಳಾವೆಡೆಯೊಳಂ ಕಾಣ ।
ದಾರುತರದ ಸಂಕಟದಿ ಕುಳ್ಳಿರ್ದು ಕಂಗಳಾಗ ।
ಳರೆಮುಗಿದು ನೋಡುತಿರಲೊಳಗೆ ಪಾವನಮೂರ್ತಿ ತೋರೆ ಮನದಿಂದಲಪ್ಪಿ ।
ಪರಮೋತ್ಸವದಿ ತಮ್ಮ ಬಯಕೆಗಳ ಕಳೆವರ ।
ಚ್ಚರಿಚರಿಯ ಸನಕಾದಿಮೌನಿಗಳ ಜ್ಞಾನಕಂ ।
ನಿರುಗೆಗೊಳದೀಚರಣ ನಾರಿಯರಿಗಳವಟ್ಟುದೇಂ ಸುಕೃತಫಲಮದಲ್ತೆ ॥ (13)

ಬಲುತರೋಪಾಯಗಳನೆಸಗಿ ಕೊನೆಗಾಣಪಿರೆ ।
ಲಲಿತಾಂತರಂಗದಿಂದಖಿಲದೇವರ್ಕಳುಂ ।
ಗೆಲಲಸಾಧ್ಯವೆನುತ್ತ ತಮ್ಮೊಳಾಲೋಚಿಸುತ ಮುನಿಶಾಪ ಬಪ್ಪುದೆನುತ ॥
ತೊಲತೊಲಗಿ ಬನದಿಂದ ಸುರಪನೆಡೆಗೈದಿ ನಿಜ ।
ಪೊಲಬ ಬಿನ್ನಪಗೈಯಲತಿ ಭೀತಿಯಿಂದಿಂದ್ರ ।
ನೆಲಘಮತಿ ಗೀಷ್ಪತಿಗೆ ತಿಳುಪಲರಿತಿಂತೆಂದ ಮುಂತಪ್ಪ ಕಷ್ಟಗಳನು ॥ (14)

ಈತ್ರಸುರಾತಪದಿಂದ ದೇವರ್ಕಳಗೆ ಭೀತಿ ।
ಜಾತವಾದಪುದೆಂಬ ಭಯವನುಳ ಶಚಿಯರಸ ।
ನೀತ ರಾಮಾಯಣ ಮಹಾಕಾವ್ಯಕರ್ತನಹ ವಾಲ್ಮೀಕಿ ಶುಭನಾಮದಿ ॥
ಈತ ಬ್ರಹ್ಮರ್ಷಿಯಹ ಸರ್ವಜನರಂ ಪೊರೆಯೆ ।
ದಾತನಹ ನಿದಕೆ ಸಂದೆಗವಿಲ್ಲಮೆನುತೊರೆದ ।
ಮಾತಿನಿಂದಿಂದ್ರ ಚಿಂತೆಯನುಳದು ಸುಖಿಮಿರ್ದನಿತ್ತಲಾದುದ ಪೇಳ್ವೆನು ॥ (15)

ಅಂತರಾಯವನೆಸಗಲೈತಂದ ದಿವಿಜದರ ।
ಸಂತೆಯಂ ಭ್ರಮೆಗೊಳಿಸಿ ಕಳಪಿ ರಘುನಾಯಕಂ ।
ಚಿಂತಿತಾರ್ಥಪ್ರದನೆನಿಪ್ಪ ಬಿರುದಂ ಮೆರೆಯಲೆಂದನುಗ್ರಹದಿಂದಲಿ ॥
ಕುಂತಿರ್ದ ಮುನಿಗೆ ಮಕ್ಷಿಕಮಶಕಕೀಟಾದಿ ।
ಸಂತೆ ಯುಪಟಳವಿಲ್ಲದಿರ್ದಂತೆ ವಲ್ಮೀಕ ।
ಮಂ ತಾನು ನಿರ್ಮಿಸಿದನೇನೆಂಬೆ ಶರಣಜನರಕ್ಷ ಶರಣಾಕೃತಿಯನು ॥ (16)

ಬಿಸಿಲುಗಾಳಿಯು ಮಳೆಗಳೆಸಗ ಕ್ರಿಮಿಕೀಟಗಳ ।
ಕಸರಿಲ್ಲದಾ ಪುತ್ತದೊಳಗೆ ಮುನಿಪತಿ ತಪವ ।
ನೆಸಗಿದಂ ಬಲುಯುಗಂ ಮನ್ವಂತರಸಹಸ್ರಮೇನೊಂದನರಿಯದಂತೆ ॥
ಪೊಸಬಗೆಯ ವರ್ಣಿಸುವರಾರ್ಗಳವು ಗೌರಿಮಾಗ
ಶಶಿರವಿಗಳೇಕತಾಣದೊಳಟ್ಟು ಮಾರುತನ ।
ಮಿಸುಕಲೀಯದೆ ದಿವ್ಯಮಂತ್ರಾಮೃತವನುಂಡು ಸುಖದಿಂದಲಿರುತಿರ್ದನು ॥ (17)

ಹಿಮಶೈಲಕೈದಿದ ವಸಿಷ್ಠಾದಿ ಮುನಿಗಳುಂ ।
ವಿಮಲ ಶಿಷ್ಯರುಗಳೊಡವೆರದೊಂದು ದಿನ ಬರುತ ।
ಸುಮನಸೋದ್ಯಾನಕೆಮ್ಮಡಿ ಯೆನಿಪ ನಂದನವ ಕಂಡು ವಿಸ್ಮಯದಿಂದಲಿ ॥
ಶ್ರಮತವುಗೆ ಸಂತಸಂಗೊಳುತ ಬನಮಂ ಪೊಕ್ಕು ।
ಕ್ರಮನಿವಾರಣಗೈದು ಕುಳ್ಳಿರ್ದರತಿಮುದದಿ ।
ಕ್ರಮದೊಳೊಂದೊಂದು ಮರದೆಡೆಯು ನಿಜನಿಲಯಕಂ ಹರುಷಮಿಮ್ಮಡಿ
[ಯೆಂಬೊಲು ॥ (18)
ಅನಿತರೊಳು ಶ್ರೀರಾಮಭಕ್ತವಾತ್ಸಲ್ಯಮಂ ।
ಜನರಿಂಗೆ ಕಾಣ್ಬಡಿಸಲೆಂದು ಮನದೊಳ್ತಂದು ।
ಮುನಿಗಳಹ ತಾಣಮಂ ದಿವ್ಯಭವನೋಪಮಿತ್ರಗೈದಖಿಳವಸ್ತುಗಳನು ॥
ಕನಕಪಾತ್ರೆಗಳು ಕದಳೀಪರ್ಣ ಸಂತೋಷ ।
ಜನಕ ಮಧುಮೂಲಫಲಶಾಖಾದಿಗಳನೆಲ್ಲ ।
ಬನದೊಳಗೆ ನಿಮಿಷದೊಳು ಯತಿಗಳದಿರೊಳ್ ತೋರುವಂತೆಸಗಿದಂ ಕೃಪೆಯೊಳು॥(19)
ಗುಡಜೀರಕಾದಿನಾನಾ ವಸ್ತುಸಂಚಯಗ ।
ಳೊಡನಂಗರಾಗದಿಂ ಸುಸ್ವಾದುತೈಲಂಗ ।
ಳೆಡೆಗೆಡೆಗೆ ತಾಂಬೂಲಯೇಲಾಲವಂಗಾದಿಸಾಮಗ್ರಿಗಳನು ನೋಡಿ ।
ಕಡುವಿಸ್ಮಯಂಬಟ್ಟು ಸ್ನಾನಸಂಧ್ಯಾದಿಗಳ ।
ತಡೆಯದೆಸಗುತ ಪಾಕವಮಂ ಮಾಡಿ ದೇವತ್ರತಿ ।
ಗೊಡನಿತ್ತು ಭೋಜನಂಗೈದು ಕರಪಾದಗಳ ತೊಳೆದರಾನಂದದಿಂದ ॥ (20)
ಶುದ್ಧಾಚಮನಗಳಂ ಮಾಡಿಕುಳ್ಳಿರ್ದು ನಿಜ ।
ಬುದ್ಧಿಯಿಂದೂಡಿಸುತವಿಾತಾಣ ಮಿನಿತರ ಪ್ರ ।
ಸಿದ್ಧಮಾದುದಿದೇನು ಚಿತ್ರವೆಂದೊರೊರ್ವರೊಡನೆ ಮಾತಾಡುತಿರಲು ॥
ಮುದ್ದಿಡಲ್ಕೈದಲಿನ ವಾರುಣಿಯು ಋಷಿನಿವಹ ।
ಮೆದ್ದುಸಾಯಾಹ್ನಕಾರ್ಯೆಗಳಂ ರಚಿಸಿ ಹರು ।
ಷೋದ್ಧತಿಯುರೆಲ್ಲರಲ್ಲಲ್ಲಿ ನಿದ್ರಾವಶತೆಯಾದರದನೇನೆಂಬೆನು ॥ (21)
ಮರೆದೊರಗಲಾಕ್ಷಣಮಗಾಧನಿದ್ರೆಯು ತೊಡೆರ ।
ಲರಿಯದೊಂದನು ಸುಖದೊಳಿರುವನಿತರೊಳ್ ಸ್ವಪ್ನ ।
ಕರಚಿತ್ರಮಾಗಿ ತೋರಿದುದದೇನೆರಡನೆಯ ಪ್ರತ್ಯಕ್ಷವೆಂಬಂದದಿ ॥
ತರದೀಪಣಂಗಳಂ ನಿರ್ಮಮತೆಯಿಂ ತಪವ ।
ವಿರಚಿಸುವ ಪುರುಷನೊರ್ವಂ ಚಂದ್ರಬಿಂಬದಂ ।
ತಿರಲಸ್ಥಿಚರ್ಮಾವಶಿಷ್ಟದಿಂದಾತನಂ ಕಂಡರಾನಂದದಿಂದ ॥ (22)
ಪುಟಪಾಕವಿಡಿದ ಪೊಂಬಣ್ಣದಂದದ ಕಾಂತಿ ।
ಘಟಿಸಿರ್ಪ ದೇಹದಿಂ ಪದ್ಮಾಸನದಿ ಕುಳಿತು ।
ಕುಟಿಲಮುಳಿದನವರತಮೇಕಾಗ್ರಚಿತ್ತದೊಳ್ ಸೀತಾಸಹಿತ ಮೂರ್ತಿಯಾ ॥
ಪುಟಗೊಳಿಸುತಸ್ನಾಮಗಳ ಜಪಿಸುತನವರತ ।
ತ್ರುಟಿತಗೈದಿತರಭಾವಂಗಳಂ ಕರಣಂಗ ।
ಳಟಣೆಯಿಲ್ಲದೆ ಬೆಳಗ ಬಂಡದಿಂದಿರೆ ತೋರ್ದುದಾ ಮಹಾಮುನಿಗಳ್ಗೆ ॥ (23)

ಸರಸಿಜದ ಪೀಠದೊಳ್ ವಿರಾಜಿಪ ಸಿಂಹಾಸನದಿ ।
ಧರಣಿಸುತೆ ಯೆಡವಂಕದೊಡೆಯೊಳ್ ಒಪ್ಪಿರೆ ನಗೆಯು ।
ಬೆರೆದಿಂದುಮುಖದಿಂದುದಾರಾಂಗನೊಪ್ಪಿರಲ್ ವಿರಾಸನವನು ಬಳಿದು ॥
ಮಾರುತಸುತ ಪಾದವಿಡಿದಿರೆ ಧನುರ್ಧರನಾಗಿ ।
ಸುರುಚಿರವ್ಯಜನದಿಂ ಸೌಮಿತ್ರಿ ಸೇವಿಸಿರೆ ।
ಭರತ ಮುತ್ತಿನ ಕೊಡೆಯ ಪಿಡಿದಿರಲ್ ಶತ್ರುಘ್ನ ಚಾಮರವನಾಂತೆಸೆದಿರೆ ॥ (24
ಪ್ಲವಗೇಶದಾನವಾಧಿರಿರ್ವರ್ ತರದಿ ।
ನವವೇತ್ರಗಳ ಪಿಡಿದು ಬಿರುದನುಘ್ಘಡಿಸುತ್ತಿರೆ ।
ಕುವಲಯದಳಶ್ಯಾಮರಾಮನಖಿಳಾಭರಣ ಭೂಷಿತಾಂಗನೆನಿಸಿ ಮುದದಿ ॥
ಅವಿರಳಸ್ತವಗೈವ ಸನಕಾದಿಯೋಗಿಗಳ ।
ನಿವಹದೊಳ್ ರಾಜಿಸುವ ಶ್ರೀರಾಮಮೂರ್ತಿಯಂ ।
ಸುವಿವೇಕದಿಂ ಕಂಡರಖಿಳಾರ್ತಿಹರ ಸದಾನಂದ ತೇಜೋನಿಧಿಯನು ॥ (25)
ಆನಂದನಿಧಿಯ ನೋಡುತಲಮಂದಾನಂದ ।
ಸಾನುರಾಗದಲಿರುಳು ನಿಮಿಷಮೆನೆ ಜಾರಲಾ ।
ಭಾನು ಪುಟ್ಟಲ್ಕೆಚ್ಚರಾಂತು ಮುನಿವರರೆಲ್ಲ ಸ್ನಾನಾಹ್ನಿಕಗಳ ರಚಿಸಿ ॥
ನಾನಾವಿಚಿತ್ರತರ ಕನಸ ನೆನೆವುತಲಿ ಸು ।
ಮ್ಮಾನದಿಂ ಕುಳ್ಳಿರಲ್ಕಾ ಸಭೆಗೆ ಸರಸರಿಸಿ ।
ಜ್ಞಾನನಿಧಿ ನಾರದಮಹಾಮೌನಿ ಯೈತಂದನುದ್ಧರಿಪರೊಲವಿನಿಂದ ॥ (26)
ಬರಲಾಮುನೀಶಗಿದಿರೆದ್ದಖಿಲತಾಪಸರ್ ।
ಹರುಷದಭಿವಾದನಂಗೈದು ಕುಳ್ಳಿರಿಸುತ್ತ ।
ಪರಮಸತ್ಕಾರದಿಂ ಸಾದರದೊಳ್ ಒಡವೆರೆದ ಮೃದುನುಡಿಗಳಿಂದ ನುತಿಸಿ ॥
ಬರವ ಬೆಸಗೊಂಡು ಮತ್ತೆಂದರೆಲೆ ಮುನಿರಾಯ ।
ಬೆರಗಿದೇನೀ ವನ ವಿದಾರದೆಸೆಯಿಂದಾದು ।
ದರಿಯಬಾರದ ಕನಸ ಕಂಡೆವಾವೀವೃತ್ತದಚ್ಚರಿಯ ನಾಲಿಸೆನುತ ॥ (27)
ಜ್ವಲಿತಾಗ್ನಿನಿಭಮೂರ್ತಿಯೊಂದಿಹುದು ಶ್ರೀರಾಮ ।
ನಲಘುನಾಮಂಗಳಂ ಜಪಿಸುತ್ತಲಾ ಮುನಿಪ
ಗೊಲಿದು ಮುಂದೆಡೆಯವರದಾನಹಸ್ತವ ನೀಡಿ ರಘುವೀರ ರಾಜಿಸುವನು ॥
ನೆಲಮರಾದಿಗಳೆಲ್ಲ ರಾಮಾಕೃತಿಯಲೆಸೆವ ।
ಚೆಲುವ ಕಂಡೆವಿದೇನು ಚಿತ್ರವಾರಿಂದಾದು ।
ದೊಲಿದು ಪೇಳ್ವುದೆನುತ್ತ ಬೆಸಗೊಂಡರಜತನಯ ನಸುನಗುತಲಿಂತೆಂದನು ॥
(28)
ಪಿಂತೊಂದು ದಿನ ಮಹಾದೇವನ ದಿದೃಕ್ಷೆಯಿಂ ।
ದಾಂ ತಳುವದತಿಶಯದಿ ಕೈಲಾಸಕೈದಿರಲ್ ।
ಸ್ವಾಂತಹರುಷದೊಳಖಿಳದೇವೇಶ ಪೇಳ್ದರ್ನನಾ ಕಥೆಯ ನೊರೆವೆ ಮುದದಿ ॥
ಮುಂತೆ ರಾವಣನೆನಿಪನೊರ್ವನುದಿಸಲ್ ಬಾಧೆ ।
ಯಂ ತಡೆಯದಮರರುಂ ಹರಿಯ ಪ್ರಾರ್ಥಿಸೆ ಪೊರೆಯೆ ।
ತಾಂ ತಳೆದು ಮುಮ್ಮೂರ್ತಿಗಳ ಸತ್ವಮನೊರ್ವ ಪರಮಾತ್ಮನವತರಿಸುವ ॥ (29)

ರವಿವಂಶಸಂಭೂತ ದಶರಥನೊಳವತರಿಸಿ ।
ತವಕದಿಂ ತಾಟಕೆ ಸುಬಾಹುಗಳ ಸಂಹರಿಸಿ ।
ನವಯುವತಿಯಂಗೈದು ಶಿಲೆಯ ಹರಚಾಪಮಂ ಮುರಿದು ವೈದೇಹಿವೆರೆದು ॥
ಲವಲವಿಕೆಯಿಂದೈದಿ ದಂಡಕಾಗಹನದೊಳು ।
ತವಕದಿಂದ ವಿರಾಧಮೊದಲಾದ ರಕ್ಕಸರ ।
ಸವರಿ ಮಾರೀಚನಂ ತರಿದು ರವಿಜಂಗೊಲಿದು ಬಾಲಿಯಸುಗಳನು ಕಳೆದು ॥ (30)
ಮರುತಜನ ಕರವಿಡಿದು ಶರನಿಧಿಯ ಕಟ್ಟುವುಂ ।
ಬರಿದು ದಶಕಂಧರನ ಕುಲವ ತರಿದವನನುಜ ।
ಗಿರದೆ ಶಾಶ್ವತಪಟ್ಟವುಂಕಟ್ಟಿ ಪುಷ್ಪಕವನಡರಿ ಜವದಿಂದ ಬಂದು ॥
ಭರತನಿಚ್ಛವನಿತ್ತು ಬಳಕಯೋಧ್ಯಾಪುರದಿ ।
ದೊರೆಯೆನಿಸಿ ಬಹುಕಾಲ ಧರಣಿಯಂ ಪಾಲಿಸಿದ ।
ಪರಮಮಂಗಳ ಚರಿತ್ರೆಯು ಲೋಕದೊಳ್ಚರಿಸಲೆಂದು ಮನದೊಳಗೆ ತಂದು ॥ (31)
ದುರುಳವ್ಯಾಧಂಗೊಂದು ಪರಿಯುಪದೇಶಮಂ ।
ಸರಸಿಜೋದ್ಭವತ ರಯನೆಸಗಲದರಿಂದವನು ।
ಪರತಪೋನಿಧಿಯೆನಿಸಿ ಬ್ರಾಹ್ಮಣೋತ್ತಮನಾಗಿ ದಿವ್ಯಮಂಗಳಚರಿತ್ರೆಯಂ ॥
ವಿರಚಿಸುವನಾದಿಕವಿ ವಾಲ್ಮೀಕಿಯೆಂದೆನಿಪ ।
ಪರಮಪುರುಷನೆನುತ್ತ ಹರ ನಿರೂಪಿಸಿದರ್ಥ ।
ವರಿವಾದುದೆನಗೆನುತ ದೇವಋಷಿ ನಾರದಂ ಪೇಳ್ದ ಮುನಿಪೋತ್ತಮರಿಗೆ ॥ (32)
ಮೊದಲಾನು ಕೇಳ್ದುದಂ ನೆನದು ಪೇಳದೆನೆನುತ ।
ಮುದವೆತ್ತು ನಾರದಂ ಮುನಿಗಳೊಳು ಪೇಳುತಿರ ।
ಲುದಿತವಸಾಯಿತಶರೀರವಾಣಿ ಭೂದೇವ ಸಭೆಯಲ್ಲಿ ಸಂತಸಗೊಳ್ಳಲು ॥
ಇದು ಸತ್ಯ ವಲ್ಮೀಕಮಧ್ಯದೇಶದೊಳಿರ್ಪ ।
ಪದುಮಾಪ್ತನಿಭ ಮೌನಿಯನ್ನುಪಾಯಾಂತರದ ।
ಲುದಯಿಪಂದವ ಮಾಡ್ದರಹುದಖಿಲ ಶುಭವಿಭವ ಮೆನುತಂತರಿಕ್ಷದಿಂದ ॥ (33)
ವಿದಿತವಾಗಲ್ ವಶಿಷ್ಟಮುನಿಗಳ್ ಮನದೊ ।
ಳದುಭುತಮಿದೆಂದರಿದುಪಾಯದಿಂ ಪುತ್ತಮಂ ।
ಕದಲಿಸುತ ನಾಲ್ದೆಸೆಯ ಖನನಗೈಯಲ್ಕದರಮಧ್ಯಪ್ರದೇಶದೊಳಗೆ ॥
ಉದಿಯಿಸುವ ಭಾಸ್ಕರನೊ ಪುಟವಾಕಕನಕಮಿದೊ ।
ಸದಮಲ ಮಹಾತೇಜ ನಾಂಗಮೆಂದೆನಿಸಿಪ್ಪ ।
ದಿದನೋಳ್ಪರಾರೆನುತಲಚ್ಚರಿಯಲಿಟ್ಟೆಸಿದರಂದು ಶುಭಮೂರ್ತಿಯನ್ನು ॥ (34)
ತೆಗೆದು ವಿಷಯಂಗಳಂ ಮನವ ರಘುವರನಂಘ್ರಿ ।
ಯುಗಕಿಟ್ಟು ಗುರುಪದಾರ್ಪಿತವಿಷ್ಟಿಯಂ ಬಿಡದೆ ।
ಪಗಲಿರುಳು ನಾಮಮಂ ಜಪಿಸುತ ಹೃದಾಕಾಶಮಧ್ಯದೊಳ್ ರಘುವೀರನ ॥
ಬಗೆಬಗೆಯ ಪೂಜೆಗಳನರ್ಪಿಸುತ ಮೇಲೊಂದ ।
ಬಗೆಯದಮಲಬ್ರಹ್ಮಮೂರ್ತಿಯನೋಡಿ ನಸು ।
ನಗುತ ಮುನಿವರರೆಚ್ಚರಂ ಗೈಯಲೆಳಸಿದರ್ಪಾದಪವ ನೆಚ್ಚರಿಪೊಲು ॥ (35)

ವಿವಿಧಶೀತೋಪಚಾರಗಳಂದುಪಾಯಗಳ ।
ನವನವಕವೆನಲೆಸಗಲಾತಗೆಚ್ಚರುತೋರ ।
ಡವಿರಳಾನಂದಾನುಭೂತಿಯಿಂ ಪಿಂತಿರುಗದುಪಲೋಪವಾಸವೆನಿಸೆ ॥
ತವಕದಿಂ ಮುನಿಗಳಸ್ಯೋಪಾಯಗಳ ಕಾಣಾ ।
ದವನಿಯಿಂ ನೋಡುತಿರಲನಿತರೊಳ್ ಶಿವವಿಷ್ಣು ।
ಕುವಲಯಾಪ್ತನು ಚತುರ್ಮುಖ ಮುಖ್ಯದೇವತೆಗಳೈತಂದರಾ ಸಮಯಕೆ ॥ [(36)

ಎನಿತೆನಿತು ಮುಖ್ಯ ದೇವತಗಳುಂಟವರೆಲ್ಲ ।
ಘನತಪೋಧನಸಿದ್ಧರೊಡವೆರೆದು ಬಂದು ಸ ।
ನ್ಮನಿಯು ನಿಷ್ಟೆಸುತಲಚ್ಚರಿಯಿಂದ ಬೆರಗಾಗಿ ನೋಡುತಲ್ಲಲ್ಲಿರುತಿರೆ ॥
ವನಜಪೀಠನ ಸುತಂ ಬಹುವಿಧೋಪಾಯಗಳ ।
ನೆನಿತೆಸಗಲೆಚ್ಚರಿಕೆಯಾಗದಿರಲನಿತರೊಳ್ ।
ನೆನೆದು ಯುಕ್ತಿಯು ತಾಪಸರೊಳೆಂದನಾ ಪರಿಯು ಬಿತ್ತರಿಸಿ ನಂಜಾವಿನೆಯದಿ ॥ (37)

ದುರುಳತನದಿಂ ವಿಪಿನಸಂಚಾರಿಯೆನಿಸಿಹಾಗ ।
ಗುರುಭಕ್ತಿಯಧಿಕಮುಂಟೀತನಿಗದೆಲ್ಲಿ ಪೋ ।
ಗಿರದು ಮತ್ತಾನೆಂಬೆಬಂದಿರ್ಪ ಭವದೀಯದೇಶಕಂ ನೋಡಿಸುತಲಿ ॥
ಒರೆವೆನಾತನ ಕಿವಿಯೊಳಂ ಭಕ್ತಿಯುಂಟಾಗೆ ।
ಬರುವುದೆಚ್ಚರೆನುತ್ತ ಪೇಳ್ದ ನುಡಿಯಂ ಕೇಳ್ದು ।
ಸುರರೆಲ್ಲ ಸಂತಸಂಗೊಳುತಲಂತಾಗಲೆಂದಪ್ಪಣೆಯು ನಿತ್ತರೊಲಿದು ॥ (38)

ರಾಮನಾಮವ ಪೇಳ್ದು ಗುರುವಸಿಷ್ಠಂ ಬಂದ ।
ಪ್ರೇಮದಿಂದೆರಗಿ ಪೂಜಿಪ್ಪುದುಚಿತ ಮೆಂದುಮುನಿ ।
ಸೋಮನಾತಪಸಿಯು ಕರ್ಣದೊಳುಸುರಲ್ಕೆ ಕಂಗಳಂ ತೆರದು ಬೇಗ ॥
ಕ್ರಮದಿಂದಲೆದ್ದು ಗುರುವಂದನಂಗೈದು ತಪ ।
ದಮಲ ಸೌಭಾಗ್ಯಲಕ್ಷ್ಮಿಯಕಂಡೆ ಕೃತಿಯಾದೆ ।
ವಿಮಲಪದಪಂಕಜವ ನಿಷ್ಟಿಸಿದೆ ನಾನೇಸುಧನ್ಯನೋಯೆನುತೆರಗಿದಂ ॥ (39)

ಪೋದುದೆನ್ನಘರಾಸಿ ಗುರುಪದಾಬ್ಜವ ಕಂಡೆ ।
ಭೇದವಾಯ್ತೆನ್ನಿಂದವಿದ್ಯೆ ವಿದ್ಯಾರೂಪ ।
ಮಾದುದೆಂದೆನುತ ಬಲವಂದು ಮತ್ತೆರಗುತಂ ಕರಗಳಂ ಮುಗಿದುನುತಿಸಿ ॥
ಶ್ರೀದಭವದೀಯ ಕಿಂಕರನಾನು ಬೇಡಿದುದ ।
ಸಾಧನಂಗೈದೀವೆ ದಯೆಗೈಯಪೇಳ್ಕುಮೆಂ ।
ದಾದರದಿ ವಿಜ್ಞಾಪನಂಗೈದನನಿತರೊಳ್ ಮೊಳಗಿದುದು ಸುರಭೇರಿಯು ॥ (40)

ಮೊಳಗುತಿರೆ ದೇವದುಂದುಭಿಗಳುಂ ಬಾಸೆಡೆಯು ।
ಕಳೆಯರಿದಗಾಂಧರ್ವ ಗಾಯಕರದೊಂದೆಡೆಯು ।
ಲೆಳೆಮಿಂಚಿನಂದದಿಂದಪ್ಸರಿಯರಾಡುತಿರೆ ನರ್ತನದ ಮಧುರನುಡಿಯು ॥
ಪೊಳೆಪಿಂದ ದೇವರ್ಕಳುಂ ಕುಸುಮವೃಷ್ಟಿಯಂ ।
ಸುಳಸಲ್ ದಿಶಾಚಕ್ರ ನಿಸ್ತಿಮಿರವಾಗೆಸುರ
ಭಳತಪವಮಾನ ಸಂಚರಿಸಿದಂ ಶಿರವಿಗಳನಂತರತಿ ಕಳೆಯಕಳೆಯಿಂ ॥ (41)

ನೆರೆದ ಸುರಮುನಿವೃಂದ ಮಧ್ಯಪ್ರದೇಶದೊಳ್ ।
ಹರವಿರಿಂಚಾದಿಗಳ್ ಸಂತಸಂ ಗೊಳುತಿರ್ಪಲ್ ।
ಸಿರಿಯುರಸನಖಿಲ ದೇವರ್ಕಳುಂ ಕೇಳುತಿರೆ ನುಡಿದನಾನಂದದಿಂದ ॥
ಪರಮ ತಪದಿಂದ ಪದಿನಾಲ್ಕುಲೋಕಂ ಭೀತಿ ।
ಕರವಳಗೆ ದಿಕ್ಪಾಲರೆಲ್ಲರು ನಡುಗುವೋಲ್ ।
ವಿರಚಿಸಿದ ಬ್ರಹ್ಮಾಂಡಮಂ ಸೃಜಿಸಲೀತನೇ ಶಕ್ತನೆಹ ಮಗುಳೊಂದನು ॥ (42)
ಪುತ್ತದಿಂದೆರಡನೆಯ ಜನ್ಮಮಾಯ್ತೀತಗೆನು ।
ತುತ್ತಮದ ಬ್ರಹ್ಮಋಷಿಪದವಾಗಿ ಭೂಸುರರ ।
ಮೊತ್ತದೊಳಗಧಿಕತರಮೆನಿಸಿ ವಾಲ್ಮೀಕಿಮುನಿಯೆಂದೆಂಬ ಪೆಸರಿಂದಲಿ ॥
ಬಿತ್ತರಿಪನೀತ ರಾಮಾಯಣವ ದುರ್ಜನರ ।
ನೊತ್ತಲೋಸುಗಲಾನುಜನಿಪ ವೇದಗಳೆಲ್ಲ ।
ವತ್ತೆ ಕಾವ್ಯಾತ್ಮತೆಯನಾಂತಿವನ ಮುಖದಿಂದ ಪೊರಮಟ್ಟು ಪೊಳೆವವೆನುತ ॥ (43)
ಈತನಿಂದುದಿತ ರಾಮಾಯಣವ ನೆಲದೊಳಾ ।
ವಾತನೊಂದಕ್ಕರವ ಬರದೋದಿಕೇಳದೊಡೆ ।
ಪಾತಕಂಗಳು ಪೋಗಿ ಪರಮಪಾವನ ನೆನಿಸಿ ಮುಲ್ಲೋಕವಾಸಿಯೆನಿಪ ॥
ಜಾತುಜಿತುಲಾಲಿಸಿದೊಡಂ ಬ್ರಹ್ಮಹತ್ಯಾದಿ ।
ಪಾತಕಗಳು ತೊಲವೆನೆ ಪಾಪಿಪೋದಪವ ।
ತೀತವರ್ಣಾಚಾರ ದುರ್ನೀತನಾದೊಡಂ ಮುಕ್ತನಹನಿದುನನ್ನಿಯು ॥ (44)
ಪರಪೀಡನೋದ್ಭೂತ ದುಸ್ಸ್ನತೀಸಂಗಮಂ ।
ಮರುಳರೊಡನಾಟ ದುರ್ಭೋಜನದುರಾಲಾಪ ।
ದುರುಳಸೇವಾದಿಗಳಲುದಿತ ಪಾತಕಗಳುಂ ಪರಮಮಂಗಳಕಾವ್ಯದಿ ॥
ಅರೆಪದವ ನೆರೆಪದವ ನರಿತು ಮರದೋದಿದೊಡೆ ।
ಪರಿದೋಡಿಪಾವನಕೆ ಪಾವನನೆನಿಪ್ಪನಿದ ।
ನರಿತಿದಂ ಭಕ್ತಿಯಿಂ ಭೋಜನಾಂತ್ಯದೊಳೊಲಿದು ಪಾಡಿದವ ಮುಕ್ತನಹನು ॥ (45)
ಎಂದತಿಶಯದ ವರವನೀಯಲದ ನೋಡುತಾ ।
ನಂದದಿಂ ಹರನುಡಿದ ನೀಕಟ್ಟುದಕ್ಕರಗ ।
ಳೊಂದೆರಡನಾವನುಚ್ಚರಿಸಿದೊಡೆ ಕೈಲಾಸ ಕರತಳಾಮಳಕವೆನೆಲು ॥
ಬಂದೊದಗಲೆಂದೊರೆಯುಲದನೋಡುತಜ ನುಡಿದ ।
ನಿಂದೀಮಹಾಮುನಿಯ ಜಿಹ್ವಾಗ್ರದೊಳ್ವಾಣಿ ।
ಪೊಂದಿರಲಿ ಮಧುರತರ ಕಾವ್ಯರಚನಾಶಕ್ತಿ ಲೀಲೆಯಿಂದೊದಗಲೆನುತ ॥ (46)
ಕವಿತಾರಚನೆಗೀತ ಕರ್ತನೆಂದೆನಿಸುತೀ ।
ಭುವಿಯೊಳಾದಿಮಹಾಕಾವ್ಯದಧಿಪಕವಿಕುಲರನ್ನೆ ।
ನವಿರಳಾನಂದದಿಂದಿರಲೀಮಹಾಕಾವ್ಯಮೆಂದೆನುತ್ತೆಲ್ಲರೊಲಿದು ॥
ಸುವಿವೇಕದಿಂದೋದಿ ಸುಖಪನಸುಖವಗೈದು ।
ಭವಗಳಂ ಪರಿದಿಪ್ಪು ಬರುವರೆಮ್ಮಾಲೋಕ ।
ಭವನಕ[illegible]ಜನಿಕ್ಕನತಿಮೋದಕರಮೆನಿಪ [illegible]ಗಳಂ ಕರುಣದಿಂದ ॥ (47)

ಇಂತುಮುಮ್ಮೂರ್ತಿಗಳ್ ವರವಾಂತು ಹರ್ಷದಿಂ ।
ಮುಂತೆಸೆವ ಹರಿಯು ನುತಿಗೈದನತಿಭಕ್ತಿಯಿಂ ।
ಚಿಂತಿತಾರ್ಥಪ್ರದ ಮಹೇಶವಾಗೀಶನುತ ವೇದಮಸ್ತಕಭೂಷಣ ॥
ಸಂತತಶ್ರೀನಿಲಯಮೇಕಾಂತಭಾಜನ ಚಿತ್ತ ।
ಕಾಂತಕರುಣಾಸ್ವಾಂತ ಕಮನೀಯ ಸದ್ಗುಣನಿ ।
ಶಾಂತ ಶ್ರೀರಾಮಪುರದಧಿನಾಥ ಸಲಹೆನುತಲೆರಗಿ ನುತಿಗೈದನೊಲಿದು ॥ (48)

(ಸಂಧಿ 21, ಪದ 919.)

## ಇಪ್ಪತ್ತೆರಡನೆಯ ಸಂಧಿ

ಸೂಚನೆ ॥ ಪರಮಮುನಿವಾಲ್ಮೀಕಿಯುಪಚಾರದಿಂ ರಾಮ ।
ಪರಿತುಷ್ಟಿವಡೆದೈದೆ ಚಿತ್ರಕೂಟಾದ್ರಿಯೊಳ್ ।
ವಿರಚಿಸಲೆವನೆಯ ಸೌಮಿತ್ರಿ ಜಾನಕೀ ಸಹಿತಲಾಸಂಭದಿಂದಿರ್ದನು ॥

ಸಕಲ ದೇವತೆಗಳ್ಗಂದಖಿಲ ವರಗಳಪಡೆದು ।
ಮಕಳ್ಗಂಕ ಬ್ರಹ್ಮಋಷಿಪದವಾಂತ ವಾಲ್ಮೀಕಿ ।
ಭಕುತಿಯಿಂ ಕರಗಳಂ ಮುಗಿದಂತರಂಗದೊಳ್ ಸರ್ವದೇವಾತ್ಮಹರಿಯು ॥
ಶುಕವಾಮದೇವಸನ್ನುತ ದಿವ್ಯಚರಣನಂ ।
ಭಕುತಿಯಿಂ ತುತಿಗೈವ ಸಂತೋಷಗೊಳಿಸಿದಂ ।
ವಿಕಚಕಮಲಾಕ್ಷಿ ಕೇಳ್ ಬಿತ್ತರಿಪೆ ನಾಮಹಿಮಸಧಿಕಜ್ಞಾನೋಕ್ತಿಯನು ॥ (1)
ಅರಿಶಂಖಪದ್ಮಕರಹರ ವಿರಿಂಚಾದಿಸುರ ।
ವರವಂದಿತಾಂಘ್ರಿಯುಗ ಕ್ಷೀರೋದಧಿನಿವಾಸ ।
ಪರಮಮಂಗಳ ಸರ್ವಭೂತಾಂತರಾತ್ಮ ನಿಖಿಲಾಗಮ ಪುರಾಣವೇದ್ಯ ॥
ಭರತಶತ್ರುಘ್ನ ಲಕ್ಷ್ಮಣಸೇವ್ಯ ಕೌಸಲ್ಯೆ ।
ಯುರುಗರ್ಭಜಲಧಿಚಂದ್ರಮ ತಾಟಕಾಹರಣ ।
ಶರಣ ವಿಶ್ವಾಮಿತ್ರಯಾಗರಕ್ಷಣ ನಮೋನಮೋಯೆನುತ ತುತಿಗೈದನು ॥ (2)
ಮುನಿಯರಸಿಯಂ ಪೊರೆದ ಶಿವನ ಧನುವಂ ಮುರಿದ ।
ಜನಕಜೆಯ ಕರವಿಡಿದ ಜಾಮದಗ್ನ್ಯನ ಗರ್ವ ॥
ವನು ಪರಿದ ಗುಹನ ಪೋಷಿಸಿದ ಕಲಶೋದ್ಭವನ ಪೊರೆದ ರಕ್ಕಸನ ತರಿದ ॥
ಬನದೊಳಾಶೂರ್ಪನಖಿಯಂಗಭಂಗಂಗೈದ ।
ಕೆನಿಸಿಂದ ಖರದೂಷಣ ತ್ರಿಶಿರರಂ ಕೊಂದ ।
ನಿನನುತರ ಹನುಮದಾದಿಗಳ್ಗೆ ರಕ್ಷಣೆಗೈವ ದೇವಗಾಂ ವಂದಿಸುವೆನು ॥ (3)
ಶರನಿಧಿಯ ಕಟ್ಟಿದಗೆ ಶರಣನಂ ಪೊರೆದಂಗೆ ।
ದುರುಳರಾವಣ ಕುಂಭಕರ್ಣರಂ ತರಿದವಗೆ ।
ಧರಣಿಜೆಸಮೇತ ಪುಷ್ಪಕವೇರಿ ಭರತನಂ ಪೊರೆದು ಸಾಕೇತಪುರದಿ ॥
ನಿರತಿಶಯಸಾಮ್ರಾಜ್ಯ ಭೋಗಯುತ ನೆನಿದಂಗೆ ।
ಹರಿಯಜಭವಾದಿಗಳ್ ಮುದಿಯುದಯದಿಸ ನೆ ನೆವ ।
ಪರಮಪಾವನ ನಾಮ ರಾ[illegible] ವಂದಿಸುವೆನತಿಶಯಿಂದ ಭಕ್ತಿಯಿಂದ ॥ (4)

ಇಂತನಂತಾನಂತ ನುತಿಗೈವಮುನಿವರನ ।
ಸ್ವಾಂತರಂಗವನರಿದು ಹರಿ ಯಖಿಲವರಗಳಂ ।
ಕಾಂತಳಾವಿತ್ತು ನಲವೆತ್ತು ಸುರರೊಡನೆರೆದು ನಿಜನಿಲಯಕಂ ಗಮಿಸಲು ।
ಸಂತಸದನೀಮೌನಿ ನಾರದಂ ಪೇಳ್ದನುಡಿ ।
ಯಾಂತು ರಾಮಾಯಣವ ರಚಿಸಿ ಕವಿಸಂತತೀ ।
ಕಾಂತನೆನಿಸುತ ಜಪಿಸುತೇಕಾಂತಭಕ್ತಿಯೊಳಗಿರ್ದನಾನಂದದಿಂದ ॥ (5)
ಹರಿಯಖಿಲ ನಾಮರಾಶಿಗಳೊಳಗೆ ಶ್ರೀರಾಮ ।
ಪರಮಮಂಗಳನಾಮಮುಖ್ಯಮೆನುತ ಶ್ರುತಿತತಿಗ ।
ಳೊರೆವವದರಿಂದಖಿಳಪಾತಕಂಗಳತರಿದು ಮೋಕ್ಷಾದಿಪುರುಷಾರ್ಥವು ।
ಕರತಳಾಮಳಕದಂದದಿ ತೋರ್ಪುದಕ್ಷರವೆ ।
ರೆರಡನುಂ ಕ್ರಮದಲಕ್ರಮದಲೆಡೆ ಬಿಡದಾವ ।
ಸ್ಮರಿಸುವನು ಧನ್ಯ ಸುರಮೂರ್ಧನ್ಯ ಮುನಿಲೋಕಮಾನ್ಯ ರಾಜನ್ಯನಗಜೆ ॥ (6)
ಭುವಿಯೊಳುಳ್ಳಖಿಳ ಶಬ್ದಗಳೆಲ್ಲ ಕ್ರಮದಿಂದ ।
ವಿವರಿಸಲ್ಫಲವೀವ ವಲ್ಲದೊಡೆ ವ್ಯರ್ಥವಹ ।
ವವನುಳಿದು ರಾಮನೆಂಬಕ್ಷರದ್ವಯವನುಂ ಕ್ರಮದಲಕ್ರಮದಿ ಜಪಿಸಿ ॥
ವಿವಿಧ ಪಾಪಗಳ ರಾಸಿಯಕಳೆದು ನಿರ್ಮಲತೆ ।
ಯವಿರಳಾನಂದಮಯವೆನಿಪುದಿದರಿಂದದಕೆ ।
ಸಮನಿಲ್ಲಮುಲ್ಲೋಕದಲ್ಲಗಜೆ ಶ್ರೀರಾಮನಾಮ ಸರ್ವೋತ್ಕೃಷ್ಟವು ॥ (7)
ಚಾಂಡಾಲ ಪತಿತಂ ಕಿರಾತಯವನ ವಿಪ್ರ ।
ಭಂಡನಂ ಪರಜಾತಿವರ್ಣಕ್ರಮವಿಹೀನ ।
ರಂಡಾದಿಸರ್ವಂಗನಾಗಮುನಿಯತಿ ಪಾಪಿಯಾದೊಡಂ ಬಿಡದೆ ನೆನೆಯೆ ॥
ಪುಂಡರೀಕಾಯತೇಕ್ಷಣ ನಾಮಮಂ ದುರಿತ ।
ತಂಡಂಗಳಂ ಸವರಿ ಸಿದ್ಧರಸಲೋಹವಂ ।
ಕೊಂಡು ಸೌವರ್ಣಗೈವಂತಾವನಾದೊಡಂ ಪೂತರೆಂದೆನಿಪುದಗಜೆ ॥ (8)
ಜಪತಪೋಯಜ್ಞಾದಿ ಸ್ನಾನದಾನಂಗಳಂ ।
ವಿಪರೀತ ಫಲವಲ್ಲದವು ಸಫಲವಾಗಲೀ ।
ಲಪನೆಯಿಲ್ಲದೆ ಶುದ್ಧವಾಗಲರಿಯದು ಮೋಕ್ಷವೀಯವೀಕವರ್ಣಂಗಳು ॥
ಶ್ವಪಚನಾದೊಡು ರಾಮನಾಮವನೆಡೆಬಿಡದೆ ।
ಜಪಿಸಿದೊಡೆ ಯೋಗಿಜನಗಮ್ಯನೆಲೆ ದೊರೆವುದಿದ ।
ವಿಪರೀತದುಚ್ಚರಣೆಗೈದೊಡಂ ಪುರುಷಾರ್ಥ ಸಿದ್ಧಿಸುವುದಿದು ಸತ್ಯವು ॥ (9)
ಕರಣಮೂರೊಂದಗೊಳಿಸುವ ಕಷ್ಟವಿಲ್ಲ ಬಂ ।
ಧುರದ ತತ್ವಂಗಳಂ ಶೋಧಿಸುವ ಪೊಲಬಿಲ್ಲ ।
ಸ್ವರಲೋಪ ದೇಶಕಾಲಾದಿ ಭೇದಂಗಳುಂ ಕುಂದು ಹೆಚ್ಚುಗಳ ಬಗೆಯು ॥
ಅರಿಯದಾರಾದೊಡಂ ಶ್ರೀರಾಮನಾಮವಂ ।
ಸ್ಮರಿಸೆ ಜೀವನ್ಮುಕ್ತನಪ್ಪನೀ ಮಹಿಮೆಗಳ ।
ಕೊರೆಯಲಾಗಳವನಾಯಾಸ ಬಂಧನವನುಂ [illegible] ॥ (10)

ಇಂದಿರೇಶನ ನಾಮ ಮಹಿಮೆಗಳ ಮಾಳ್ಪಕ್ರಮ।
ದಂದಮಂ ಮುಂದೊರೆವೆನೆನುತ ಹರ ಕೃಪೆಯಿಂದ।
ಇಂದೀವರಾಕ್ಷಿಗಂ ಪೇಳ್ದನವಚಿತ್ತಾಗು ಶ್ರುತಮಾವಚರಿತೆಗಳನು ॥
ಬಂಧುರಸ್ನೇಹದಿಂ ವಾಲ್ಮೀಕಿ ರಾಘವನ।
ಪೊಂದಿ ಪೂಜಿಸಿ ಕೃತಾರ್ಥತೆವಡೆದು ಪರ್ವತದೊ।
ಳೊಂದು ತಾಣವನು ಸೂಚಿಸಿದಂ ನಿವಾಸಕೆಂದಾನಂದಮಯ ಮೂರ್ತಿಗೆ ॥ (11)
ಮುನಿಪನಂ ಬೀಳ್ಕೊಂಡು ಚಿತ್ರಕೂಟಾದ್ರಿಗಂ।
ಜನನಾಥನೈದಿ ಸುಸ್ಥಳವ ನಿಟ್ಟಿಸುತ ಲೀಲೆ ।
ವನೆಗೈವುದೆಂದು ಲಕ್ಷ್ಮಣಗೆ ನೇಮಿಸಲಾತನತಿಹರ್ಷದಿಂದಲೈದಿ ॥
ಘನತರವ ದ್ರುಮಗಳಂ ತರಿದು ಸುಮನೋಯೋಗ್ಯ।
ಮೆನಿಪ ಋಷಿಮಂದಿರವ ಸಿಂಗರಿಸಿ ಬಿನ್ನವಿಸೆ।
ವನಜಾಕ್ಷ ಪೇಳ್ದನಾಗೃಹವಾಸ್ತುಪುರುಷನಂ ಪೂಜಿಸಲ್ವೇಳ್ಕುಮೆನುತ ॥ (12)
ಧವಪೇಳ್ದವಾಳ್ಕೆಯೊಳ್ ಕೃಷ್ಣಮೃಗವಂ ಪಿಡಿದು।
ತವಕದಿಂ ಬಿನ್ನಪಂಗೈಯೆ ಶಾಸ್ತ್ರೋಕ್ತಸಂ।
ಭವವಿಧಿಯನನುಕರಿಸಿ ಸ್ನಾನಸಂಧ್ಯಾದಿಗಳ ರಚಿಸಿ ಶುಚಿಯಿಂದಲೈದಿ ॥
ವಿವಿಧಫಲ ಮೂಲ ಜಲ ಪಕ್ವಮಾಂಸಂಗಳಂ।
ನವಜಲಂಮೇಲಹಸಮಿತ್ಕುಶೆಗಳಂ ತಂದು ।
ಸವನಿಸಲ್ವಾಸ್ತು ಸಂತರ್ಪಣಂಗೈಯಲೆಂದಿಚ್ಛೈಸಿದಂ ರಾಘವಂ ॥ (13)
ವೇದೋಕ್ತವಿಧಿಯಿಂದ ವೈಶ್ವದೇವದ ಬಲಿಯ।
ನಾದರದಿ ರೌದ್ರವೈಷ್ಣವವಾಸ್ತುಬಲಿಗಳಂ।
ಮೋದದಿಂದಿತ್ತು ತತ್ತಜ್ಜಪಗಳಂ ಮಾಡಿ ಮಂಗಳಾಧಿಕ್ಯಗೂಡಿ ॥
ಸಾಧುಜನಸಂಸೇವ್ಯನೆಂದೆನಿಸಿ ಸತಿಸಹಿತ।
ಲಾದಯಾಪರ ಪರ್ಣಮಂದಿರದೊಳಿರಲಿತ್ತ।
ಸಾದಿವಿಭುದೈತಹ ಸುಮಂತ್ರ ದುಃಖಸ್ವಾಂತ ನೈದಿದಂ ನಿಜನಗರಿಂಗೆ ॥ (14)
ಜೀವವಿಲ್ಲದ ಕಾಯದಂತೆ ನಿಶ್ಶಬ್ದದಿಂ।
ದಾವಸುಧೆ ರಾಜಿಸಲ್ಕತುಲ ಸಂಕ್ಲೇಶದಿಂ ।
ಸಾವಧಾನಂಗೈಯದತಿವೇಗದಿಂ ಪೊಕ್ಕನಾ ನಗರಿಯಂ ಸೂತನು ॥
ದೇವನಾವೆಡೆಯಲಿಹ ನೆಂದು ಕೇಳುವ ಜನರಿ।
ಗೀವಿಧವ ನರುಪುತ್ತ ಖಿನ್ನಮಾನಸನಾಗು।
ತೀವಜವದಿಂ ಪೊಕ್ಕನರಮನೆಯಬಾಗಿಲಂ ರಥವಿಳಿದು ತಸ್ಕರನೊಲು ॥ (15)
ಧೊರೆಯ ಗಂಗಾತೀರದಲ್ಲಿಳಿಸಿ ತಾಂ ಬಂದ।
ದುರುಳನೆಂದಲ್ಲಲ್ಲಿ ಜನರಾರ್ತಿಯೊಳ್ಬರೆವ।
ಚರಿಯದಂದದಿ ನೃಪಾಲಯವ ಬೇಗಪೊಕ್ಕು ದಶರಥಮಹೀಪಾಲನ ॥
ಚರಣಂಗಳಗೆ ನಮಿಸಿ ಕೈಮುಗಿದು ಕೌಸಲ್ಯೆ।
ಗೆರಗಿ ದೂರದಿನಿಂದು ಖಿನ್ನನಾಗಿಹ ಸೂತ।
ನಿರಿಪ ಕಾಣುತ್ತಲತಿ ಶೋಕದಿಂ [illegible] ಶೋಕದ [illegible]ದು ॥ (16)

ಅತಿಶಯದಿ ರಾಮನಂ ಕರದೊಯ್ದುದರಣ್ಯಸಂ ।
ಗತ್ತನೆಸಗಿ ತಾನೋರ್ವನೈತಂದು ಗೃಹದಿ ನಿಜ ।
ಪತಿಗೇನನೊರೆವನೀ ದುರ್ಜೀವಿಯಂ ಕಾಣಲಾದಿತ್ತಮಾಯ್ತತಿ ಶೋಕಪ್ರ ॥
ಹಿತ್ರಶಾಯಿಯೆಂದೆನಿಸಿ ಬಪ್ಪುದೇಯೆನುತ ಸ್ತ್ರೀ ।
ತತಿಪಲುಬುತಿರೆ ಕೇಳ್ದು ಮೂರ್ಛೆಗತನುಮಾದ ದಶ ।
ರಥಮಹೀಪಾಲ ನಾಗಾರ್ತರವ ಮೊಳಗಿದುದು ನಾಲ್ದೆಸೆಯೊಳದುಭುತದೊಳು ॥ (17)
ಧರಣಿಯೊಳ್ಕೆಡೆದರಸನಂ ನೋಡುತಳಲುತಿಹ ।
ಪರಿಯತಾಣಾತ್ಮಂ ಸುಮಂತ ಪಿಡಿದೆತ್ತಿ ಕು ।
ಳ್ಳಿರಿಸಿದಂ ನಿಜವಕ್ಷದುಂದದಾಕೆ ಗೈವುತ್ತಿರಲಿತ್ತಲೊಳ್ಕೌಸಲ್ಯೆಯುಂ ॥
ಕರಗಳೆರಡಂ ಪಿಡಿಸು ಕಮಲನೇತ್ರಂಗಳಂ ।
ನೊರಸಿ ಸೆರಗಿಂ ಬೀಸಿಪಾದಗಳ ನೊತ್ತುತಿರ ।
ಲರಿಯದೊಂದನು ವಿಚೇತನದಂತೆ ಬೆರಗಾಗಿ ಕುಳ್ಳಿರ್ದನರನಾಥನು ॥ (18)
ನುಡಿಯುದಿರಲರಸನಾರ್ತತೆಯಿಂದ ಸ್ತ್ರೀಜನ ಗ ।
ಳಡಿಗಡಿಗೆ ರೋದಿಸುವುವಂ ಕಂಡು ಕೌಸಲ್ಯೆ ।
ಪೊಡವಿಪತಿಯಂ ಮೃದೂಕ್ತಿಗಳಿಂದ ಮದೂಲಿಸಲನುಗೈಯೆ ಕರವಪಿಡಿದು ॥
ನಡುಕವೇಸ್ಯೈರಾಯ ಮತ್ತಾರ ಭಯದಿಂದ ।
ನುಡಿಸದಿಹೆ ಸಾರಥಿಯು ದೌರ್ವಾಗ್ನಿಕೈಕೆಯು ।
ತ್ತುಡಿಯುಲಿಲ್ಲವೆನುತ್ತ ಗದ್ಗದಂ ಬೆರಸುತ್ತ ಮರುಗಿದಳೊಳಲಿ ಬಳಲಿ ॥ (19)
ಬಲಿದ ಮೋಹಾಂಧಕಾರಂ ಮೆಲ್ಲ ಮೆಲ್ಲನೆಯು ।
ತೊಲಗಲರೆನಿಮಿಷ ಕೆಚ್ಚರುತೋರಲರಸ ನಿಜ ।
ಲಲನೆಯಂ ನೋಡಿ ಪಿಂದಿರುಗಿ ಸೂತನ ಕರದು ಮೊದಲಿಸಿದಂ ಮೃದುಳದಿ ॥
ಜಲಜಾಕ್ಷರಾಮ ನಾವೆಡೆಯೊಳಹ ಮತ್ತಾವ ।
ಪೊಲಬನಂಟಿಸಿ ಬಂದೆ ಮುಂದಾವವಸ್ಥೆಯುಂ ।
ನಿಲುಕಲಿಚ್ಛೈಸಿರ್ಪ ನಾನುಪೂರ್ವಕದಿಂದ ಲೊರೆಸುವೃತ್ತವನು ಬಿಡದೆ ॥ (20)
ಮೃದುಳ ಶೈಯೋಚಿತ ಪದಂಗಳಟವಿಯೊಳೆಂತು ।
ಪದವಿಡಿದೈದುವರ ನಾಥರೊಲ್ನಡೆವುತಿರ ।
ಲದುಭುತವ ರಥಗಜಾಶ್ವಗಳಲ್ಲದೋರ್ವನವನೆಂತು ಸಂಚರಿಪ ಬನದಿ ॥
ಮುದದಿಂದ ಚಂದ್ರಶಾಲೋಚಿತನಿವಾಸ ನಂ ।
ಪದ ದುಷ್ಟಮೃಗಕೀಟ ಕಂಟ ಕಾಡೊಳಗೆಂತು ।
ಪದಚಲನೆ ಗೈವಪಕುಮಾರ ಸುಕುಮಾರ ಚಿತ್ರಮಾರ ಮುಲ್ಲೋಕಶೂರ ॥ (21)
ಇಲ್ಲಿಂದ ಪೊರಟಾವ ನಗರಮಂ ಸಾರಿರ್ದ ।
ರಲ್ಲಿಂದದೆಲ್ಲಿಗೈದಿದರೇನ ನುಡಿದರವ ।
ರೆಲ್ಲಿರ್ಪರೇನ ಮಾಡಿದರಾವಪರಿಯೊಳಹ ರಾವಿಧವ ಬಿತ್ತರದಲಿ ॥
ಬಲ್ಲವಿಕೆಯಿಂದರುಪಲೆನಲರಸ ಗಭನಮಿಸಿ ।
ಹೊಲ್ಲನಾ ವಾರ್ತೆಯಂ ಬಿತ್ತರಿಸಿ ತಾಂ ಬಂದು ।
ಬೆಲ್ಲಮಂ ಸೂಚಿಸಿದನತಿಭಕ್ತಿಯಿಂ ಸೂತನಾ ಮಹೀಪಾಲನೊಡನೆ । (22)

ಸೂತನೀನೈದಿ ನಗರದೊಳೆಲ್ಲರಂ ಪ್ರಿಯ।
ಪುತ್ರರಂ ಮೂಳ್ಪರಂ ಕೇಳ ಕ್ಷೇಮಾರೋಗ್ಯ।
ಮಾತೆಯರಿಗಭಿನಮಿಸಿ ಕರಗಳಂ ಮುಗಿವೆಮೆಂದುಸುರು ಸುರನಾಥಸಖನ॥
ತಂತನದಿದಾವರೆಗೆ ಮಣಿಮುವಂದಿಸಿದೆ ಸಹ।
ಜಾತಹರ್ಷದೊಳೆಂದು ಬಿನ್ನವಿಸಯೋಧ್ಯಾಧಿ।
ನಾಥ ಭರತಂಗೆಮ್ಮ ಕೌಶಲವ ವಿಸ್ತರಿಸು ಮತ್ತಖಿಲ ನೇಹಿತರ್ಗೆ॥ (23)

ದೊರೆತನದೊಳರ್ದಖಿಳವಂ ಪೊರೆದು ಮಾತೆಯರ।
ಚರಣದೊಲವಂ ಪಿಡಿದು ಪಿತನನುಜ್ಞೆಯ ವೀರ।
ದಿರುತ ಸತ್ಯಾಖ್ಯ ವರ್ತನೆಗೈದು ರವಿಕುಲೋತ್ಪನ್ನ ಮಾದರಸುಗಳಗೆ॥
ವರಶಿಖಾಮಣಿ ಯೆನಿಪ್ಪುದೆಂದು ಭರತಂಗೊರೆದು।
ಕರಹಾವಲಂಬಿಗಳ ಕುಶಲಂಗಳಂ ಕೇಳು।
ನರನಾಥನೆಡೆಗೆ ನಡೆಯೆನುತ ರಾಮಂ ಪೇಳ್ದನನಿತರೊಳ್ ಸೌಮಿತ್ರಿಯು॥ (24)

ಮೊರೆವುತುರಗನ ತೆಱದೊಳಂತೆಂದ ಲೋಭದಿಂ।
ದಱಿಯದಪರಾಧಮಂ ಕೈಕಾವ ಸಂಪದಕೆ।
ಮೆರೆದು ರಘುವೀರನಂ ಬನಕಟ್ಟಿದಂ ನೃಪತಿ ಮುಲ್ಲೋಕಸಮ್ಮತನನು॥
ದೊರೆಮಾತೆಪಿತ ಬಂಧು ಪ್ರಿಯಸಖಂ ಶ್ರೀರಾಮ।
ಚರಣಂಗಳೆನಗೆಂದು ಬಂದಿರ್ಪೆ ನೊಡನೆ ನೃಪ।
ವರನೆನಗೆ ಪಿತನಲ್ಲವೆನುತ ವಿಜ್ಞಾಪಿಸುವುದೆಂದನತಿ ಕ್ರೋಧದಿಂದ॥ (25)

ರಾಮಲಕ್ಷ್ಮಣರೀರ್ಪರೊರೆದುದಂ ಕೇಳುತ್ತ।
ಸೋಮನಿಭ ವದನಮಂ ಬಾಗಿ ಕಂಬನಿಯಿಡುತ।
ಭಾಮಿನೀಮಣಿ ಸೀತೆ ಯೇನೊಂದನುಸುರುವರಶಕ್ಯ ಶೋಕಾತುರದೊಳು॥
ತಾಮುಸವನಾಂತಿರಲ್ಕಾನು ಪುಗೈದವರೆ।
ರಾಮಲಕ್ಷ್ಮಣರಿಂಗೆ ನಮಿಸಿ ನೇಮಕಕೊಳ್ಳು।
ತಾಮಹಾದುಃಖಮಂ ಪೊರಸೂಸದೊಲ್ ನಿಲಿಸಿ ರಥವನಡರಿಂದೆ ತವಕದಿ॥ (26)

ಕೆಲವು ದೂರಂಬಂದು ನಿಷದಾಧಿಪತಿಗೂಡಿ।
ವಲವು ಪಂಬಲಿಕೆಯಿಂದೊಂದುತಾಣಾಮನಲ್ಲಿ।
ನೆಲೆಗೈದು ನಾಲ್ಕಾರು ದಿನಮಿರ್ದೆ ರಾಘವಂ ಮಗುಳೆನ್ನ ನೆಸವನೆನುತ॥
ಉಲುಹಿಲ್ಲದಾಮುದು ಧ್ಯಾನತಾಮಸದಿನಂ।
ಕಲಿತವಾದುದು ದಿಶಾಚಕ್ರ ಮುದರಿಂದಾನು।
ನಿಲಲಮ್ಮ ದೈದಿದೇಂ ಸುರತರಂಗಿಣಿ ಯುಳದು ನಗರ ಪಂಥಾನಮಿದು॥ (27)

ಪರಿಮಳ ವಿಹೀನ ಕುಸುಮಗಳಾಂತು ಕಂಗೊಳಿಪ।
ತರುಗಳಂ ನಿಷ್ಫಲದಿ ರಾಜಿಸುವ ತರುಗಳಂ।
ಮೊರೆವತುಂಬಿಗಳಿಲ್ಲ ದರೆಮುಗಿದು ಕಾಣ್ಬಡುವ ಕಮಲಯುತ ಸರಸಿಗಳನು॥
ಪರಮದೈನ್ಯಾಲಾಪದಿಂ ಕೊರಗುತಿಹ ಜನರ।
ಪರಿಗಳಂ ನೋಡುತ್ತನಾಣ್ಚಿ ಮುಖಮಂ ಮುಚ್ಚಿ।
ಬರುತಿರ್ದೆನಖಿಳ ದೇಶಗಳ ಕಳಕಳದಾನು ಪಿಂದಿರುಗಿ ನೋಡುತ್ತಲಿ॥ (28)

ಕಲುಶಿತರುಷ್ಣಾಶ್ರುಜಲದಿಂ ಪಲ್ವಲುಗಳಾಂ ।
ಪಲಬಗೆಯ ಕೂಪ ಪ್ರವಾಹಂಗಳೊಪ್ಪಿರಲ್ ।
ಕಲಿತಯುವ್ವನ ದೊಳಖಿಳಾ ಸತ್ವಸಂಸ್ರುಪಗಳೊಂದು ಸಂಚರಿಸದಿರಲು ॥
ಉಲಿವ ಕೋಕಿಲ ತಾಮ್ರ ತುಂಡಂಗಳೊಂದಲ್ಲಿ ।
ಚಲಿಸದೆಲೆ ರಾಮ ಶೋಕಾಭಿತಪ್ತತೆ ಯೆನಿಸಿ ।
ಮಲಿನಮಾಮುದ್ಯಾನವಂ ನೋಡುತಾಂ ನಾಚ್ಛಿತ್ಯೈತಂದೆ ನಗರದೆಡೆಗೆ ॥ (29)
ಪೊಂದೇರಕಾಣುತ್ತ ಜನರೆಲ್ಲ ಶ್ರೀರಾಮ ।
ಬಂದನೆಂಬಾಶಯಿಂ ನೋಡಲೈತಂದಿಲ್ಲಿ ।
ಇಂದೀವರಾಭನಂ ಕಾಣದೆಲ್ಲರ್ಕಳಲೆಳಸಿದ ಕ್ಲೇಶದಿಂದ ॥
ಕುಂದನಾದೊಡನೆರುಪಲೆಂದಾನು ವೇಗದಿಂ ।
ದೊಂದನುಡಿಯದೆ ಪೊಕ್ಕು ನಗರದೊಳ್ನಾಲ್ದೆಸೆಗ ।
ಳಂದುನೋಡಲ್ ಶೂನ್ಯಜನ ಮಾಗಿ ಕಂಗೊಳಸಲರಮನೆಗೆ ನಡೆತಂದೆನು ॥ (30)
ಬರುವಲ್ಲಿ ವೀದಿಯೊಳ್ಕರುವಾಡ ದೊಳ್ನೋಡು ।
ತಿರುವ ನಾರೀಜನಂ ಬಾಲವೃದ್ಧಾದಿಗಳ್ ।
ಬರಿಯ ರಥಮಂ ಕಂಡು ಮುಂಕೊಂಡುಬರೆ ಶೋಕಶರಧಿಯೋಲ್ಬೋರ್ಮೊರೆಯಲು ॥
ಅರಿಗಳಂ ನೋಡುವಂತೈತಂದೆನೆಲ್ಲರಂ ।
ಪರಿಹರಿಸುತಾಂ ಮಿತ್ರ ಬಾಂಧವರ ಮೂವಲಿಸ ।
ದುರುಶೋಕದಿಂದ ಪುಟಭೇದನವ ನಿಟ್ಟಿಸುವರಳವಲ್ಲದಾನು ಜೀಯ ॥ (31)
ಎನುತ ಸೂತಂ ಪೇಳೆ ಸಂತಾಪವೆಚ್ಚುತಾ ।
ಜನನಾಥನೆಂದ ಕೇಳೈಸೂತ ಮುಂದಪ್ಪ ।
ದನುಕಾಣಲಾರ್ಗಳವು ಪ್ರಾರಬ್ಧಫಲದಿಂದ ಸ್ತ್ರೀವಚನ ಮೋಹವುದರೀ ॥
ಮನೆಯೊಳೋರ್ವರು ಕಾಣದಂತಮಾತ್ಯಾದಿಪರಿ ।
ಜನರರಿಯದಂತೆನ್ನ ಬುದ್ಧಿಯಿಂದಂ ಮಾಡಿ ।
ದಿನಿಸು ಕೃತ್ಯವನುಣ್ಮಲ್ಕಸವಳಂ ಪರಿಹರಿಸದಳವಲ್ಲದಂತಾದುದು ॥ (32)
ಕೇಡುಬಂದೊದಗುವವಸರದಿ ಬುದ್ಧಿಗಳೊಂದು ।
ಗೂಡುವಾರ್ಗಾದೊಡಂ ಕುಲನಾಶಕೃತ್ಯಮಂ ।
ಮಾಡಿಫಲವೇನಿನ್ನು ಪೂರ್ವಕೃತ ಸುಕೃತಮೆಳ್ಳನಿತಾ ದೊಡೀರ್ವರೆನ್ನ ।
ಕೂಡಿಸೈದೆನ್ನ ರಘುವರ ನೆನಿತುದೂರಮಹ ।
ನಾಡೊಳರ್ವಲ್ಲಿಗಲ್ಲ ದೊಡೆಯುಸುಗಳಾವ್ರತೀರ್ ।
ಪೊಡೆನುತ ಪಲುಬಿದಂ ತನಯರ ಗುಣಂಗಳಂ ಭಾವಿಸುತ ಚಿತ್ತದಲ್ಲಿ ॥ (33)
ನೀರಜದಳಾಕ್ಷನಂ ಸಾರಸುಕಟಾಕ್ಷನಂ ।
ನೀರದಸುಗಾತ್ರನಂ ನಿರುಪಮಸ್ತೋತ್ರನಂ ।
ಚಾರುಮಣಿ ಭೂಷನಂ ಕರಾಜಜನ ಪೋಷನಂ ಕ್ಷತ್ರಿಯೋತ್ತಮವೇಶನಂ ॥
ತೋರದಿರಲಸುವೆನ್ನ ಚಾರತ್ತಿರದೈಮುನ್ನ ।
ತೀರಸಿಂಗರಿಸೆನ್ನ ಸ್ವಾಹೋಹಿಸಲ್ವೆನ್ನ ।
ಕೂರ್ರತರ ಶೋಕವರಿಹರಮುಪ್ಪದಿಮನಸ್ಸೆಮೆಸುತೆಸಗು ಮಂತ್ರಿರನ್ನ ॥ (34)

ಹಾರಾಮ ! ಪಾಪಿಷ್ಟನೆಂದೆನ್ನನುಳಿದೆಯೊ ।
ಹಾರಾಮ ! ಸೇಮಕರ ಸೌಮಿತ್ರಿ ತೊರೆದೆಯಾ ।
ಹಾರಾಮ ! ಭಾಯಾಸ್ವಕಾರಿ ಸತ್ಯಾತ್ಮವೈದೇಹಿ ಯೆನ್ನಂ ನೋಡೆಯಾ ॥
ಘೋರತರಕೈಕಾಗ್ನಿ ವಿಟ್ಟೆನ್ನ ಸುಖದಿಂದ ।
ಚಾರುನದನದಿಗಳಂ ನೋಡುತ್ತ ಬನದೊಳ್ವ ।
ಹಾ ತಗೈದಪುದುಚಿತವೇ ಯೆನುತ ನೆನನೆನೆದು ಮರುಗಿದಂ ಪಂಕ್ತಿರಥನು ॥ (35)
ಇಂತರಸ ಶೋಕದಿಂ ಪೊರಳುತಿರೆ ಕೌಸಲ್ಯೆ ।
ಸಂತಾಪದಿಂದ ಸೂತನ ಕರೆದು ಪೇಳ್ದ ।
ಳ್ಕ್ರಾಂತಿಕೊಂಡಿರೆ ಶೋಕಸಾಗರದಿ ತೊಳಲುತಿರೆ ಪ್ರಾಣಂಗಳಾಳಯುವೆನಗೆ ॥
ಚಿಂತಿತಾರ್ಥದ ರಾಮ ಸೌಮಿತ್ರಿ ವೈದೇಹಿ ।
ಯಂತಿವರಲ್ಲಿ ಗೈದೆನ್ನಿಷ್ಟ ರಕ್ಷಿಪುದು ।
ಪಿಂತು ಮುಂತಾಲೋಚನಂ ಗೈಯಬೇಡೆನುತ ಬಳಲಿದಳ್ನೆನೆದು ಮರುಗಿ ॥ (36)
ಈ ತೆರದೊಳೆಲ್ಲರಂತಃಪುರಾಂಗನೆಯರುಂ ।
ಅತಿ ಶೋಕ ದುಃಖೋನ್ನತಿಯು ಅಳುವರವ ದಿಕ್ಕುಕ್ಕು ।
ಜಾತವಾಗಲ್ ಜನಾಕುಳವ ಗಡಬಡವ ಕಂಡಾ ಸುಮಂತ್ರಂ ಭಯದೊಳು ॥
ಮಾತುಗಳೊಳುಪಚರಿಸಿ ಮಗುಳಿ ವಿನಯವರಚಿಸಿ ।
ಪ್ರೀತಿಕರ ನುಡಿಗಳಂ ಬೀರಿ ಜಾರಿಸಿದನ ।
ತ್ಯಾತುರವದುಃಖಮಂ ಹರ ತ್ರಿಪುರವಂ ಜಯಿಸಿದಂತೇ ಪೇಳ್ವಮತಿಯು ॥ (37)
ವಿನಯವುಂ ಬೀರಿದನನೇಕ ವಿಧದಿಂದುಃಖ ।
ವನು ಕೆಡಿಸಲೆಂದಾಸುಮಂತ್ರ ಧೀಮಂತ ನೀ ।
ವಿನಿತು ಶೋಕವ ತಾಳಲೇನುಕಾರಣ ಮಿಷ್ಟ್ರಜನರು ಸಂಕಟಗೊಳುತ್ತಿರೆ ॥
ನೆನೆವಳುವುದುಚಿತವೇ ನಗರಕತಿ ಶಯವಾಗಿ ।
ಬನದೊಳ್ರಘೂದ್ವಹಂ ಸುಖದೊಳಹ ತತ್ಪಾದ ।
ವನದಗಳ ಸೇವಿಸುತ ಸೌಮಿತ್ರಿ ಯಾನಂದವಾಯನೆನಿಸಿ ರಾಜಿಸುವನು ॥ (38)
ನಗರ ಬಾಹ್ಯೋಪವನದೊಳ್ಕ್ರೀಡೆಗೈವಂತೆ ।
ನಗೆಯ ಬೀರುತ ಜನಕಜಾತೆ ಸುಖದಿಂದಿರ್ಪ ।
ಳೊಗುಮಿಗೆಯಸತ್ಯವಂ ಪೊರೆದಪರಮಂಗಳಸಲೆಂದು ರಘುನಾಥನಿರ್ಪಂ ॥
ಮಗುಧತೆಯೊಳುಂ ಬರದೆ ತೋಳಲಲೇಂ ಪುರುಷಾರ್ಥ ।
ಮಗಣಿತ ಸುಖಂಗಳೊಪ್ಪುವವಾತನಂ ನೆನೆದ ।
ರಘಹರವೆನುತ್ತಲರಿದಾತ ಗೆಲ್ಲಿಯದುಃಖಬಲೇಶ ಸಂಬಂಧ ಬಳಕ ॥ (39)
ಆ ಮಹಾ ಪುರುಷನಂ ಸ್ಮರಿಸಿ ಕಾಯಕ್ಲೇಷ ।
ಭೀಮಶೋಕಾರ್ತಿಯಂ ಕಳೆದು ಸೌಖ್ಯಾಸ್ಪದಾ ।
ರಾಮ ನೆನಿಸಿದವರಖಿಲ ಮನು ಮುನಿಗಳೆಲ್ಲರುಂ ನೀನಿವಂತಿಳದು ಪ್ರಿಯದಿ ॥
ಭೂಮಿಭಾರಾಪನೋದನ ಗೈಯಲವತರಿಸಿ ।
ತಾಮಸಿಗಳಂ ತರಿದು ನಿಜ ಶರಣರಂ ಪೊರೆದು ।
ಧಾಮಪ್ರತದಧಿನಾಥರೆಂದರಿತು ಸುಖಮಿರ್ಪುದೆನುತ ಸೂತಂ ಪೇಳ್ದನು ॥ (40)

ಸಂಧಿ 22 ಕ್ಕೆ ಪದ 959.

ಸೂಚನೆ ॥ ಶಬ್ದವೇಧಪ್ರಭಾವದಿ ವೈಶ್ಯಜಾತಂಗೆ ।
ಲಬ್ಧಾಮರಸ್ಥಾನದಿರವ ಚಿತ್ತರಿಸುತಂ ।
ಶುದ್ಧಮಾನಸನಾಗಿ ದಶರಥಮಹೀಪಾಲ ಕಳೆದ ನಾ ಯಾಮಿಯನು ॥

ಅಂತಃಪುರಾಂಗನಾಜನರ ಸಾಮದೊಳಂ ಸು ।
ಮಂತನಾಶ್ವಾಸನಂ ಗೈವುತ್ತಿರಲ್ಕಿತ್ತ,
ಕಾಂತನಂ ನೋಡಿ ಕೌಸಲ್ಯೆ ನಿಜತನಯಂ ನೆನೆದು ನೆನೆದುಮ್ಮಳಿಸುತೆ ॥
ಅಂತರಂಗದ ಕೋಪಮಂ ಮನಗೈದಂತೆ ।
ಮುಂತಿರುವ ಪಂಕ್ತಿರಥನಂ ನಿಷ್ಠುರಂಗಳಿಂ ।
ಕಾಂತೆ ಪೇಳ್ದಪನೇನ ಚಿತ್ತರಿಸಲಪ್ಪುದಾಂದೆಲೆಗೆ ಶೈಲತನುಜೆ ॥ (1)

ಪರಮಕಾರುಣಿಕ ಶಾಂತಂದಾಂತ ಸಾಧುಜನ ।
ರೆರೆಯನೆನುತಂ ವಂದಿಮಾಗಧರ್ ಪೊಗಳುವಂ ।
ತುರುತರದ ಸತ್ಕೀರ್ತಿಯನ್ನಾಂತ ಧೀಮಂತ ನಿಷ್ಕಾರಣದಿ ಪುತ್ರರ ॥
ಪೊರಡಿಸಿದುದೇಂ ದುಷ್ಟಮೃಗಗಣಾಕೀರ್ಣ ಸಂ ।
ಭರಿತ ಬನದೊಳಗೆಂತು ಜೀವನಂ ಗೈವರೆಂ ।
ತಿರುವರೇನೂಡುವರಿದಂ ನೋಡದಲೆ ಬರಿದೆ ಭವದೀಯ ಕಠಿಣಮನವು ॥ (2)

ಚಿತ್ರಜಾತೋಪಮಿತ ಸುಕುಮಾರ ಶರೀರ ।
ವೃತ್ತದಂಷ್ಟ್ರಂ ಪಲಾಶಾಯ ತೀಕ್ಷ್ಣ ಸಾಧು ।
ಚಿತ್ತಾನುಕಾರಿ ಸಚ್ಛಾಸ್ತ್ರವೇದಿತ ನಖಿಲವಿಮಲಸದ್ಗುಣನಿಲಯನು ॥
ಬಿತ್ತರದ ಗಹನದೊಳಗೆಂತಿರ್ಪ ಶತಕೋಟಿ ।
ಯೊತ್ತಿಸಾರಿಹುದೆನ್ನ ಹೃದಯಮದರಿಂದಲಾ ।
ನೊತ್ತರಿಸಹೆನದೇನೆಂಬೆ ಕಲುಷಿತದಿರವ ಪ್ರಬಲಪ್ರಾರಬ್ಧದಿರವ ॥ (3)

ಪದಿನಾಲ್ಕುವರುಷ ಕೈಕಾತನಯನೀರಾಜ್ಯ ।
ಪದವಿಯನ್ನನುಭವಿಗೆ ಬಿಡಲುಳ್ಳದ ಭಾಗ್ಯಸಂ ।
ಪದವ ರಾಘವನುಣಿವನೇನ ಮೃಗಧೂರ್ತಕಗಳುಂಡುಳಿದ ಫಲಭಾಗಮಂ ॥
ಕದನ ಕರ್ಕಶಮೃಗಾದನ ಕೊಂಬನೆಂತುದುಃ ।
ಖದ ಕೀಕಟಾರಣ್ಯ ದೊಳ್ಬದುಕೆ ಬರ್ಪನೆಂತು ।
ಪದುಮಾಕ್ಷರಾಮಗಿನಿತಡಸಿತು ಮಹತ್ತರದ ಸಂಬಾಧೆಪೂರ್ವಕೃತವು ॥ (4)

ಸಕಲ ವಿದ್ಯಾವಿಚಕ್ಷಣಾಯುತಂ ರಾಮದು ।
ಯುರ್ಗಕಾತಿಗಳ ರಚಿಸಿದರೊಡಂಬಡುವನೇ ಚಿತ್ರ ।
ವಿಕಲಮಾದೊಡೆ ಮೂರುಲೋಕಮಂ ಸುಟ್ಟಿಡುವನೊಂದೆ ಬಾಣಾಗ್ರದಿಂದೆ ॥
ಅಕಲಂಕ ಸತ್ಯಾನುಸರಿಣಿಯಾಂ ಪೇಳ್ವ ಶ್ರುತಿ ।
ನಿಕರದನುಸರಣೆಯಂ ನನುಕರಿಸಿ ಬನದಲಿ ।
ಪ್ಪುರಿಕರಾಮ ? ಮೃಗಂಗಳೊಡನಿರ್ಪುದಿದು ಭವತ್ಕೃತ ಮದೀಯಾತ್ಮಭವಗೆ ॥ (5)

ಪೂರ್ವಪಂಕ್ತಿಗೆ ಸ್ವಬಂಧುಗಳ ಪ್ರಾರ್ಥಿಸೆಗೈದು ।
ದುರ್ವಿಷಯರಿಕಿಷ್ಟಬಂಧುಗಳೆಡೆಯ ಚುಂಬಿಸ ।
ಲ್ಪಾರ್ವರೊಡಬಡರಖಿಲ ಶಾಸ್ತ್ರಾಗಮ ಶ್ರೇಷ್ಠನಿಷ್ಠಾಗರಿಷ್ಠರಂತೆ ॥
ಪರ್ವದ ಪುರೋಡಾಶಹವಿಯುಪದರ್ಭೆಗಳ್ ।
ಪೂರ್ವಾನುಭೂತ ಮಧ್ವರದಲ್ಲಿ ಮತ್ತದಂ ।
ಗೀರ್ವಾಣರೊಪ್ಪುವರೆ ಗಡ ಯುವರಾಜ್ಯಮಂ ರಾಘವಂ ಕೈಕೊಳುವನೆ ॥ (6)
ನಾರಿಯುಭರ್ಗಂಜಿಸಿದ ಬಳಕುಣಾವರೇ ಪತಿಗ ।
ಳೋರಂತೆ ನೀಚರ್ಕನೀಯು ಸಾಧುಮುರುಸಕಲ ।
ಸಾರಮಂ ಕೊಂಡುಳದ ಭೂಮಿಯಂ ಗತಸಾರಸೀಮೆಯಂ ಮಗುಳೆ ತರದೆ ॥
ಶೂರಂಕೃತಾಗಮಿಯುದಾರಂ ಜ್ಯೇಷ್ಠಶ್ರೇಷ್ಠ ।
ಧೀರಾಗ್ರಗಣ್ಯ ರಘುವೀರ ನೀಪಡವಿಯಂ ।
ಸಾರುವನೆರುತ ಸಾರಮೆಂದುರುತು ಭವದೀಯ ಕೃಪೆಯುದಾತ್ಮಜಗಾದುದು ॥ (7)
ಪತಿಯೊರ್ವ ಮುಖ್ಯಪ್ರಾಣಂ ಮಗುಳೆ ಸುಂದರಿಗೆ ।
ಸುತನೆರಡನೆಯ ನಿಲಯು ಮತ್ತೆ ಮೂರನೆಯನಿಪ ।
ಪಿತನವಂದಿರ ಲೋಕದೊಳು ಖ್ಯಾತಿ ಮತ್ತೊರ್ವಸತಿಯ ಸಂಪ್ರೇಮದಿಂದ ॥
ಸುತನಡವಿಗಟ್ಟಿ ಬಾಯ್ಬಿಡುಕಾಕೆಯೊತ್ತಿಲಿ ।
ಪತಿಕುಮಾರರ ನೆನಸಿ ನೀವಿರ್ದರಿಸ್ನಾರು ।
ಗತಿಯೆನಗೆ ಪೇಳ್ವುದೆಂದತಿ ನಿಷ್ಠುರದಿ ಪತಿಯ ನುಡಿಸಿದಳಾಕಸಲ್ಯೆಯು ॥ (8)
ಕಾಸಿದುರುಸಬಳಮಂ ಕರ್ಣದೊಳಗಿಟ್ಟಂತು ।
ದಾಸೀನವಾಕ್ಯಗಳ್ ಶ್ರವಣತಾಡಿತವಾಗೆ ।
ವಾಸಿಗೆಟ್ಟರಸ ಸಂತಾಪದಿಂ ತಪಿಸುತ್ತ ತನಯನಂ ನೆನೆದಳಲುತ ॥
ಬೇಸರಂಗೊಳುತ ಮೋಹದಿ ಮುಳುಗಿ ಶೋಕಿಸುತ ।
ನಾಸೀರಮುಳದ ಖಿಲದಂತಳ್ಕಿ ಬಳ್ಕುತ ಸು ।
ರೇಶನೀಹಿತ ಕರಗಳಂ ಮುಗಿದು ಕೌಸಲ್ಯೆಯನ್ನು ಪ್ರಾರ್ಥಿಸೆಗೈದನು ॥ (9)
ಸತಿಗೋದಿ ಸುತನ ಕಾನನಕೆ ಕಳುಪಿದೆನೆನ್ನು ।
ಪತಿಶಯದ ದುಷ್ಕೀರ್ತಿಯಡಸಿ ಹಂಬಲಿಸುತಿರೆ ।
ಪತಿರುಚಿಯನಿಟ್ಟಂತೆ ಪಗಲೆಲ್ಲ ನೋಯಿಪುದ ಸತ್ಯಮೆಂದೆನಿಪುದಬಲೆ ॥
ಹಿತಕಾರಿಯಾಗಲಹಿತಂಗಳಾಚರಿತದಲಿ ।
ಸತತಂ ನೃಶಂಸ ಕೃಪಣಾಧಮಾಧಮನಾಗೆ ।
ಪತಿಯೆ ದೇವತೆಯೆಂದು ಸಾಧ್ವಿಯಭಾವಿಸುವರದನುಳದೆ ಕಾಲಬಲದೆ ॥ (10)
ಜನನೊರೆದ ವಾಣಿಯಂ ಕೇಳ ಪಾತಿವ್ರತೆಯ ।
ರನು ನೆನೆದು ಕಂಪಿಸುತ ಕೌಸಲ್ಯೆ ಜನನಾಥ ।
ಗನುನಯದೊಳಡಿಗೆರಗಿ ಬಿನ್ನಪಂಗೈದಳತಿನಿಜಭಾವಭಕ್ತಿಯಿಂದೆ ॥
ತನಯನಂ ನೆನೆದು ಶೋಕಾಗ್ನಿ ಸಂಭವಿಸಲ್ಕೆ ।
ಮನವಿಲ್ಲದಪರಾಧಮೆಸಗಿದುದ ಪಾಲಿಪುದು ।
ಮನುವಂಶಕರುಣಾನಿಧಿ ಕಲುಷಚಿತರಂ ಪೊರೆವ್ರುದದು ಭವದ್ಧರ್ಮವೆತ್ತೆ ॥ (11)

ಚರಣಸೇವನೆಯ ಬಲದಿಂದಾಳುದಾನೊಂದ ।
ನರಿಯದೆಸಗಿದೊಡದಂ ಮನ್ನಿಪುದು ಶೋಕಸಂ ।
ಭರಿತವಾನಸರಿಂಗೆ ಮತಿಜನಿಸದೆಂದೆನಗೆ ವಿಜ್ಞಾಪಿಸಿದೆ ವಿನಯದಿ ॥
ಧರಣಿಯೊಳ್ಕೆಡೆದೊಂದನರಿಯದುನ್ಮತ್ತತೆಯೊಂ ।
ದಿರುತಿರಲ್ದಿನ ಪೋಗಿನಿಶಿಯರಸಲಾಸವಾಯ ।
ಕರಗಸ ಸಂತಾಪದಿಂ ನಿಟ್ಟುಸಿರ್ಗಳ ಬಿಡುತಪೊರಳುತಿರಳಿಯೊಲಿರ್ದನು ॥ (12)

ಅರೆನಿಮಿಷಕೊಮ್ಮೆ ಸುತರಂ ನೆನೆದು ಹಮ್ಮೈಪ ।
ನೆರೆ ಮುಚ್ಚಿ ಕಂಗಳಂ ಕೃತಮೆನಿಸಿ ಕಳವಳಿಪ ।
ನರೆನಿಮಿಷದೊಳ್ಮುಚ್ಚಿರ್ದಯಾಂತು ಮುಗುಳ್ಚತ್ತು ತಲ್ಲಣಿಪ ನರನಾಥನ ॥
ಒರೆಯಲಳವಲ್ಲ ವ್ಯಾಮೋಹಾಂಧಕಾರವುಂ ।
ಪರಿಪರಿಯಲಳಲಿ ಬಳಲುತಲರ್ಧರಾತ್ರಿಯೊ ।
ಳ್ಸ್ಮರಿಸಿದಂ ಪೂರ್ವಕೃತ ದುಷ್ಕೃತವ ಮತ್ತದಂ ಪೇಳಲನುಗೈದ ಸತಿಗೆ ॥ (13)

ಅಂಗಣದೊಳಿರ್ದ ಮಂದಾರತರುವಂ ತರಿದು ।
ಮುಂಗಡೆಯ ಕಿಂಶುಕದ ಪಿಟಪಿಯನ್ನುಟ್ಟು ಫಲ।
ಸಂಗಡಿಸುವನ್ನೆಗಂ ಪೊತ್ತು ನೀರೆರೆದರ ಪಣ್ಗಳಂ ಕಂಡಳಲುತ ॥
ಭಂಗಪಡುವನ ತೆರದಿ ಹಲಕಾಲವಲಿ ಮನುಜ ।
ಪುಂಗವನ ಪೇರಡವಿಗಟ್ಟ ಮತ್ತದ ನೆನೆದು ।
ಸಂಗಟಂಗೊಳುವ ದುರ್ಮೇಧನೆನ್ನಂ ನೋಡಿ ಬಳಲುವದು ನಿನಗಾದುದು ॥ [(14)

ಅರಿತುಕಾರ್ಯಾಕಾರ್ಯಗಳ ನೆಸಗದಾತನಂ ।
ತರಳ ದುರ್ಮತಿಯೆನುತ ನುಡಿವ ಪರಿಯರಗಾದೆ ।
ಗೆರೆಯನಾಂ ಪೂರ್ವದೊಳಗೆಸಗಿದತಿಪಾತಕದ ಫಲವನುಭವಕೆ ಬಂದುದು ॥
ಶರಿರಬಲದವ್ವನೋದ್ಧತಿಯಿಂದ ರಾತ್ರಿಯೊಳ್ ।
ಶರಹತಿಯೊಳಿರಿದೆ ಮುನಿದಾರಕನನಾ ಕಥೆಯ ।
ನೊರೆವೆ ಕೇಳಜ್ಞಾನಕೃತದುಷ್ಕೃತಂ ಬಂದ ಪರಿಯ ಸುಖರೂಪದರಿಯ ॥ (15)

ಚಾತಕಂಗಳ ಜೀವನೌಷಧಂ ಬರುಹಿಜೀ ।
ವಾತುವುಂ ವೀರುಧಗಳಂಗವುತ್ರಘುಟಿಕೆಯುಂ ।
ತಾತಪ್ಯಮಾನ ಮಾನಸಕದಂಬಕ ತತಿಗಳುನ್ಮೇಷಕರ ಬೀಜವು ॥
ಜಾತವೈರಾಗ್ಯಕಾದಂಬ ಕುಲಕಂಪಥಿಕ ।
ರಾತುರಶ್ರೀವೃದ್ಧಿಕರವೆನಲ್ ಮಳೆಗಾಲ ।
ಜಾತುಜತು ತೋರಿದುದನೇನೆಂಬೆ ಜವ್ವನಿಗಮದದಾನೆಯೆಂಬಂದದಿ ॥ (16)

ಆಸಮಯದೊಳಗಾನು ಜವ್ವನಮದಂಗಳವಿ ।
ಲಾಸದಿಂ ಬೇಂಟೆಗೈದಿದೆನೇಕರಥದಿಂದ ।
ಬೇಸರದೆ ಸರದೆ ಸರಿಯುತ್ತರತೊದ್ಯಾನ ದೇಶದೊಳ್ತೊಳಲಿದೆಂ ದಿವಸದಲ್ಲಿ ॥
ವೋಸದಿಂದಲೆ ಗಜವು ಶ್ವಾಪದಂಗಳ........? ।
ಭ್ಯಾಸಕೃತಹವೆನುತಲರಿತಿರುಳು ತತ್ರಹಿನಿ ।
ವಾಸವುಂಗೈದು ಕೋವಿಟ್ಟು ನಿಟ್ಟಸುತಿರ್ದೆಸಂದಿನಿರುಳ್ಚ್ಚರದೊಳು ॥ (17)

ಮೃಡಕಂಠಹಾಲಾಹಲವ ಧಿಕ್ಕರಿಸು ।
ತೊಡನೆ ಕಗ್ಗತ್ತಲೆಯು ಕವಿದು ಬರೆ ನಟ್ಟಿರುಳೊ ।
ಳೊಡನೊಂದು ಶಬ್ದ ಕೇಳ್ಪುಟ್ಟಿದೇನೆಂಬೆನಾ ಸಮಯದೊಳಗೆನ್ನ ಕಿವಿಗೆ ॥
ಬುಡುಬುಡೆನುತುಲಿ ವುದಿದು ಗಜಘೋಷವೆಂದರಿತು ।
ತುಡುಕಿದೆಂ ಶಬ್ದವೇಧಿಯ ಶರೋತ್ತಮವ ನೀ ।
ರಡಿಕೆಗೊಂಬುವ ಮದೇಭಧ್ವನಿಯ ಗುರಿಯಿಟ್ಟು ಪೊಡೆದೆನಾ ಕ್ಷಣದಲಾನು ॥ (18)

ಧ್ವನಿವಿಡಿದು ಪೋಗಿ ಶರ ತಾಗಿದುದು ಮರ್ಮಗಳ ।
ಖನನಗೈವುತ ಮಹಾವೇದನೆಗೆ ತರಹರಿಸ ।
ದನಘಮೌಳೀಶ್ಯಾಮ ರಾಮ ಹಾ ! ಹತನಾದೆ ನೆಂದು ಕೂಗಿಟ್ಟುಮುಗುಳ್ ॥
ವನದೊಳು ಜಲಾಹಾರ ಗೊಂಡಿರ್ದು ಜೀವಿಸುವ ।
ಮನುಜರಂ ಮರ್ದಿಸುವೊಡಾವ ಶಾಸ್ತ್ರವ ಪೇಳ್ದು ।
ದಿವಿಸನಿಟ್ಟಸ ಲಾರದಾವವಿಧಿತಂದಿಟ್ಟುದೀ ದುರಾವಸ್ಥೆಯನ್ನು ॥ (19)

ಚೀರವಸನಂಗಳ್ ಜಟಾಭಾರ ವನ್ಯದಾ ।
ಹಾರ ನಿರ್ಜೀವಿಗಳದಾರಿಗೇನಪಕೃತಿಯ ।
ಕೋರಾಯುದಿಂ ಗೈವರನಘರಂ ಕೋಲಿಂದಲಿಟ್ಟು ಕೆಡಪುವುದಿದೇನು ॥
ಕಾರಣವು ದುಷ್ಕಾರ್ಯದಿಚ್ಛೆಯಿಂ ಬಂದಿರ್ಪ ।
ವೀರನಾವನೊ ಪುರಾಕೃತಮಡಗಿತೊ ವಿತತ ।
ಕ್ರೂರಗುರುತಲ್ಪಘನದಾವನೆಸಗಿದನೆಂದು ಮರುಗಿದಂ ಶರದುರುಬೆಗೆ ॥ (20)

ಜರೆಯಿಂದ ಜೀರ್ಣಮಾದಂಗಗಳ್ ಕುಳ್ಳಿರ್ದ ।
ಧರೆಯಿಂ ಸ್ವತಂತ್ರದಿಂದೇಳಲಮ್ಮದ ವೃದ್ಧ ।
ರರೆಜೀವಿಗಳ್ ನಿಜಾಂಧರ್ ತಂದೆ ತಾಯಿಗಳದೆಂತು ಬದುಕುವರೆನ್ನುವ ॥
ಪರಿಯ ಚಿಂತಿಸುತಳುವದಲ್ಲದೆನ್ನಯದೇಹ ।
ಪರಿತಾಪಕೋಸುಗಂ ಚಿಂತಿಸನು ದೈವಬಲ ।
ದುರದಸಂಕಟವ ಮುಂದಿರದೆಳೆಸಿತೇಂಗೈವೆ ಶಿವಮಹಾದೇವದೇವ ॥ (21)

ಎಂದು ದೈನ್ಯೋತ್ಕಲಿತದಾಲಾಪಗಳನೆಸಗು ।
ತಂದು ಮುನಿದಾರಕಂ ಕೆಡೆದು ಮರುಗುವ ನಾದ ।
ಬಂದೆನ್ನ ಕಿವಿಗಂಟಲಾಕ್ಷಣಂ ಶರಚಾಪ ಕೈಗಳಿಂ ಜಗುಳೆನೆಲಕೆ ॥
ಕಂದಿತಾನನಮೆದೆಯೊಳಂ ಪುಟ್ಟಿದನುತಾಪ ।
ದಿಂದಾನು ಮೆಲ್ಲನೈತಂದು ನೋಡಿದೆ ಜಟಾ ।
ವೃಂದಮಂ ಪರಪಿ ಕೆಡೆದಿಹ ತಾಪಸೋತ್ತಮನ ಕಲಿತಶಾರೀರಕರನ ॥ (22)

ಉರದೊಳಗೆ ನಟ್ಟ ಶರ ಪೊರಳುತಿರುವುಭಯ ।
ಕರ ಸ್ಫುರಿಸುತಲಿ ತನ್ನವರ ಪಾಂಸುದಿಗ್ಧಶರೀರ ।
ಸುರಿವಶ್ರುಧಾರಾನುಕಾರ ಶೋಣಿತಪೂರವೆರೆದ ಮುನಿದಾರಕನನು ॥
ಕರಕಲಿತಕಲಶಮಂ ಕಂಡು ಭಯಮಂ ಕೊಂಡು ।
ಬರಲು ನಡುಗುತ ಮೆಲ್ಲನೊತ್ತನೈದಲ್ ಮುನಿಪ ।
ಕರಕಷ್ಟದಿಂದ ಕಂಗಳ ತೆರೆದು ನೋಡಿದಂ ಕಲ್ಮರಂದಹಸುವಂತೆ ॥ (23)

ವನದಿ ಪರ್ಣಾಹಾರಗೈವನಾಥರ ತರಿವು ।
ದೆನುತಾವಪಂಡಿತಂ ಬೋಧಿಸಿಹನಲ್ಲದೊಡೆ ॥
ನಿನಗದೇನಪರಾಧವೆಸಗಿದೆಂ ಕೋಲೊಂದರಿಂದೆನ್ನ ನೆಚ್ಚುಕೆಡೆವೆ ।
ಜನನಿಜನಕರ್ ಮುಪ್ಪಿನವರಂಧರಿ ನ್ನೊರ್ವರ್ ।
ತನಯರಿಲ್ಲದನಾಥರೆನ್ನ ಬರವಂ ನೋಡು ।
ತನುದಿನ ನೆನೆನೆನೆದು ಕ್ಷುತ್ಪಿಪಾಸೆಯೊಳಿರ್ಪರವರಿಗೇಂ ಗತಿಯುಮರಸ ॥ (24)
ಭುವನಗಳ ನಿರ್ಮಿಸಲ್ ಮಗುಳ್ ತರಿಯಲ್ ಶಕ್ತ ।
ರವರಿರ್ವನೆಲೆಯಿಲ್ಲಗೊಂದಣ ಪೋಗಿಮ ।
ತ್ತವರಿಗೀವೃತ್ತಮಂ ತಿಳಿಪಿ ಸಂತೈಸಲ್ಲದಿರ್ದರರೆನಿಮಿಷದೊಳಗೆ ॥
ಲವಲವಿಕೆಯಾಗೆ ಜಾಠರದ ಬಂಧನಕೋಪ ।
ಮಪ್ರಕೆ ಶಪಿಸದೆ ಮಾಣಿರದರಿಂದ ನೀಂ ಪೋಗಿ ।
ಸುವಿವೇಕದಿಂದಲುಪಚರಿಸು ಬೇಗದೊಳೆನ್ನ ಶರಬಾಧೆಯನ್ನು ಬಿಡಿಸು ॥ (25)
ಅಸುಗಳಂ ಹೀರುತಿದೆ ಯೆನ್ನ ವೈಕಲತೆಯ ।
ನ್ನೆಸಗುತಿದೆ ಪೊಸಮಸೆಯ ಕಣೆ ಯೆನ್ನ ಹೃದಯಮಂ ।
ವಸತಿಗೈದಿದೆ ಬೇಗಲುದ್ಧರಿಸವೇಳ್ಕೆನುತ ಮುನಿಪುತ್ರ ದೈನ್ಯದಿಂದೆ ॥
ಉಸಿರಲಾ ವಾಣಿಯಂ ಕೇಳ್ದಾತ ತಿಭೀತಿಯಿಂ ।
ದುಸಿರ ಬಿಡದವ್ಮ್ಕದರೆಗೊರದಂತೆ ಕಾಣುತಿರು ।
ವೆಸಕಮಂ ಕಂಡಾತ ಕೃಪೆಯಿಂದ ಮಗುಳೊರೆದ ಭಯನಿವಾರಣದ ನುಡಿಯ ॥ (26)
ಶರವ ತೆಗೆಯಲ್ ಪ್ರಾಣಮಿರದೆ ಪೋಪುದೆನುತ್ತ ।
ಲರಿದು ಚಿಂತಿಪೆಯೆರಗಿ ಭೂಸುರಂ ತಾನಲ್ಲ ।
ವರಿದು ದೋಷಂಬಪ್ಪುದಿಲ್ಲವೆಂದು ದಯಮಂ ತಿಳಿ ವೇಳ್ವೆನೊಂದುಸೊಲ್ಲ ॥
ಪರತಪೋರಾಶಿ ವೈಶ್ಯೋತ್ತಮನ ದೆಸೆಯಿಂದ ।
ಧರಿಸಿ ಗರ್ಭವ ಪಡೆದಳೆನ್ನ ಶೂದ್ರಾಂಗನೆಯು ।
ನಿರುತ ತಥ್ಯಮೆನುತ್ತಲರಿದು ಶರಮುಪಹತಿಯ ಪರಿಹರಿಸು ನರವರೇಣ್ಯ ॥ (27)
ಎನುತ ನಿಟ್ಟುಸಿರ್ವಿಡುತಲತಿಕಷ್ಟವಚನಗಳ ।
ಮುನಿತನಯ ಪೇಳಲಾನತಿಭೀತಿಯಿಂದ ಮೆ ।
ಲ್ಲನೆ ಶರವ ತೆಗೆಯಲಸುಚಾರಿತಾಕ್ಷಣಕೆನ್ನ ಮನಸು ಪೀದವನಾಳ್ದುದು ॥
ನೆನೆದಂಗವೈಕಲ್ಯದಿಂದೆಸೆವ ದಾರಕನ ।
ಘನಸತ್ವದಿಂದೆತ್ತಿ ತಡಿಯೊಳಿಟ್ಟನುತಾಪ ।
ವನುಭವಂಗೈದನರೆನಿಮಿಷ ಮತ್ತೇನೊಂದನರಿಯಬಾರದ ದುಃಖದೆ ॥ (28)
ಸುದತಿ ಮಾಡಿದ ಪಾಪರಾಸಿ ಬೆಂಬಿಡ ದೀಗ ।
ಳೊದಗಿತಿನ್ನೇಂಗೈವನೆಂದು ಚಿಂತಿಸಿ ಸೌಖ್ಯ ।
ಪದ ಕಾಣದತಿವೇಗ ಪೋಗಿ ವೃದ್ಧರ ತುಷ್ಟಿಗೊಳಿಸವೇಳ್ಕೆಂದು ತಿಳಿದು ॥
ಸದಮಲಕವಟುಕ ನರಿಪಿದ ಮಾರ್ಗಮಂ ಪಿಡಿದು ।
ಪದವಿಡಲ್ ಪಜ್ಜೆಗಳ್ ಸಾಗದಿರಲತಿಕಷ್ಟ ।
ಹೃದಯದಿಂ ಮೆಲ್ಲ ನಾಳೋಚಿಸಿದೆ ಮತ್ತೇನುಪಾಯಮಂ ಗೈವೆನೆನುತ ॥ (29)

ಪಸಿವು ನೀರಡಿಕೆಯಿಂದತಿವೃದ್ಧರೀಮಾರ್ಗ ।
ದೆಸಕಮ ನೋಡುತಿಹರಾಂ ಪೋದರವರಿಗೇ ।
ನುಸಿರುಪೆನೆನುತ್ತ ಚಿಂತಿಸಲನ್ನೆಗಂ ತೋರ್ದುದೊಂದು ಮತಿ ಯೆನ್ನ ಮನಕೆ ॥
ಪೊಸಕಲಶಮಾಯತಿಯ ಕರದಲಿರಲದಕೊಂಡು ।
ರಸಭರಣಗೈದು ಪಿಡಿದೈದಿದೆಂ ಮತ್ತಿದಂ ।
ದುಗಿರಲಮ್ಮದೆ ಪಾದದಲಾಹ ತೋರಲಲ್ಲಿಲ್ಲಿ ನಿಲುತ ನಿಲುತ ॥ (30)

ಅತಿವೃದ್ಧರನ ವೃಕ್ಷಬಲ? ರನಾಥರು ಬಂದು ।
ಜೊತೆಯಲ್ಲಿದೊಂದು ಪಾದಪಮೂಲದೊಳ್ ಕುಳಿತು ।
ವಿತ್ರತ್ರಕ್ಷುತ್ತೃಟ್ಪದದ ಬಾಧೆಯಿಂದತೊಳಲಿ ಬಳಲುತೊರಗಿರಲು ಕಂಡು ॥
ಅತಿಭಯಂಗೊಂಡು ಮೆಲ್ಲನೆ ಸೊಪ್ಪುಳಾಗದೊಲ್ ।
ಯತಿಪನಿಪ್ಪೆಡೆಗೈದುತಿರಲನ್ನೆಗಂ ಪಾದ ।
ಗತಿಯ ತಿಳಿದಿರ್ವರುಂ ಸುತನೆನ್ನುವಾಸೆಯಿಂದೆನ್ನ ಮಾತಾಡಿಸಿದರು ॥ (31)

ತಾತ ನೀರಡಿಕೆಗೆಂದುದಕಮಂ ತರೆ ಪೋಗಿ ।
ಯಾತ್ರಕಾಲಸಗೈದೆ ತೃಷೆಯಿಂದಲುಂ ಭವ ।
ನ್ಮಾತೆ ಸುತ ಬರೆ ತಡೆದನೆಂದು ಬಾಯ್ಬಿಡುತಿರ್ಪಳಡಿಗಡಿಗೆ ನೆನೆದು ನೆನೆದು ॥
ಯಾತ್ರರಿಂದೊಂದು ದಿನಪಲ್ಲಾದಲುಭಯರುಂ ।
ಮಾತಿನಿಂ ನಿಟ್ಟುರಿಸಲವಮನದೊಳಡದೆ ನಿಜ ।
ಪ್ರೀತಿಯಿಂ ಕಾಪಿಡಲ್ವೇಳ್ಕು ಮಲ್ಲದೆ ತೊರೆದು ನೀರಾಟದೊಳ್ನಿಲ್ವರೆ ॥ (32)

ಗತಿಹೀನರಂಧಕರನಾಥರೆಮಗಂ ನೀನೆ ।
ಗತಿಯನೀವೃಗ್ಬಲ ಮೆನುತ್ತನೆಚ್ಚಿ ಹದಲ್ಲ ।
ದತಿಶಿರೋಮಣಿಯನ್ಯರಂತೆ ನೀಂ ಕೈಬಿಟ್ಟರಾರೆಮ್ಮ ಪೋಷಿಸುವರು ॥
ಮತಿಯುತ್ತರೊಳಗಗ್ಗಳಂ ಮಾತಿಗುತ್ತರವೀಯ ।
ದತಿಮೌನಗೊಂಡಿರ್ದರೆಂತು ಬದುಕುವೆವೆನುತ ।
ಜೊತೆಯಿಂದಲಿರ್ವರೀಪರಿಯ ಮೂದಲಿಸಲ್ಕೆ ನಡುಕ ವೆಗ್ಗಳವಾದುದು ॥ (33)

ಎನಿತುಕೋಪಿಸಲೆಮ್ಮ ಕಿನಿಸಿಂದ ನೋಡೆ ಮ ।
ತ್ತೆನಿತ್ರಹಿತಗೈದರುಂ ಪಿಸಯವಂ ತೋರ್ಪಡಿಸು ।
ತಿನಿಸ ಬೈಚಿಡದನಿಸುದಿನ ನಿಜಪ್ರಾಣಕಿಂದತಿಶಯಮೆನುತ್ತ ಪೊರೆದು ॥
ತನಯನಟ್ಟಡವಿಯೊಳು ಬಿಟ್ಟರಾರ್ಗತಿ ಯೆಮಗೆ ।
ಮುನಿಸೇಕೆ ಮಾತಾಡು ಬಾ ಕಂದ ಮುದದಿಂದ ।
ಲೆನುತವರ್ ಬೆಸಗೊಂಡರತಿಭಯದೊಳಾಂ ಮೆಲ್ಲನುಸುರಿದೆಂ ಶಾಪ ಭಯದಿ ॥ [(34)

ದಿಟ್ಟತನದಿಂದುಲಿಯೆ ಕೋಪಬಹುದೆಂಬ ಭಯ ।
ಮೆಟ್ಟುತಿರೆ ಮನವನಳುಕುತೆ ಬಳ್ಕುತಡಿಗಡಿಗೆ ।
ನಿಟ್ಟುಸುತ ಕೇಳಿ ಮಹಾ ತು(ತ್ಮ)ಮ ನಾನು ಸುತನಲ್ಲ ಕ್ಷತ್ರಿಯಂ ಪಂಕ್ತಿರಥನು ॥
ಬೆಟ್ಟರಲು ಕೆಲವುಶ್ವಾಪದಗಳುಂ ನದಿಯೊಳಂ ।
ನಟ್ಟಿರುಳು ಸಂಚರಿಸುತಿರಲೆನ್ನ ಕರ್ಮದಿಂ ।
ಮುಟ್ಟದುದಮೋಘಪಾತಕಮೆನ್ನ ದೆಸೆಯಿಂದಲಡೆ ನೊರೆವನೆನುತೆಂದನು ॥ (35)

ಕರಿಗಳುಂ ನೀರ್ಗುಡಿಯಲೈತರ್ಪವೆಂದು ಬಂ ।
ಧುರದ ಕೋವಿಟ್ಟಾನು ನೋಡುತಿರಲನ್ನೆಗಂ ।
ಭರಣಿಗೈಯುವ ಕಲಶದತಿರವಂ ಕೇಳ್ವಡಲ್ ಕರಿಯೆಂಬ ಭ್ರಾಂತಿಯಿಂದೆ ॥
ವರಶಬ್ದವೇಧಿಕಾರ್ಗಣೆಯು ಬಿಡಲದು ಪೊಕ್ಕೊ ।
ಡುರದಿ ಮಾನುಷ್ಯರವಮಾದುದಾಕ್ಷಣದಲ್ಲಿ ।
ನಿರದೈದಿ ನಿಟ್ಟುಸಲ್ಕಿದರಿದ ಜಟಾನಿಚಯದಿಂದೊರ್ವನೊರಗಿರ್ದನು ॥ (36)
ನೋಡಿ ವಿಸ್ಮಿತನಾಗಲಾಮುನಿಕುಮಾರ ಮಾ ।
ತಾಡಿಗಿದ ನರನಾಥ ಭಯಗೊಂಬೆಯಾತಕದ ।
ನಾಡಲೇಂ ಪೂರ್ವಕೃತಮಜ್ಞಾನದಿಂದಡಸಿತಾರಿಂದ ತೀರದಲ್ತೆ ॥
ಮೂಡಿರ್ಪ ಶರವ ತೆಗೆಜವದಿಂದ ಪೋಗಿಹಿತ ।
ಗೂಡೆಂದು ವೃದ್ಧರಿಗೆ ತಥ್ಯವಾರ್ತೆಯನೆಂಪು ।
ಕೂಡಿಪುದು ಜಲಮನೆನೆ ಶರವನುದ್ಧರಿಸಿದೆನು ದಾರಕನ ವಚನದಿಂದ ॥ (37)
ಶರವ ತೆಗೆಯಲ್ಕಾತ ಸುರನಗರಿಗಂಸರಿದ ।
ನರೆನಿಮಿಷಮಾಲಸ್ಯಗೈಯದಾಂ ಬಂದು ನಿಜ ।
ಚರಣಕರಿಪಿದೆ ಜೀಯ ಅಪರಾಧಮಂಗೈದೆ ಮಾಜೆನೆಳ್ಳನಿತ್ತನೈದೆ ॥
ಕರುಣದಿಂ ಪಾಲಿಸಲ್ವೇಳ್ಕೆನುತಲಾನೊರೆವ ।
ಖರತರದ ವಾಣಿಯಂ ಕೇಳುತ್ತ ಹಮ್ಮೈಸು
ತೊರಗಿ ಮಗುಳೆಚ್ಚೆತ್ತು ಕೋಪದಿಂ ಧಿಕ್ಕರಿಸುತೆನ್ನೊಳಂತೆಂದರೊಲಿದು ॥ (38)
ಕುಲಗೆಡುಕ ಪಾಪಿಷ್ಠ ಕ್ರೂರಕರ್ಮಾಚಾರ ।
ಕಲಿತ ನೀಂ ಪೇಳದೀ ದುರ್ನುಡಿಗದೇನೆಂಬೆ ।
ನೆಲದೀವಾನಪ್ರಸ್ಥ ಮುನಿಯಕೊಲಲಪ್ಪುದೇ ಬ್ರಹ್ಮೈಕ ನಿಷ್ಠಕನನು ॥
ಪಲುಬಲೇನಜ್ಞಾನಕೃತಮಾಯಿತದರಿಂದೆ ।
ತಲೆಯುಳಿದುದಿದು ಜ್ಞಾನಕೃತಮಾದೊಡಾಕ್ಷಣದಿ ।
ನೆಲವಿಲ್ಲದಲೆ ಪೋಪುದಾವರ್ಜಯಾದೊಡಂ ಪೇಳ್ದೇನು ಫಲನಿನ್ನೊಳು ॥ (39)
ಆದುದಂ ಪೇಳ್ದೇನು ವೇಗದಿಂದೆಮ್ಮಕೊಂ ।
ಡೊದಯ್ದು ಯಾಗನಲ್ಲಿಡುವುದೆನಲೆತ್ತಿ ಕಾವಡಿಯ ।
ನಾದರಿಸುತೈದಿ ಬಿಟ್ಟಿರ್ದಾತನೊತ್ತಿನಲ್ಲಿಟ್ಟರವರತಿಶೋಕದಿ ॥
ಮೇದಿನಿಯೊಳೊರಗಿರ್ದ ತನಯನಂ ತಡವರಿಸ ।
ಲಾದಿಸಂಭವಮಾಗಿ ವೃದ್ಧದಂಪತಿಗಳುಂ ।
ಭೇದವಿಲ್ಲದೆ ಶವದ ಮೇಲೆ ಬಿದ್ದಳಲಿದರದೇನೆಂಬೆ ಖೇದದಿರವ ॥ (40)
ಹಾ ! ಪುತ್ರ ಎಮ್ಮನುಳದೆಲ್ಲಿಗೈದಿದೆ ಬೇಗ ।
ಬಾ ! ಪುತ್ರ ಕಣ್ದೆರೆದು ನೋಡದಿರ್ಪೆಯದ್ಯಾತ ।
ಕೈಪುತ್ರ ಮತ್ತೇನು ತಾಪಸಂಭವಮಾದುದೇಂಕತದಿ ವಂದಿಸದಿಹೆ ।
ಕೋಪದಿಂ ನೋಡದಿರಲಾರೆಮ್ಮ ಪಾಲಿಸುವ ।
ರೀಪಾಪಿಯಿಂದೆಮ್ಮ ನಗಲುವರೆ ಮಾತೆ ಸಂ ।
ತಾಪ ಗೊಳುತಿಹಳೆದ್ದು ಮಾತಾಡು ಮೊಗನೋಡು ನಿಷ್ಕರುಣಗೈಯುದುಸಭ ॥ (41)

ಅರೆ ನಿಮಿಷವೆಡೆಬಿಡದೆಯಿನಿತು ದಿನ ಪರಿಯಂತ ।
ಸ್ಮರಿಸಿದುದನೊಲಿದಿತ್ತು ಮನದಂತೆ ನಡೆಸುತ್ತಂ ।
ಪೊರೆದು ನುಡಿಯಂ ಮೀರದತಿಭಕ್ತನೆಂದೆನಿಸಿ ಜನಪನುಂ ಗಳಿಸಿ ಬಳಿಕ ॥
ಪೊರೆವುದುಚಿತವೆ ? ಲೂನಪಕ್ಷದ್ವಿಜರಂತಿಲ್ಲಿ ।
ಮರುಗುತಿರುವೆವು ಕಂದ ನುಡಿಯದಿರೆ ಮುಳಿಸಿಂದ ।
ಕರುಣದಿಂದಪ್ಪು ಬಾರೆಂದು ಪಲುಬಿದರಾಗ ದಂಪತಿಗಳೀವೇಳ್ವೆನು ॥ (42)

ನೆಲವದಿರಿತಾಗ ತಾಪಸಪ್ರಲಾಪಂಗೈಯು ।
ಉಲಿವರಾರಿದಿರಿನಲಿ ಕೋಪ ಖರೆ ಮೇಲ್ಕೈಯ್ಯ ।
ಎಲವೊ ಶಮನಿಷ್ಠಾಪಕರ ಧರ್ಮರೂಪನಂ ನಿಚ್ಚಸುವೆನೆಂತೊ ಮರುಳೆ ॥
ಕೊಲೆಗಡುಗ ನೀಪರಿಯ ಖೇದಮಂ ತಂದಿಟ್ಟ ।
ಬಲುಹಿನೆಂದೆನುತ ಪಂಬಲಿಸಿ ತರಳನ ನೋಡು ।
ತಲಘುಮತಿ ಕರುಣದಿಂದಿಂತೆಂದನೇವೇಳ್ವೆನಚ್ಚರಿಯ ನಚ್ಚರಿಯನು ॥ (43)

ಮನಮುತ್ಸವದಿ ಪೋಗಿ ನವು ಸಪ್ತಕಮುಜನ್ಯ ।
ತನುವಿಂದಲೆಚ್ಚಿಡಿ ಬೇಗಮುದ ಪೋಗಾಡು ।
ತಿನಬಿಂಬಮುಚ್ಚಳಿಸಿ ಪೋಗುವರದಾವಗತಿ ಗಾಗತಿಯು ನಿನಗಡಸಲಿ ॥
ಮನವ ಸಂಚಲಗೈಯದನುದಿನಂ ಮಸ್ತಕದ ।
ವನಜಮನಿಟ್ಟಪ ಪವಿವ್ರಾಜರಿಂಗೇನು ।
ಘನಸುಗತಿಯಹುದು ಮತ್ತಾಸುಖಸ್ಥಾನಮಂ ನೀನೊಲ್ವುದೆಲೆ ಪುತ್ರಕ ॥ (44)

ಸಗರಶೈಬ್ಯಂದಿಲೀಪಂ ದುಂದುಮಾರಸಂ ।
ಯುಗಶೂರಮಾಂಧಾತ ನಳನಹುಷಮುಖ್ಯರಿಂ ।
ಗೊಗುಮಿಗೆಯ ಸದ್ಗತಿಯದಾವದಾವು ಮೊನಿನಗದಬ್ಬುಲೆಡೆವಿಡದೆ ಮಗನೆ ॥
ನಿಗಮ ಪಾರಾಯಣಂಗತಿಶಯದ ಶ್ರೌತ್ರಗಳ ।
ಸೊಗಸಿರುವ ಕರ್ಮಠರಿಗಂಭೂಹಿರಣ್ಯಾದಿ ।
ಬಗೆಬಗೆಯದಾನಿಗಳಗಾವಗತಿಯು ಹುದದುವೆ ನಿನಗೆ ವಶವಾಗಲನಘ ॥ (45)

ವರಮಂತ್ರಗಳನೇಮದಿಂದಲನುದಿನಬಿಡದೆ ।
ಪರಿಪಾಲನಂಗೈದ ಸತ್ಪುರುಷರಿಂಗಪ್ಪ ।
ಪರಮಸದ್ಗತಿಯುಪ್ಪುದಲ್ಲದೆನ್ನಯ ಕುಲಜರರಿಯರಾರ್ತಿಯ ಪದಗಳ ॥
ತರಳ ನೀನದರಿಂದ ಸುರ್ಗನೆಡೆಗೈದೆನುತ ।
ಪರಿಪರಿಯ ಪಂಬಲಿಕೆಗಳಲಳಲುತುದಕವಂ ।
ವಿರಚಿಸಿದರನಿತರೊಳ ಗಾದುದಚ್ಚರಿಯಭ್ರದೊಳಗದೇಂ ವರ್ಣಿಸುವೆನು ॥ (46)

ತಂದೆತಾಯಿಗಳ ಸೇವೆಯ ಸಾಧುಜನರೊಳು ।
ಸಂಗಬಂಧುರದ ತಪದಿಂದಲಾರ್ಜಿಸಿದ ಸುಕೃತದಿಂ ।
ಬಂದೊದಗೆ ದಿವ್ಯರಥಮಾಲ್ಯವಸ್ತ್ರಾಭರಣಗಳನಿಟ್ಟು ಸುರಪನೊಡನೆ ॥
ಪೊಂದೇರೊಳೈತಂದು ಪಿತಮಾತೆಯಂ ನೋಡು ।
ತಂದ ಭವತ್ಸೇವೆಯಿಂದೆನಗೆ ಸುರಲೋಕ ।
ಬಂದುದು ಭರಂ ಬೇಗ ಬಹುದೆನುತ ಮುನಿತನಯ ಪೇಳ್ದು ಬಾನೆಡೆಗೈದಿದಂ ॥ (47)

ನೋಡಿ ವಿಸ್ಮಿತನಾಗಿ ಭಯದೊಳ್ತಾಂ ನಿಂದಿರ್ದೆ ।
ನಾಡಲಮ್ಮದೆ ಮುನಿಪನನಿತರೊಳ್ಕರೆದು ಮಾ ।
ತಾಡಿಸಿದನರಸೆ ಮರಣದ ಭೀತಿಯೆಮಗಿಲ್ಲ ಪೊಡವಿಡನುಮಾನಗೊಳ್ಳದೆ ॥
ಜೋಡಿಲ್ಲದೆಮ್ಮ ಪುತ್ರನ ಶರದಲೆಚ್ಚು ನೀ ।
ಮಾಡಿದೆ ಯಪತ್ಯಬಾಹಿರನ ಮತ್ತದರಿಂದ ।
ನೀಡುಕೆನು ಸದೃಶಫಲವಿಾವ ಶಾಪವನೆನುತ ಕನಲಿ ಮುನಿಪತಿ ನುಡಿದನು ॥(48)

ಮಗನ ಕಾಣದಲಾವದೆಂತು ಸಂಕಟಗೊಳ್ಳುತ ।
ಪೊಗುವೆವಗ್ನಿಯನಂತೆ ನೀಂ ನಿನ್ನ ತನಯರಂ ।
ಮಿಗೆ ನೆನೆವುತಸುಗಳವೆ ಯಿದು ತಪ್ಪಲರಿದೆಂದು ಶಾಪಮನ್ನಿತ್ತು ಭರದಿ ॥
ಅಘಹರಹರಂ ಸತೀವೆರದು ಚಿತೆಯನ್ನಡರಿ ।
ಪೊಗುತ ಪ್ರಾಕೃತದೇಹಮಂ ಕಳೆದು ದೇವತತಿ ।
ಸೊಗಯಿಸುವ ತನುವಿಡಿದು ಸಗ್ಗಕೈದಿದ ನಿಮಿಷಮಾತ್ರದೊಳಗೇನೆಂಬೆನು ॥ (49)

ಉದಮುದದ ಜವ್ವನದಲುಬ್ಬಿಮಾಡಿದ ಕರ್ಮ ।
ಮಿದು ತಪ್ಪದಡಸಿತಾ ಮೌನಿಯುತ್ತಮಶಾಪ ।
ಸದೆಯದುಳಿದಪುದೆ ಕರಗತಮಾದ ರತ್ನಮಂ ಬುದ್ಧಿಪೂರ್ವಕದಿ ನೀಗಿ ॥
ಹದನೆನಿಸಿ ಚಿಂತಿಪುದು ಶೋಕಿಪುದು ಬಳಲಿಪುದು ।
ವಿಧಿಕೃತಮಿದೆಲ್ಲ ವಿಾರಲ್ಕೆ ಬಾರದಾದುದಲೆ ।
ಸುದತಿ ಸಂಭವಿಸದೆ ವಿಪತ್ತೊಂದೇಕಕಾರಣಂ ಕಾಣ್ಬುಟ್ಟಿದೀಗಲೆಮಗೆ ॥ (50)

ನಿಲ್ಲದೀತನು ಬಳಿಕ ಶ್ರೀರಾಮಚಂದ್ರಮನ ।
ಫುಲ್ಲಾರವಿಂದಸುಂದರಮುಖವನುಂ ಕಾಂಬು ।
ದಿಲ್ಲಾವು ಭ್ರುಮೆಗೊಂಡ ತೆರದೆಳಳಳ್ಳಕಳಲುತ್ತ ತೊಳಲುತ್ತಲೆ ॥
ಸೊಲ್ಲ ತೋರುತಲಿರ್ದೆವಿನಿತುಪತ್ತದ ಶಕ್ತಿ ।
ಯಿಲ್ಲದುಸಿರುಸಿರಿಂದ ಬಳಲುತಿದೆ ಬೇಗ ಕೌ ।
ಸಲ್ಯೆ ಬಂದೆನ್ನಂಗಮಂ ಸ್ಪೃಶಿಸು ಕರಗಳಿಂದಿನಿತಾನಿನಗಂ ದೊರೆಯದು ॥ (51)

ಎಂದೆನುತ ಕೌಸಲ್ಯೆಯೊಡನೊರೆದು ಪಂಕ್ತಿರಥ ।
ಬಂಧುರಸ್ನೇಹದಿಂ ರಾಮನಂಗೋಪಾಂಗ ।
ದಂದಾಯತಂಗಳಂ ವಂದಿಸುತಲಿಡೆವಿಡದೆ ತತ್ಕೀರ್ತನಂಗೈವುತೆ ॥
ಇಂದಿರಾಪತಿ ರಾಮಪುರದರಸನಂ ತನಯ ।
ನೆಂದು ಚಿಂತಿಸುತೆರಕವೆರೆದಂತೆ ಮಾನಸವ ।
ಪೊಂದಿಸಿದನಾತನೊಳದೇನು ಧನ್ಯನೋ ಗಿರಿಜೆ ಮತ್ತಾರಿಗಳವಡದಿದು ॥ (52)

॥ ಸಂಧಿ 23 ಪದ 1011 ॥

ಸೂಚನೆ ॥ ಸರಸಿಜಾಸನತನಯಶಾಸನವ ಮಸ್ತಕದಿ ।
ಧರಿಸಿ ಮಾತುಳನ ಬೀಳ್ಕೊಂಡು ಜವದಿಂ ಬಂದು ।
ಭರತ ನಿಜಪಟ್ಟಣದಿ ಮಾತೆಯರ ಪದಗಳಂ ಕಂಡು ಪೊಡಮಟ್ಟನೊಲಿದು ॥

ಗಿರಿಜೆ ಕೇಳೀಪರಿಯ ಕೌಸಲ್ಯೆಸೌಮಿತ್ರಿಯರ್ಗೊ ।
ಳೊರೆದ ನಿಜವೃತ್ತಮಂ ನೆನೆದು ದುಷ್ಕಲ್ಯತ್ವಮಂ ।
ಮರೆದೊರಗಲರ್ಧರಾತ್ರಿಯೊಳು ಪಂಬಲಿಸುತ್ತಲೀಸತಿಯರುಂ ನಿಟ್ಟುಸೆ ॥
ಅರಿಯದಂತಾನಿಶೆಯು ಜರುಗೆ ಪ್ರತ್ಯೂಷದೊಳು ।
ಸರವೆತ್ತಿಪಾಠಕಲನುಗ್ಗೈದರಲ್ಲಲ್ಲಿ ಬಂ ।
ಧುರವ ತಂತ್ರೀಸ್ವನಂ ಶ್ರುತಿಮಧುರತರಮೆನಲ್ ಕಲ್ಪಿತಾಮಂದಿರದೊಳು ॥ (1)

ಕೆಲರು ಪಾಡುತ್ತ ಕೆಲರಾಮಹಾರಾಜನಂ ।
ನೊಲಿದು ನುತಿಸುತಕೀರ್ತಿಗಾಯಕದಿ ವೀಣೆಗಳ್ ।
ನಲವಿಂದ ಬಾಜಿಸುತಲಲ್ಲಲ್ಲಿ ಪೂರ್ವದಂತೆಚ್ಚರುಂಗೊಳಿಸುತಿರಲು ॥
ಕಲಿತ ಮಾಧುರ್ಯಗುಂಭಿತ ಸ್ವರಗಳಂ ಕೇಳು ।
ತ್ರುಳಿ ಮಸಗಿತಮಿತ ಶುಕಪಿಕ ಕೇಕಿಹಂಸೆಗಳ ।
ಕಲಕಲಾರವಮಂಜುತರಮಾಗಲಿಟ್ಟಿಸುವ ಕುತುಕೆ ಭಾಸ್ಕರಂಮೂಡಿದಂ ॥ (2)

ಹುಚ್ಚಂದನೋತ್ಕಲಿತ ಪರಿಮಳತಮುದಕಮಂ ।
ಕರಚೆಲುವನಾರಿಯರ್ ಕಾಂಚನ ಘಟಂಗಳೊಳ್ ।
ಪರಿಪರಿಯಮಂಗಳಾಲಂಬನಯಘಾಸ್ಯಾಯ ವಿರಚನುಗೈಯಲಾಗ ॥
ಪರಮಮಂಗಳ ಮಹೋತ್ಸವಮಾಮುದೆಂದಿನಂ ।
ತರಮನೆಯ ನೃಪತಿಗೆಚ್ಚರು ದೇರವಿರಲನ್ನೆ ।
ಗರಸಿ ಕೌಸಲ್ಯೆಯೆಚ್ಚತ್ತು ಮೆಲ್ಲನೆ ಪಜ್ಜೆಯಿಡುತಲ್ಯೈತಂದವಳೊಲಿದು ॥ (3)

ಪತಿಯನೆಚ್ಚರುಗೈಯಲೈದೆ ಕೌಸಲ್ಯೆ ಸಂ ।
ಗತಿಸೆಂದು ಮಾಗಧಿಯ ಖಿಕ್ಕ ಸ್ತ್ರೀಜನಮೆಲ್ಲ ।
ರತಿಶಯ್ಯದಿ ಪರ್ಯಂಕದೆಡೆ ಬಲದೊಳಲ್ಲಲ್ಲಿ ನಿಂದು ಸಪ್ಪುಳಮೆಸಗಲು ॥
ಕ್ಷಿತಿಪನೆಚ್ಚರುಗೊಳ್ಳದಿರಲು ಕೌಸಲ್ಯೆ ಬಂ ।
ದತಿಮೃದುಳಕರಗಳಂ ಪಾದಕಮಲಂಗಳಂ ।
ನತಿಸುವಂದದಿ ಪಿಡಿದಲುಗಿಸೆ ಸಂಚನಿಸದಿರಲತಿಶಂಕೆಯತಾಳ್ದಳು ॥ (4)

ಪದಗಳಂ ನೇವರಿಸಿ ಹಸ್ತಂಗಳನೊತ್ತಿ ।
ವದನದೊತ್ತಂ ನಾಸಿ ದಿಟ್ಟಿಸಿವರಾಮುಖದ ।
ಲುದಿತ ಪರಿಮಳ ಪೂತಿಗಂಧಾನುಕರಣೆಯಿಂ ತೋರಲತಿಭಯದಿಂದಲಿ ॥
ಸುದತಿ ಕಂಪಿಸಲುಳಿದ ನಾರಿಯರ್ಗೀಪರಿಯ ।
ವಿಚಿತ್ರಮಾದುದನರ್ಥಕರನೆಂದುಬೇಗ ಬಂ—
ದೊದಗಿ ನಾಲ್ದೆಸೆಯಲ್ಲಿ ನೋಡಿದರ್ ಕ್ಷಿತಿಯರಸನಂಗ ಶೈಥಿಲ್ಯದಿರವ ॥ (5)

ಕಂದಿದಾನನವ ಜವಗುಂದಿರುವ ದಿಟ್ಟಿಗಳ ।
ಸಂದಿರುವ ಕಳೆಯು ಶರಪಂಜವಮಾಂತಿಶದೇಹ ।
ವಂದು ಕಂಗೆಸೆಯೆ ಕೌಸಲ್ಯೆ ಹಾಹಾ ! ನಾಥನೆಂದು ಭೂತಳಕೆ ಕೆಡೆಯೆ ॥
ಪಿಂದಿರ್ದ ನಾರಿಯರ್ ಕೋಯೆನ್ನುತಾರ್ತಿಯಿಂ ।
ಬಂಧುರದಶೋಕದಿಂದಳುವವರರವ ಮನೆಯ ।
ಪೊಂಜಿತೆಣ್ದಿಸೆ ಪ್ರತಿಧ್ವನಿಗೊಡುವೊಲಾವುದರೆನಿಮಿಷದೊಳಗೇವೇಳ್ವೆನು ॥ (6)
ನಾರಿಯರನೇಕವಿಧದಿಂ ಪ್ರಳಾಪಂಗೈಯ ।
ಲಾರುಕಂಪಿಸುವರು ಶಕ್ಯವಲ್ಲವಲಿರಲು ।
ಓರಂತೆ ಕೌಸಲ್ಯೆ ಕಂಬನಿಗಳಂ ಒಡುತ ಕೈಕೆಯುಂ ನೋಡಿ ಜರದು ॥
ಕ್ರೂರೆ ಕುಬ್ಜೆಯುವಮಾತಿನಿಂದ ಪತಿಯನ್ನೀಗಿ ।
ಕೋರಾಯುಸಂಪದವನ ಪಥವಿಸಲಿಚ್ಛೆಗೈ ।
ದೀ ರಾಜಕುಲವನೀರೊಳಗೆ ಕೆಡಿಡಿದೆ ಮಹಾಕಾಳರಾತ್ರಿಯ ತೆರದೊಳು ॥ (7)
ತನಯನಂ ವನಕಟ್ಟ ನೆನೆನೆನೆದು ಸಂಕಟದೊ ।
ಳನ ಪ್ರೋಂದವಾರ್ತೆಯಂ ಕೇಳಿ ಕುವರರ್ ಚಿತ್ತ ।
ದನುತಾಪದಿಂದಸುಗಳಂ ಬಿಡುವದದ ಕಂಡು ಬಂಧುಜನರೆಲ್ಲ ನೊಂದು ॥
ಹನನವಪ್ಪುದು ರಾಜಕುಲವೆಲ್ಲ ಸಂಹಾರ ।
ದನುವಾಂತುನೆರೆ ಪಾಪಿ ನಿನ್ನೊರ್ವಳಿಂದಮಿಾ ।
ವನಜಬಾಂಧವವಂಶ ಪೋದುದಕಟಕಟೆನುತ ಮರುಗಿದಳ್ ಕೌಸಲ್ಯೆಯು ॥ (8)
ಕುಲವ ನುಂಗಿದ ಕಾಳರಕ್ಕಸಿಯ ನೋಡುತ್ತ ।
ಕೆಲದಲಿರಗಲ್ಲನಾವೆಲ್ಲ ಪುಣ್ಯಶ್ಲೋಕ ।
ನಲಘುವಿಕ್ರಮನರಸನಂಗವಂ ತಳ್ಕೈಸಿ ಪೊಗುವನಗ್ನಿಯನೆನುತಲಿ ॥
ಪಲಬಗೆಯ ಮಂಗಳಾಚಾರವನ್ನೆಸಗುತ್ತ ।
ಲಲನಾಸಮೂಹಮಿರ್ದ ವೇಳೆಲಾರ್ಗಳವು ।
ನೆಲದೊಳುಳ್ಳಖಿಳ ಪ್ರಾಣಿಗಳನುಂ ಸುಖದುಃಖ ಬೆನ್ನಪತ್ತಿರ್ಪುದಲ್ತೆ ॥ (9)
ಬಿತ್ತರವ ದುಃಖಪರ್ಬಿದುದೂರನಾಕ್ಷಣದೊ ।
ಳಿತ್ತೆತ್ತ ನೋಡಲುಂ ತನ್ಮಯಾವಸ್ಥೆಯಾ ।
ಗುತ್ತ, ಬರಲಿತ್ತಗೊಳ್ ಜಾಬಾಲಿಕಾಶ್ಯಪಂ ಕಣ್ವಮೌದ್ಗಲ್ಯಮುನಿಗಳ್ ॥
ಉತ್ತಮವಸಿಷ್ಠ್ಯರೈತಂದು ಕಂಡಾನೃ ।
ಪೋತ್ತಮನವಸ್ಥೆಯಂ ತಮ್ಮೊಳಾಳೋಚಿಸಿದ ।
ರೆತ್ತಲುಂ ತಿಳಿಯಬಾರದ ಕಾರ್ಯ ಬಂದುದಿದಕೇನೆನುತ ಮುಂದರಿಯದೆ ॥ (10)
ಅರಸಾದನಿಕ್ಷ್ವಾಕು ಕುಲದ ಮತ್ತೀನೆಲದ ।
ಪರಿಪಾಲನಂಗೈದು ಪೂರ್ವಧರ್ಮಸ್ಥಿತಿಯ ।
ಪರಿವಿಡಿದಖಂಡಜನಮಂ ಗಳಪಮೇಧಾವಿ ಪಂಕ್ತಿರಥ ಪೋದ ಬಳಿಕ ॥
ವರಧನುರ್ಧರರಾಮನುದ್ಧರಿಸೆ ಶಕ್ತನಾ ।
ಪರಿಯಲಕ್ಷ್ಮಣನೊಡನೆ ಚಿತ್ರಕೂಟದೊಳರ್ಪ ।
ಭರತಶತ್ರುಘ್ನರುಂ ಕೇಕಯಾಧಿಪನೆಡೆಯ ದೂರದೇಶದೊಳರ್ಪರು ॥ (11)

ಸಿಡಿಲು ವರ್ಷೋಪಲಗಳತಿ ಘೋರತರವೃಷ್ಟಿ ।
ಪೊಡದಪುವು ಸ್ವಾಮಿಭೃತ್ಯನ್ಯಾಯ ಗುರುಶಿಷ್ಯ ।
ರೆಡೆಯಮರ್ಯಾದೆಗಳ್ ಸುತಜನಕರೆಂದೆಂಬ ಧರ್ಮಮಾರ್ಗಸ್ಥಿತಿಗಳು ॥
ನಡೆಯಲಮ್ಮವು ನಿರರ್ಥಕ ಕಲಹ ಸ್ವಾತಂತ್ರ್ಯ ।
ಮಡಿಗಡಿಗೆ ಪೆರ್ಚೆ ಬಹುದೆಲ್ಲರಿಗೆ ಸತಿ ಪತಿಯು ।
ನುಡಿಸವಿರ್ಪರ್ಳ್ ನಿಜೋತ್ಕರ್ಷೆಯಿಂದೊಡೆಯ ನಿರದಾರಾಜ್ಯಮತಿ ಪೂಜ್ಯವು ॥
ಬಲಿ ದುರ್ಬಲರ ಬಾಧೆಗೊಳಪಸತ್ಯಾಹಿತಂ । [(12)
ಕಲಿತವಾವಪುದು ರಮ್ಯೋದ್ಯಾನ ದೇಶದೊಳ್ ।
ಚೆಲುವ ನರನಾರಿಯರ್ ಚರ್ಚಲಿಸಲಮ್ಮರು ಬುದ್ಧಿಯುತವಾದ ಸಭೆಯೊಲ್ಲವು ॥
ನಲವಿಂದಯಾಗಶೀಲ ಬ್ರಾಹ್ಮಣೋತ್ತಮರು ।
ಪಲಬಗೆಯ ಯಜ್ಞದೊಳಗಾತ್ತದಕ್ಷಿಣೆಗಳಂ ।
ಸೊಲವಿಂವಲೀಯರತಿಶಕ್ತರೆಂದಿನಿಸಿರ್ಪರೊಡೆಯರಿಲ್ಲದರಾಷ್ಟ್ರದಿ ॥ (13)
ನೀತಿಜ್ಞರತಿನಿಪುಣರಖಿಳ ಪೌರಾಣಸಂ ।
ಜಾತಸುರತಾಪ್ರೀತರೆನಿಪ ತತ್ವಜ್ಞರತಿ ।
ಪ್ರೀತಿಯಿಂ ಪೌರಾಣಗಳ ಕೇಳಲನುದಿನಂ ಸರ್ವಭೂಷಣ ಭೂಷಿತ ॥
ಕಾತುರಾಂಗಿಯರಾಟ ಕೆಳಸಿಬರರುದ್ಯಾನ ।
ವಾತಾಯನಂಗಳಗೆ ಕಾಮುಕಪ್ರಿಯದಿಂದ ।
ಖಾತರಾನಾಯಕಾಹ್ನದು ದ್ಯಾನವಂಬಿಡುವರರಸಿಲ್ಲದಿಹ ರಾಷ್ಟ್ರದಿ ॥ (14)
ಪೆರರ ದೇಶಂಗಳಂ ನಿಜನಿಜವ್ಯಾಪಾರ ।
ಕಿರದೈದೆ ಬಹ ವಣಿಗ್ಜನಮಿದಂ ನಿಶ್ಚಿಸರು ।
ಪರಿಪರಿಯರತ್ನಧನ ಕನಕಪೌಷ್ಕಲಶ್ರೀಯಿಂದಿರ್ಪರುಂ ಭಯಗೊಂಬರು ॥
ತಿರುಗವು ವಿಷಾಣಯುತ ಷಾಷ್ಟಿಹಾಯನತುಂಗ ।
ಕರಿಗಳ್ವೀಥಿಯೊಳು ನಟಗಾಯಕಾದಿಗಳ್ ।
ಚರಿಸಲಮ್ಮರು ಮನೋತ್ಸವದಿಂದ ಲರೆನಿವಿಷಕರಸಿಲ್ಲದಿಹರಾಷ್ಟ್ರದಿ ॥ (15)
ಜಾತಿವರ್ಣಾಶ್ರಮಾಚಾರ ಧರ್ಮಂಗಳುಂ ।
ಜಾತವಾಗವು ನಿಖಿಲದೇವತಾರಾಧನೆಯು ।
ಪಾತಿಲ್ಲದಂತಿಹುದು ನಿಖಿಲ ಧರ್ಮಗಳುಳಿದ ಪರಿಯಲತಿಘೋರತರದಿ ॥
ಭೀತಿ ಸಂಭವಮಕ್ಕುಮಮಿತ ವಿಕ್ರಮಭಟ ।
ವ್ರಾತ ತಮ್ಮೊಳ್ತಾವೆ ಪಗೆಗೊಂಬರಂಭಯದಿ ।
ನೀತ ಮಪ್ಪಪ್ರಜೆಗಳತಿಖೇದ ಮುದ್ಭವಿಪುದರಸಿಲ್ಲದಿಹರಾಷ್ಟ್ರದಿ ॥ (16)
ಉದಕವಿಲ್ಲದ ನದಿಯು ತೃಣವಿಲ್ಲದಿಹ ಬನಂ ।
ಪದುಳಗೈದಪನಿಲ್ಲದಿಹ ಗೋವ್ರಜಂ ಮನೋ ।
ಭ್ಯುದಯಮಂ ತಿಳದು ಪಾಲಿಸುವಸತ್ರಿಯಿಲ್ಲದಿಹ ನಾರಿಯರ ಸಂದೋಹಮಂ ॥
ಅದುಭುತಮಿಥಃ ಕಲಹದಿಂದ ಮಾತ್ಸ್ಯಂ ನ್ಯಾಯ ।
ಪೊದವಿ ಮತ್ತೇನುಳಿಯದಂತಪ್ಪುದದರಿಂದ ।
ಅಧಿಕಪ್ರಾಪಿಯಾರಾಗಬೇಕ್ಕೆರಾಷ್ಟ್ರ ಸುಖವೆರ್ಚಲಿಚ್ಛೈಸೊಡೆ । (17)

ಬಲಪುಷ್ಟಿಯುತದೇಹಕಟ್ಟಿದ್ದಿಷ್ಟಗಳ ತೆರಂ ।
ನೆಲದಾಣ್ಮಸತ್ಯ ಧರ್ಮಪ್ರವರದಿಂ ರಾಷ್ಟ್ರ ।
ಪೊಲಿದು ಪೆರ್ಚುವಡರಿಗಳಂ ತರಿದುಲೋಕವಮಂ ಪರಿಪಾಲನಂಗೈವ್ರೊಡೆ ॥
ನೆಲಿನಾಕ್ಷಭೂತಿಯುಸ್ವಾಂತು ಪಿತವಮಾತೆಯುರ ।
ನಲಪಿಂದಲವರವ ವಿಧವರಿತು ಪೋಷಿಸುವ ।
ಬಲಿಯೊರ್ವನಾಗವೇಳ್ಕುದಗದೊಡೆಸಾಯಕಂ ರಾಷ್ಟ್ರವಿರ ಸಲ್ಲಸೊಲ್ಲ ॥ (18)

* ಸರಸಿಜಾಸನ ತನಯನೆಂದವಾಣಿಯು ಕೇಳ ।
ಹರುಷದಿಂದಾವಿಪ್ರರೆಲ್ಲ ಸಂತಸಗೊಂಡು ।
ಭರತನಂ ಬರಿಸೆನುತ ಸನ್ಮತದೊಳೊರೆಯಲ್ ವಸಿಷ್ಠಮಂತ್ರಿಗಳೆಲ್ಲರು ॥
ಕರೆದು ನೇಮಿಸಿದ ದಿನವಮೂರರೊಳಗೈದಿ ಬಂ ।
ಧುರದ ಜವದಿಂ ನೃಪಕುಮಾರಕರ ಮತ್ತುರಿಗೆ ।
ಕರತರುವುದೆನಲವಗ ಮೂತಿನಿಂದಂ ಗಮನಕೌಂಡೆರಂ ಕರದವರೊಲಿದು ॥ (25)
ಬರಲು ಪೋಗುವ ಚರರ ಕಂಡೆರುಂಧತಿಯುರಸ ।
ನೊರೆದವರೊಡನೆ ಮುಂದಪ್ಪ ಕಜ್ಜಸ್ಥಿತಿಯು ।
ತ್ವರಿತದಿಂ ನೀವೈದಿ ಕಟ್ಟಿದೀ ವಸ್ತ್ರಗಳನವರಿಗಂದೊಪ್ಪಿಸಿ ॥
ದೊರೆಯು ತತ್ತನಯರುಂ ಕುಶಲವಾರ್ತೆಯು ಕೇಳ ।
ದರು ವಸಿಷ್ಠರೆನುತ ಮೂದಲಿಸಿ ಭರತನೊಳ್ ।
ಪೊರೆವುದವಸರದಿಂದ ಬರಹೇಳದಂ ಮೌನಿಯೆನುತ ಸೂಚಿಪುದು ನಯದಿ ॥ (26)
ಅಡು ಜವದಿಂದ್ಯೋಟಕಗಳ ವಾರಣಾನಗರ ।
ದೆಡೆಯು ಗಂಗೆಯು ದಾಂಟಿ ಪ್ರಾಜ್ಮುಖದಿ ಪಾಂಚಾಲ ।
ವೊಡನೆ ಕುರುಜಾಂಗಲವ ನಖಿಲದೇಶಂಗಳಂ ನದನದಿಗಳಂ ನೋಡುತ ॥
ಕಡುಜವದಿ ಶರದಂಡವಂ ಕಳೆದು ನೈಕೂಲ ।
ಪೊಡವಿಧರನಿಭಪಿಹಿಪಿಯುಂ ಪೊಂದಿ ಗಮನದಿಂ ।
ನಡದರು ಕುಳಂಗಾದಿ ದೇಶಂಗಳಂ ಕಳೆದಿಕ್ಷುಮತಿಯುತಟವ ॥ (27)
ನೋಡುತಲಿ ಬಾಹ್ಲೀಕ ವಿಷ್ಣುಪದಶಾಲ್ಮಲಿಯು ।
ನೋಡುತಂಜಲಿ ಪಿನಯಯುತ ಬ್ರಾಹ್ಮಣೋತ್ತಮರ ।
ನೋಡುತಂ ದಿವ್ಯ ಪದ್ಮಾಕರ ಸರಸ್ಸುಗಳ ವಿವಿಧಪಲ್ವಲನದಿಗಳ ॥
ನೋಡುತಂ ಪಂಚಾಸ್ಯಶಾರ್ದೂಲ ಮೃಗಗಳಂ ।
ಕೂಡೆ ಜವದಿಂ ಬಂದು ಕಂಡರತಿಮೋದದಿಂ ।
ರೂಢಿಗಚ್ಚ ಗಿರಿವ್ರಜ ಮಹತ್ಪಟ್ಟಣವನಾಚರರ್ ಶ್ರಾಂತರೆನಿಸಿ ॥ (28)
ದೊರೆಯು ಹಿತ ಕುಲರಂಜನಾರ್ಹನಿಜಗೋತ್ರಕಂ ।
ದೊರೆಯುಲತಿಜಸವೆಂದು ಶಾರೀರಕಷ್ಟವಮಂ ।
ಮರೆದಿರುಳುಪಗಲೆನ್ನದತಿವೇಗದಿಂ ಬಂದು ಕಂಡು ಪುಟಭೇದನವನು ॥
ತರಣಿಯುದಿಸಲ್ ಪೋಗಿ ಕಂಡಪೆವು ಕಣ್ಗೆಟ್ಟ ।
ತುರಗಂಗಳಗೆ ಜಲಾಹಾರಮಂಗೈದಿಲ್ಲಿ ।
ಇರುಳಿರ್ಪೆವೆಂದು ಚರರಲ್ಲಲ್ಲಿ ತಾಂಗೈದಿಳಿಯಲುಂ ಭರತನಿತ್ತ ॥ (29)

* ಇಲ್ಲಿಂದ ಮುಂದೆ 7 ಪದ್ಯಗಳ ಗ್ರಂಥಭಾತವು ಕಂಡು ಬರುತ್ತದೆ.

ಪುತ್ರಯ್ಯವೊತ್ತುಳ್ಳರ ಲಾಲಸಾಹರ್ಷದಿಂ ।
ಮತ್ತೆ ಷಡ್ರಸಮೂಡಿ ಸುಖದಿ ಪವಡಿಸಲಾದು ।
ದತ್ಯಾಹಿತ್ರಮುಮೆನಿಪ ಸ್ವಪ್ನಸಂದರ್ಶನಮದೇನೆಂಬೆನದ್ಭುತವನು ॥
ಮತ್ತೆ ಭಯದೊಳ್ ನಿದ್ರೆಯಿಲ್ಲದತ್ರಿಮುಃಖದಿಂ ।
ಹೃತ್ತಾಪ ಮಿಗೆ ಗೊಳ್ಳೆದೆಚ್ಚತ್ತು ಮೂಡಗಡೆ ।
ಲೊತ್ತಿಗಂ ದಿನನಾಥ ಬರ್ಪನ್ನ ನಿಜಸಭೆಯನ್ಸೈದಿವಂ ಸಂತಃಪವೆ ॥ (30)

ಒಂದೆಡೆಯು ಪಾಡುವರ ಒಂದೆಡೆಯು ನೋಡುವರ ।
ದೊಂದೆಡೆಯಲಾಡುವರ ಸುಖಗೋಷ್ಠಿಯಂ ಮನಕೆ ।
ತಂದುಕೊಳ್ಳದಾರೊಡನೆ ಮಾತಾಡದತಿಖೇದವೌನದಿಂ ಭರತನಿರಲು ॥
ಬಂದು ನೇಹಿತರ್ಲ್ಲ ಬಗೆಬಗೆಯೊಳುಪಚರಿಸು ।
ತಿಂದಿದೇನ್ಸೈ ತಾತ ದೀನವಮಾನಸನಾಗಿ ।
ಕುಂದಿರ್ಪೆಯೆನಲವರೊಳೊರೆದ ನಿಜಸ್ವಪ್ನದೊಳ್ ಕಂಡವೃತ್ತಾಂತಗಳನು ॥ (31)

ತಲೆಗೆದರು ಶೈಲಾಗ್ರಮಡು ಕರದೊಳ್ ಪಿಡಿದು ।
ತಿಲಪಿಷ್ಟಮಂ ಮೆಲುತ ತೈಲಪಾನದಿ ತಾಪ ।
ನಿಲದೆಂದು ಧುಮ್ಮಿಕ್ಕಿಪಂ ಗೋಮಯಹ್ರದಕ್ಕಂದು ಕಂದಿದಾನನದಿ ಪಿತನು ॥
ಕಲುನೆಲಂ ಕಾಣ್ಬುಡುವ್ರೊಲೊಣಗಿದುವದಧಿಯು ಕಳಿದು ।
ನೆಲಕೆ ಬೀಳುವ ಶಶಿಯು ಕಳ್ತಲೆಯೊಳ್ಗಂ ಮುಳ್ಗೆ ।
ನೆಲಗಾದಿಹ ಘೋರತರವಾವಕನನೊಂದಕಂಡು ಭಯಗೊಂಡೆ ಮನದಿ ॥ (32)

ಒಡೆದಿರುವ ಭೂಮಿಯಂ ವಿವಿಧವೃಕ್ಷಂಗಳ್ಗಂ ।
ಸಿಡಿದು ಧರೆಗೊರಗುವವ ಪಟ್ಟದಾನೆಯು ದಂತ ।
ವ್ರಿದುಪೋಪ್ರದ ನೋಡಿ ತಲೆಗೆದು ಕೋಪದಿಂ ಕಾಷ್ಣಾರ್ಯಸದ ಪೀಠದಿ ॥
ಪೊಡವಿಪತಿಯಿರೆ ಕೃಷ್ಣರಕ್ತವರ್ಣಗಳಾಂತು ।
ಕಡುಗೋಪಿಗಳ್ ಕರೆಯುತಿರೆ ಖರಾನುಗತೇರ ।
ನಡರಿ ದಕ್ಷಿಣಕೆ ಗಮಿಸುವ ತಾತನಂ ಕಂಡೆ ಭಯಗೊಂಡೆನೆನ್ನ ಮನದಿ ॥ (33)

ಕೆದರಿರುವ ಕೆಂಗಣ್ಣ ಕೆಂಗೋರೆಮೀಸೆಗಳ ।
ಮದರಕ್ತಪಟಗಳಂ ಪೊದೆದು ಖಡ್ಗವಪಿಡಿದು ।
ಬೆದರಿಸುತ ನಾಲ್ದೆಸೆಯ ಘೋರರಕ್ಕಸನಿವಹ ಮುತ್ತಿರಲ್ ಕಂಡು ಭಯದಿ ॥
ಹದನರಿಯದತಿಚಿಂತೆಯಾಂತಿರ್ಪ ಪಿತನಿಗ ।
ಭ್ಯುದಯಮಂ ತಿಹದೊ ರಾಮನಿಗೆ ಸುಕ್ಷೇಮಪದ ।
ವೊದಗುವ್ರೊಡೆಂತೆನುತ ನಡುಗುತಿಹೆನೆನಲಾಗ ನೇಹಿತರ್ ಕೇಳಿ ಭಯದೆ ॥ (34)

ತಮ್ಮೊಳಾಲೋಚಿಸುತ್ತಿರಲಿತ್ತ ದೂತರತಿ ।
ಗಮ್ಯನೈತಂದು ನಗರವ ಪೊಕ್ಕುಸಲಿಗೆಯಿಂ ।
ದೊಮ್ಮನದಿ ಬಂದು ಚರಣಂಗಳಂಗಭಿನಮಿಸಿ ಕರಗಳಂ ಮುಗಿದು ನಿಂದು ॥
ನಿಮ್ಮಕುಶಲಂಗಳಂ ಬೆಸಗೊಂಡು ಮುನಿರಾಯು ।
ಸುಮ್ಮಾನದಿಂದ ಮಾವಂದಿರಪ್ಪಣೆಯಿಂದ ।
ಲೆಮ್ಮ ಪತ್ರಕೆ ಜವದಿಂ ಬಪ್ಪುದಕೆಗೈವೇಳ್ಕಂದು ನೇಮಿಸಿದರು ॥ (35)

ಇವೆ ಭೂಷಣಂಗಳಿಂತಿವು ವಸ್ತ್ರಸಂದೋಹ ।
ವಿವೆ ಸುವರ್ಣಾದಿನಾನಾವಸ್ತುಸಂಚಯಗ ।
ಳವನೊಪ್ಪಗೊಂಡು ಮಾತುಳರಿಗೊಪ್ಪಿಸವೇಳ್ಕುಮೆಂದು ಬಿನ್ನವಿಸಲಾಗ ॥
ಅವರ ಮೃದುವಚನಗಳ ಕೇಳುತ್ತ ಭರತ ತ ।
ನ್ನವರ ಕುಶಲಾಮೋದಗಳ ಬೆಸಗೊಂಬೆನೆನು ।
ತವಿರಳದ ಹರ್ಷದಿಂ ದೂತರನ್ನುಪಚರಿಸಿ ಕೇಳದಂ ಪ್ರೀತಿಯಿಂದೆ ॥ (36)

ಕುಶಲವೆ ಮಹಾರಾಜ ಶ್ರೀರಾಮಸಂತೋಷ ।
ವಿಶದವಾಗಿರ್ಪನೇ ಲಕ್ಷ್ಮಣ ಮಹಾವೀರ ।
ನೆಸೆವನೇ ಸುಕ್ಷೇಮದಿಂದ ಸ್ತ್ರೀಕುಲರನ್ನೆ ಕೌಸಲ್ಯೆಯುಂ ಹರ್ಷಳೆ ॥
ಶಶಿಮುಖಿಸುಮಿತ್ರೆ ಸಂತೋಷಿಯೇ ದುಶ್ಶಾಸ್ತ್ರ ।
ವಶತೆಯಿಂ ಪ್ರಾಜ್ಞಮಾನಿನಿ ಕ್ರೂರೆ ಯಾಂದ ।
ವಶವಾಗದಿಹ ಚಂಡಿ ಮನ್ಮಾತೆ ಸುಖಿಯೆ ಮತ್ತೇನನುಂ ಪೇಳ್ದಳೆಮಗೆ ॥ (37)

ಎಂದು ಮೊದಲಿಸೆ ನೃಪನಂದನಗೆ ಹರ್ಷದಿಂ ।
ದೆಂದರಾದೂತರ್ ನಿಮ್ಮಯ ಕೃಪಾರಸದಿಂದ ।
ಬಂಧುಗಳ್ ಸುಕ್ಷೇಮದಿಂದಿಹರು ಕುಂದಿಲ್ಲದಖಿಲ ಸಾಮ್ರಾಜ್ಯಸುಖವು ॥
ಬಂದಿರ್ಪಿರ ನೋಡುತಿದೆ ಬೇಗದಿಂ ಗಮಿಸವೇ ।
ಳ್ಕೆಂದು ಚರರರಿಪೆ ಜವದಿಂದೆದ್ದು ಭರತ ।
ನೈತಂದು ಮುತ್ತಯ್ಯನಿಗೆ ಮಾಜದೆಳ್ಳನಿತನುಂ ಬಿತ್ತರಿಸಿದಂ ನಯದೊಳು ॥ (38)

ಪಿತನ ಚರಣಂಗಳಂ ನೋಳ್ಪ ಕೌತುಕವೆನ್ನ ।
ಮತಿಯನಂಟಿರ್ಪುದನಿತರೊಳಾ ಮಹಾರಾಜ ।
ನತಿಶಯಪ್ರೇಮದಿಂ ದೂತರಂ ಕಳುಹಿರ್ಪ ದರುದಿಂದ ಬರಿಸಲೆನ್ನಂ ॥
ಪ್ರತಿದಿನಂ ಸ್ಮರಿಸಿವಂತೈತಂದು ಚರಣಾಸಂ ।
ಗತನೆನಿಪೆನೆಂದು ವಿಜ್ಞಾಪಿಸಿದ ಕಾಶಲದ ।
ಗತ್ರಿಯ ನಿಟ್ಟಸುತ ಪರಮಾನಂದದಿಂ ಮೊಮ್ಮನಪ್ಪಿದಂ ಪ್ರಿಯದಿಂದಲಿ ॥ (39)

ಭರತನೀಪರಿಯ ಬಿನ್ನವಿಸೆ ಕೈ(ಮಾ) ? ತಾಮಹಂ ।
ಪರಮಸಂಭ್ರಮದಿಂದ ತಾತನೆಡೆಗೈದಿ ಸಂ ।
ಭರಿತಸಂತಸದೊಳೈತಪ್ಪದೆಂದೆನುತಲುಂ ಪರಸಿ ಬೀಳ್ಕೊಟ್ಟು ಬಳಿಕ ॥
ದೊರೆಯುರಘುವೀರ ಲಕ್ಷ್ಮಣನ ಕೌಸಲ್ಯೆಯುಂ ।
ತರುಣಿಮಣಿ ಸೌಮಿತ್ರೆ ಕೈಕಾಮುಖಾದ್ಯರಂ ।
ಪರಮಹರ್ಷಂಗಳಂ ಕೇಳ್ದರೆಂದವರವರೊಳರಿಪು ಸೌಖ್ಯದೊಳೆಂದವನು ॥ (40)

ಎನುತೊರೆದು ಭದ್ರಗಜದಿವ್ಯಾಶ್ವಮುಖ್ಯಖರ ।
ಘನರಥೋತ್ತಮ ಚಿತ್ರಕಂಬಳಾ ಜನಗಳಂ ।
ಬಿನದಮೆನೆ ಕನಕಧನ ಭೂಷಣಾಂಶುಕಗಳಂ ಮನಮೊಲಿದೊಲಿತ್ತು ಬಳಿಕ ॥
ಮನೆಯೊತ್ತಿಲನುದಿನಂ ಕಾಯ್ದಿರ್ದ ಸಿಂಹಬಲ ।
ದನುಕರಣೆಯಾಂತ ಸಿತದಾಂಷ್ಟ್ರ ಸಂಕಲಿತವಹ ।
ಶುನಿಗಳಂ ಕೊಟ್ಟುಪಾಯನಧಿ ಸಂಭ್ರಮದಿಂದ ಬೀಳ್ಕೊಟ್ಟಹಯಸಾಥನು ॥ (41)

ಮುತ್ತಯ್ಯ ನಪ್ಪಣೆಯನಾಂತು ಶುದ್ಧಾಂತಕಂ ।
ಮತ್ತರಿಪಿ ಮಾತೆಯಂ ಪೆತ್ತಾತೆಗಭಿನಮಿಸು ।
ತುತ್ತಮಾಶಿಷಮಾಂತು ಬೀಳ್ಕೊಂಡು ಮಾತುಳಯುಧಾಜಿತಂಗಭಿನಮಿಸುತೆ ॥
ಮತ್ತರಮನೆಯೊಳುಳ್ಳದ ಪ್ರಿಯಬಂಧುಗಳನುಮತ್ರಿ ।
ಸುತ್ತ ವಾಣಿಯನು ಬೆಸಗೊಳುತಲುಂ ಬೇಗದಿ ರ ।
ಥೋತ್ತಮಂ ಪೊರಮಟ್ಟು ಪೊಂದೇರನಡರಿದಂ ಶತ್ರುಘ್ನಸಹಿತಪ್ರೀಯದಿ ॥ (42)
ಭರತನಿಜರಥವೇರೆ ವೈಗಾಹಿಗಂದಿತ್ತ ।
ಕರಿತುರಗಕಾಲಾಳು ಮುಖ್ಯಚತುರಂಗ ಬಂ ।
ಧುರದಲೆಡಬಲದಲ್ಲಿ ಕಾಯ್ದು ಬರ್ಪಂದದಿ ಬಲಾಧ್ಯಕ್ಷಮಂತ್ರಿಜನರು ॥
ಸರಭಸದೊಳೊರೆವುತ್ತೈತರೆ ಪಟ್ಟಣವನುಳಿದು ।
ತ್ವರಿತದಿಂ ಪ್ರಾಙ್ಮುಖಕ್ಕೈದಿ ಸಂತಸದಿಂದ ।
ತರಿಸಿದ ಸುದಾಮಹ್ಲಾದಿನಿದೂರಪಾರಮಂ ಮಗುಳ್ ಪ್ರತ್ಯಕ್ಸ್ರೋತಮಂ ॥ (43)
ಕಳೆದಂ ಶತಮ್ರುವೇಳಾದಾನ ಪರ್ಪಟಗ ।
ಳುಳಯದಂದದಿ ಶಿಲಾನದಿಮುಖ್ಯಗಳ ದಾಂಟಿ ।
ಗೆಲವಿಂ ಮಹಾಶೈಲ ಚೈತ್ರರಥವನ್ನುಳಿದು ಗಂಗಾಸರಸ್ವತಿಗಳ ॥
ಪೊಲಬಂಟುತ್ತುತ್ತರದ ವೀರಮತ್ಸ್ಯಾದಿಗಳ ।
ಚೆಲುವಭಾರುಂಡವನ ಮೆನಿಸಿಯೆಕುಳಂಗಾಖ್ಯ ।
ಕಲಿತಹ್ಲಾದಿನೀ ಶೈಲಯುತಮಾದ ಕಾಳಂದಿಯೆಡೆಗೈತಂದನು ॥ (44)
ಬಳಲಿದಶ್ವಂಗಳಂ ಪೈದೊಳದು ನೀರ್ಗುಡಿಸಿ ।
ಕೊಳದುದಕಮಂ ಸಕಲರಾಸಮಯದೊಳ್ ಮಹಾ ।
ಬಲ ಭರತ ಸ್ನಾನಾಹ್ನಿಕಂಗಳಂ ತಾಂ ಗೈದು ದುಷ್ಪ್ರತರನದಿಯ ದಾಂಟಿ ॥
ಕಳೆವೆತ್ತದೇಶಂಗಳಖಿಳ ನದನದಿಗಳಂ ।
ಕಳೆದು ಶರಣೆಗಜತುರಗಂಗಳಾ ಮಹಾ !
ಜಲಗಳನ್ನತಿವೇಗವಿಳಸಿ ಗೋಮತಿಯೆಡೆಯ ಸಾಲವನಕೈತಂದನು ॥ (45)
ತ್ವರಿತದಿಂ ದೇಳುದಿನವೀಪರಿಯಲರೆನಿಮಿಷ ।
ಮಿರದಯೋಧ್ಯಾದೇಶಕೈತಂದು ಭರತನತ್ತ ।
ಕರುಣದಿಂ ನಿಜಬಲವ ನಿಟ್ಟಿಸುತ ಬಳಲಿತೆಂದರಿತು ಮನದಲ್ಲಿ ನಂದದಿ ॥
ಪರಿಪರಿಯ ಸಾಂತ್ವಸಂಗೈದು ಸಾರಥಿಯೊಡನೆ ।
ಕರುಣದಿಂದಿಂತೆಂದ ಮತ್ಪುರಿಯ ಕಂಗಳಗೆ ।
ಪರಮಸಂಭ್ರಮದಿಂದ ಕಾಣ್ಬುದುತ್ತಲಿದೆ ನೋಡು ಮಾಡು ವಂದನೆಯನೆನುತ ॥
ಬನದಿ ಸಂಕ್ರೀಡಿಸುವ ಜನರಾಜಪಾಜಿಗಳ । [(46)
ಜಿನದಮುಂ ತೋರುತಿಹ ರಮಿತವೇದಾಧ್ಯಯನ ।
ಮುನಿಗಳುಂ ಪಿರಿಯರುಂ ಸಂದಣಿಸುತೆಂದಿಗುಂ ತೋರ್ಪರೀನಗರದೆಡೆಯ ॥
ಇನಿಸುಜನಸಂಬಾಧಮೆಲ್ಲಿ ಪೋದುದೊ ನೋಡೆ ।
ಕನಸಾಯಿತಿದು ಚಿತ್ರತರಮೆಂದು ಸೂತನಂ ।
ಜನನಾಥತನಯ ಕೇಳುತ ಕಂದಿದಾನನದಿ ಕನಲಿದಂ ಬಿಸುಸುಯ್ಯುತ ॥ (47)

ನೀರಾಟಕೆಳಸಿ ಜವ್ವನಿಗರುಂ ಪೊಕ್ಕು ಪೊಸ ।
ನಾರಿಯರೊಡವೆರೆದು ನಡೆತಂದು ನಗುವ ಕಾ ।
ಸಾರತೀರವನಲಂಕೃತಗೈವರೆಂದಿಗುಂ ತೂರ್ಯಮಂಗಲಕರವವು ॥
ಹೇರಾಳದಿಂದ ಪತ್ತನದಿ ಕೇಳ್ವಡುತಿರ್ಪ ।
ದೋರಂತೆ ದೂರದೊಳ್ ಬರುವ ಮದಮಾತಂಗ ।
ವಾರುವಗಳಾಟ ಕಣ್ಗೆಸೆವುದಿಲ್ಲಿಲೆ ಸೂತ ತೋರುತಿದೆ ಭೀತಿ ಮನಕೆ ॥ (48)

ತರುಗಳಾವಾವೆಡೆಯು ಪೂತುಕಾತುಂಪಕ್ಕೆ ।
ನೆರವಿಗಳ ಸಂತೈಪವೀಸಮಯದೊಳ್ ನಿರಾ ।
ವರಣ ನಿಷ್ಪತ್ರ ನಿಷ್ಕೂಜಿತ ಪತತ್ರಿಗಣವಾಗಿ ತೋರುತಲಿರ್ದಪವು ॥
ಪರಿಮಳವಬೀರ್ವ ಕಂಬೆಲರಾಟ ಶುಕಪಿಕಂ ।
ಬರುಹಿಗಳ್ ಕಾದಂಬಸಂಚಾರ ತೋರದಿಹ ।
ಪರಿಯದೇನದ್ಭುತಮೆನುತ್ತ ಚಿಂತಿಸುತಾಗ ಸೂತನಂ ಕೇಳ್ದನೊಲಿದು ॥ (49)

ಎನುತ ಚಿಂತಾಕ್ರಾಂತನಾಗಿ ಭರತಂ ತನ್ನ ।
ಮನದೊಳಂ ಶಂಕಿಸುತ ಸೂತನಂ ಕೇಳುತ್ತ ।
ಕನಲುತಂ ಮೆಲ್ಲನೈತಂದು ನಗರದ್ವಾರಗಳ ಕಳಿದು ಕಳಿದು ಬಳಿಕ ॥
ವಿನಮಿತಾನನದಿಂದಲೆರಗುವರ ಮನ್ನಿಸುತ ।
ಲನುವಿಂದ ನಾಲ್ದೆಸೆಯು ನಿಟ್ಟಿಸಲ್ ನಗರ ನಿ ।
ರ್ಜನಮೆನಿಸಿ ತೋರುತಿರಲತುಳಸಂಕಟಗೊಳುತಲೈತಂದ ನೃಪಗೇಹಕೆ ॥ (50)

ಕಮನೀಯವಾಗಿ ಕಂಗೊಳಸದಿರಲರಮನೆಯು ।
ವಿಮನಸ್ಕನಾಗಿ ಭರತಂ ಪೊಕ್ಕು ನೋಡುತ್ತ ।
ಕ್ರಮದಿಂದಲೊಳಪೊಕ್ಕು ಪಿತನಿರ್ಪ ತಾಣಮಂ ನೋಡಿ ಕಾಣದೆ ಮರುಗುತ ॥
ಭ್ರಮೆಗೊಂಡನಂತೆ ನಿಜಮಾತೆಯುಂ ನಿಟ್ಟಿಸುತ ।
ಮಮತೆಗೈಯಲ್ ತನಯನಂ ಕಂಡು ಹಿಗ್ಗುತ್ತ ।
ಲಮರ್ದಪ್ಪಿ ಶಿರವನಾಘ್ರಾಣಿಸಿದಳತ್ಯಂತಪುತ್ರವಾತ್ಸಲ್ಯದಿಂದೆ ॥ (51)

ಪಿಡಿದೆತ್ತಿ ತನಯನಂ ಪ್ರೇಮದಿಂದಂ ತನ್ನ ।
ತೊಡೆಯಲ್ಲಿ ಕುಳ್ಳಿರಿಸಿ ಕ್ಷೇಮವಾರ್ತೆಯ ಕೇಳ ।
ನಡೆಯಿಂದ ಧಾವಂತವಾಯಿತು ಪೊರಟೇಸುದಿನಮಲ್ಲಿರ್ಪ ಬಂಧುಜನವು ॥
ಪೊಡವೀಶಮುಖ್ಯರತಿ ಕುಶಲರೇ ಪೇಳೆನ್ನು ।
ತಡಿಗಡಿಗೆ ಬೆಸಗೊಂಬ ಮಾತೆಯನ್ನೋಡಿ ತ ।
ನ್ನೊಡೆಯ ಶ್ರೀರಾಮ ಪುರದರಸನಂ ಧ್ಯಾನಿಸುತ ಮಾತಿಗುತ್ತರವಿತ್ತನು ॥ (52)

(ಸಂಧಿ 24 ಪದ 1063)

---

## ಇಪ್ಪತ್ತೈದನೆಯ ಸಂಧಿ.

ಸೂಚನೆ ॥ ಮಾತೆಯರಂ ಧಿಕ್ಕರಿಸಿ ಮಗುಳೆ ಬಳಲುವ ಭರತ ।
ತಾತನ್ಯಕ್ತಿಯ ಕಂಡು ಬಂದಾವಸಿಷ್ಠಮುನಿವೃದು ।
ಖ್ಯಾತಿಕಯವಾಣಿಯಿಂ ಸಂತೈಸಿ ರಾಮನಂ ಕಾಣ್ಬೊಡಂ ಜ್ಜುಗಗೈದನು ॥

ನಗೆನುಡಿಗಳಂ ಮಾತೆ ಕುಶಲಪ್ರಶ್ನೆಗಳೆಸಗ ।
ಲಗಣಿತ ಮನೋಹರ್ಷಮಂ ಕಂಡು ಭರತ ನಿಜ ।
ಬಗೆಯೆಲ್ಲಮಂ ಸವಿಸ್ತರವಾಗಿ ಬೇಳುತಂ ಮತ್ತೆ ಬೆಸಗೊಂಡನೊಲಿದು ॥
ಜಗದರ ಸನಾವಾಗ ಭವದೀಯ ಮಂದಿರವ ।
ನಗಲದನುದಿನಮಿರ್ಪ ನಿಂದಿದೇನಚ್ಚರಿಯ ।
ಮಗುಳಾರ ಗೃಹದೊಳಿಹನೊರೆಯಲಭವಂದನೆಂಗೈಮ ಬಹೆನತಿಮೋದದಿ ॥ (1)

ಎನುತವಿಾ ಪರಿಯ ಬೆಸಗೊಂಡ ಕುವರನ ನೋಡು ।
ತನುವಿಂದ ನೇಹಸಾರ್ತೆಯನೊರೆದು ಸಂತೈಸ ।
ಲನುಗೈದಳೇನೆಂಬೆ ನಪ್ರಿಯವಹಿತಮೆನುತ ಭಾವಿಸಿದ ದುರುಳಪರಿಯ ॥
ಇನವಂಶಭೂಷಣ ಮಹಾರಾಜ ಯಜನಾಂತ ।
ಮೆನಿಪಕೃತ್ಯಧಿನಾಥ ಯಾಯಜೂಕ ಮಹಾತ್ಮ ।
ಜನಕನೈದಿದ ರಾಜ್ಯಲೋಭದಿಂದಮರೇಶನರ್ಧಾಸನವ ಬಯಸಿ ॥ (2)

ಎಂದ ಪ್ರೀತಿಯ ನುಡಿಯ ನಾಲಿಸುತ ಭರತ ಹಾ ।
ಯೆಂದು ವಿಸ್ಮಿತನಾಗಿ ನಡುಗಿ ಭುವಿಯೊಳ್ ಕೆಡೆದು ।
ಕಂದಿದಾನನದಿಂದೆ ಬಹುಪ್ರಳಾಪಂಗೈದ ಕಲ್ಮರಂ ಕರಗುವಂತೆ ॥
ಚೆಂದಿರನ ಬಿಟ್ಟು ಬಾನೆಡೆ ಬಹೂವಕರಭಸ ।
ದಿಂದ ಕಂಗೊಳಿಸದಿಹ ಸರಧಿ ನೃಪನುಳ್ಳದಿರ್ಪ ।
ಮಂದಿರಂ ಗೊರವಮಂದಿರವಾಗಿ ತೋರಿಮುದೆನುತ್ತ ಪಲುಬಿದನು ಮರುಗಿ ॥ (3)

ಸುರಿ ದಶ್ರುಧಾರೆಯಿಂ ಧರಣಿ ಪಂಕಿಲಮಾಗ ।
ಲುರುತರದ ದುಃಖದಿಂದೊರಲಿ ಪೊರಳುತ್ತಲಿಹ ।
ಭರತನಂದವಿ ಸುಮಿತ್ರಾನಂದನಂ ಘೋರತರದುಃಖವಾಂತಿರಲ್ಕೆ ॥
ಅರಿಯದವರೀಪರಿಯಳಲುವಂದದಿ ದೀನ ।
ತರವಾಗಿ ಶೋಕಿಸಲದೇಂ ಫಲಂ ಪುತ್ರಮುಂ ।
ದರಿದು ಕುಳ್ಳಿರ್ದೆನ್ನನಿಟ್ಟಿಪುದೆನಲ್ ಮಾತೆಯೊಡನಾತನಿಂತೆಂದನು ॥ (4)

ಯುವರಾಜಪಟ್ಟಮಂ ರಾಮಚಂದ್ರಂಗಿತ್ತು ।
ವಿವಿಧಭೋಗಂಗಳಂದರಸನಿಹನೆಂದರಿತು ।
ಭುವಿಯರೆಯ ನಪ್ಪಣೆಯೊಳಾನು ಮಾತುಳನಗರಕ್ಕೈದಿದೆಂ ಮೋದದಿಂದ ॥
ಅವಿರಳದ ಗಮನದಿಂ ಚಾರರೆನ್ನಂ ಕರೆದ ।
ವಿವಿಧೋಪಚಾರನುಡಿಯಿಂದೆನ್ನ ಮಾನಸಂ ।
ನವಮಕ್ಲೇಶಮನಾಂತು ದಿಗಿಲಾಂತು ಚಿಂತಿಸುತಲೈತಂದೆ ತವಕದಿಂದ ॥ (5)

ಪಿತನಡಿಗಳಂ ಕಾಣದತುಳಕ್ಲೇಶವನ್ನಾಂತೆ ।
ಗತಿಯದಾರೆನಗೆಂದು ಪೇಳ್ವೈದಿದಂತಾತ ।
ಕ್ಷಿತಿಪುರರಸಮುಕುಟ ಮಣಿಗಣರಾಜಿತಾಂಘ್ರಿಯುಗದೇವ ಸಚ್ಚ್ನತಸಂಯುಗ ॥
ಪಿತಮಾತೆಯೊಡೆಯ ಬಾಂಧವಮರ್ತ್ಯಲೋಕ ದು ।
ರ್ಗತಿಯನಪಹರಿಪನಣ್ಣಂ ರಾಮ ಗುಣಧಾಮ ।
ಗತಿಯದೆನಗೆಲ್ಲಿರ್ಪನಾತನಂ ತೋರಿದೊಡೆ ಬೀಳ್ವೆ ಚರಣಂಗಳೆಡೆಯ ॥ (6)

ಮೃದುದಾಂತ ಶಾಂತಸತ್ಯವ್ರತದಯಾಶೀಲ ।
ಹೃದಯನೆನ್ನಂ ಪಿಡಿದು ದುಃಖಮಂ ಪರಿಹರಿಸಿ ।
ಮೊದಲಂತೆ ಹರುಷಗೊಳಿಸುವನಣ್ಣನಾತಗಂ ತೋರದಿಹುದೇಂ ಕಾರಣಂ ।
ಸದಯಪಿತ ಪಶ್ಚಿಮಾವಸ್ಥೆಯನ್ನಾಳ್ವೆಡೆಯ ।
ಲೆದೆಯೊಳಿರ್ದುದನದೇನ ಪೇಳ್ದುದೆನುತಳುತಿರಲ್ ।
ಸುದತಿ ಕೈಗಾವಿತ್ತಂಬಿಪ ಕುವರನೊಡೆಬಡಿಗಲಿಂತೆಂದಳನುವಿನಯದಿ ॥ (7)

ರೋಗರುಜೆಯಡಸಿ ನಿನ್ನಯ ತಂದೆ ದೇಹಮಂ ।
ನೀಗಲಿಲ್ಲಾ ರಾಮಲಕ್ಷ್ಮಣಧರಾಜಾತೆ ರಾಘವ ।
ರಘೂತ್ತಮ ಎನುತ್ತ ಹಂಬಲಿಸುತ್ತಂ ಹಮ್ಮೈಸಿ ಕಳೆವನಸುವ ॥
ಮೇಗೊಂಡಸೊರೆದ ನರನಾಥ ಶ್ರೀರಾಘವನ ।
ಶ್ರೀ ಗೌರಮುಖದಲಕ್ಷ್ಮಣನ ಸಲ್ಲಕ್ಷಣನ ।
ಪೂಗಕಂಠಿಯ ಸೀತೆಯುಂ ಕಾಣ್ಬರುಳ್ಳದರ್ ಧನ್ಯರಗ್ಗಳರೆನ್ನುತ ॥ (8)

ಮೊದಲೊರೆವ ವಾಣಿಗಿಂತತಿಶಯದಿ ರಾಘವನ ।
ಹೃದಯಮಂ ಭೇದಿಸಲ್ ಭಯಗೊಂಡು ತಾಯ ಸಿರಿ ।
ವದನಮಂ ನಿಟ್ಟಿಸುತಲತಿದೈನ್ಯದಿಂ ಭರತ ಬೆಸಗೊಂಡ ವೇಗದಿಂದ ॥
ಪದುಮಾಕ್ಷ ರಾಮನೆಲ್ಲಿರ್ಪ ಲಕ್ಷ್ಮಣನೆಲ್ಲಿ ।
ಸುದತಿ ಜಾನಕಿ ಯಾವ ತಾಣದೊಳಗಿರ್ಪಳದ ।
ಮುದದಿಂದ ಪೇಳ್ದಳದ ಪೇಳ್ಕೆನಲಾ ಮಾತಿಗುತ್ತರವನಿತ್ತಳೊಲಿದು ॥ (9)

ಕೆಲಕಾಲ ವಿಪಿನದೊಳಗಿರ್ದು ಬರಲಿಚ್ಛೈಸಿ ।
ಕಲಿಸುಮಿತ್ರಾತ್ರನಯ ವೈದೇಹಿಸಹಿತಲುಂ ।
ಗೆಲಪಿಂದ ದಂಡಕಾವನಕೆ ಗಮಿಸಿದ ರಾಮನೆನೆ ಕೇಳ್ದು ಸಂತಾಪದಿ ॥
ಕುಲಪತಿಯದೇನು ಬ್ರಹ್ಮಸ್ವಮಂ ಸೆಳಕೊಂಡು ।
ಕಲಿತದೀನರ ಹಿಂಸೆಗೊಳಿಸಿ ಪರಸತಿಯಾತ ।
ನೆನ್ನಲಿಸಲೆಳಸಿದನೇನು ಕಾರಣಕೆ ಪುರಮುಳಿವನೆನಲಾಕೆ ನಗುತೆಂದಳು । (10)

ಪೊರದರ ಧನಧಾನ್ಯ ಪರರಸತಿಯರ ಬಯಕೆ ।
ಭೂರಿಹಿಂಸಾಕೃತ್ಯ ರಾಮನೊಳದೆಂದಿಗುಂ ।
ತೋರಬಲ್ಲುದೆ ತನಯ ಗಮನಕಾರಣಮಾದುದೆನ್ನ ಯಾಚನೆಯೆ ಬಳಿಕ ॥
ಧಾರುಣೀಶ್ವರ ಯೌವರಾಜ್ಯಪಟ್ಟವ ಕಟ್ಟಿ ।
ಲೋರಂತೆ ಯೋಚಿಸಲ್ ತಾಂ ಕೇಳ್ದು ಕೋಪದಿಂ ।
ಪೂರ್ವದ ವರಮೆರಡ ನೆನೆದು ಧರಣೀಶನಂ ಬೇಡಿದುದನುಂ ಪೇಳ್ವೆನು ॥ (11)

ರಾಮನಂ ಬನಕಟ್ಟಿ ರಾಜ್ಯಮಂ ಭರತಂಗೆ।
ನೇಮಿಸುವುದೆನಲರಸ ಧರ್ಮಮಂ ಮೀರಿದರೆ।
ಕೋಮಲತೆಯಿಂದಲಾಪರಿಗೈದ ಬಳಿಕ ನಿಜತನಯನಂ ನೆನದು ನೆನದು॥
ತಾಮಸದಿ ಪಂಚತ್ವ ಪೊಂದಿದಂ ನೆಲಕೆ ಸು।
ತ್ರಾಮನೆಂದದ ರಾಜ ಧರ್ಮಮನ್ನನುಕರಿಸು।
ಪ್ರೇಮದಿಂ ನಿನಗೋಸುಗಂ ಗೈದೆನೀಪರಿಯ ತಿಳಿದು ಹರ್ಷಿಸುವುದೆನುತ॥ (12)
ಅಮಿತರಯಾಗಾದಿಗಳನೆಸಗಿದ ದಿಳೀಪಾದಿ।
ವಿಮಲ ರಾಜರ್ಷಿಗಳದಾವ ಗತಿಗೈದಿದನು।
ಕ್ರಮದಿಂಗಲರಸ ಸದ್ಗತಿಯ ಪೊಂದಿದನಾತಗಪ್ಪ ಕೃತ್ಯಗಳ ರಚಿಸಿ॥
ಸುಮನಸರ್ ಸಂತಸಂಗೊಳ್ಳುವಂತೆ ದೊರೆಯಾಗಿ।
ಪ್ರಮುದಗೊಳಸೆನ್ನ ಸಂಪಾದಿತಸ್ವರಾಜ್ಯಸಂ।
ಭ್ರಮವನನುಭವಿಸೆಂದು ಪೇಳ್ದ ಮಾತೆಯ ನೋಡಿ ನುಡಿದ ಕಿನಿಸಿಂದ ಬಳಿಕ॥ (13)
ಖರತರವ್ರಣಕೆ ಕಟುಕ್ಷಾರಮಂ ಲೇಪಿಸಿದ।
ತೆರನಂತೆ ದುಃಖಕತಿಶಯದುಃಖ ಸಂಪ್ರಾಪ್ತಿ।
ಭರಣಿಯಾಯಿತಣ್ಣ ನಿಲ್ಲದ ಬಳಿಕ ಮಹಾರಾಜ್ಯದತಿಶಯದ ಭೋಗಂಗಳು॥
ಬರುವುದೆಂತೆನಗನಾಥಗೆ ವಂಶಸಂಹಾರ।
ಕರಕೃತ್ಯಮನ್ನೆಸಹೆ ಪಾಪಿ ಮೃತ್ಯುವೆನುತ್ತ।
ಲರಿಯುವಯ್ಯಂ ನಚ್ಚಿ ಕಿಚ್ಚಿಗೀಡಾದ ಕುಲಗೆಡುಕಿದುರ್ಬೋಧೆಯಿಂದ॥ (14)
ಕುಲವ ನುಂಗುವ ಕಾಳರಾತ್ರಿಯಂ ಸತಿಯೆನ್ನು।
ತೊಲಿದೆನ್ನ ಪಿತ ಸುರಪಲೋಕಸಂಗತನಾದ।
ಪಲವು ಶೋಕಾಸ್ಪದಮದಾಯಿತು ಸತ್ಯವ್ರತಗೆ ಪಿತಗೆ ದುರ್ಯಶಮಾಡಗಿತು॥
ಲಲನೆ ಕೌಸಲ್ಯೆ ಲಕ್ಷ್ಮಣಮಾತೆಯನೆನ್ನೀಡಿ।
ನಿಲಿಪರೆಂತಸುಗಳಂ ದುರ್ವೃತ್ತೆ ಪಾಪಕೃತೆ।
ಯುಲಿವೆ ನಾಲ್ವರೊಳೆಂತು ರಾಮನಂ ಕಾನನಕೆ ಕಳುವೆಂದು ನಿಷ್ಕರುಣದೆ॥ (15)
ನೆನೆದನರ್ಥವ ರಾಜ್ಯಮಂ ಬಯಸಿ ದುರ್ವೃತ್ತಿ।
ಯನುಕರಣೆಗೈದೆ ಮತ್ತೀ ನೆಲದೊಳರೆ ಕಾಯ್ವ।
ರೆನಗಾರು ಬಲಗಳುಂ ಬೆಂಬಲವನುಳದಾನು ಧರಿಸಬಲ್ಲೆನೆ ಭರವನು॥
ಇನತಾತ ಪೂಜ್ಯಬಲಿ ಸತ್ಯಧರ್ಮಾಚಾರ।
ವೆನೆಪರಿಯನಣ್ಣನಾತನೆ ರಾಜ್ಯಲಕ್ಷ್ಮಿಯಂ।
ಮನವೊಲಿದು ಪಾಲಿಸೆ ಸಮರ್ಥನಲ್ಲದೆ ಮಿಕ್ಕ ಜನರಿಂದಲುಂ ತೀರ್ವುದೆ॥ (16)
ಪಿರಿಯರುಂ ಸತ್ಪರಂಪರೆಯರಸುಗಳ್ ತಮ್ಮ।
ಚರಿತೆಯಂ ಮೀರದಣ್ಣಂದಿರೊಳಗಗೈದು।
ವರಧರ್ಮಕೀರ್ತಿಗಳ ಗಳಸಿ ಧರ್ಮಾತ್ಮವರಕುಲದಲುದ್ಭವಿಸಿ ಕ್ರೂರಾ॥
ನರಕಭಾಜನನಹೆನೆ ಕುಲಗೆಡುಕಿ ನಿನ್ನಿಂದ।
ವಿರಚಿತವಹ ಕೃತ್ಯ ಕಾಂ ಪೋಗಿ ರಾಘವನಂಘ್ರಿ।
ಗೆರಗಿ ರಾಜ್ಯವನೊಪ್ಪಗೊಳಿಸಿ ಚರನಾಗಿರ್ಪೆನೆನುತ ಕಿನಿಸಿಂದೊರೆದನು॥ (17)

ನೆನೆನೆನೆದು ಕೋಪಶಿಖಿ ಪೆರ್ಚುತ್ತಿರಲಾಗ ।
ಜನನಿಯಂ ನಿಟ್ಟಿಸುತಲುಚ್ಚಾವಚಂಗಳಂ ।
ಘನತರದ ರೋಷದಿಂದಾಡುತಖಿತಂಗಳಂ ಮಗುಳೆ ಮೂದಲಿಕೆಗೈದು ॥
ಜನನಾಥನಂ ಕೊಲ್ಲಲೇಂಗೈದನಾಗಸವ ।
ನಿನಗೆ ರಘುನಂದನನದೇನಪಕೃತಂಗೈದ ।
ಬನಕಟ್ಟಲಿನಿತು ಪಾತಕಿ ನರಕಕೇಡಾದೆ ಪತಿಯ ಲೋಕವ ನೀಗಿದೆ ॥ (18)

ಪೇಳಲಳವಲ್ಲದೀ ಪಾತಕಕ್ಕೆಳಸಿ ಬಹು ।
ಖೂಳರೊಡವೆರದೆನ್ನನಪಯಶಃಪುರುಷನಿಂ ।
ಗಾಳಪ್ಪ ತೆರನನೆಸಗಿದೆ ಸರ್ವಲೋಕಹಿತಕಾರ್ಯಮಂ ನೋಡದಾದೆ ॥
ಆಳದೊಡೆಯನಕೊಲ್ಲಲ್ ತರಸನಟವಿಗೆ ಕಳಪಿ ।
ಕೀಳುಜನರೊಡವೆರದು ಪತ್ತಣಿದೊಳರಸಾಗಿ ।
ಬಾಳಬಲ್ಲೆನೆ ರಾಜ್ಯಕಾಮುಕರು ಪಶುಮಿತ್ರವ್ಯತ್ಯಯರೂಪಿನ ಪಾತ್ರಕೆ ॥ (19)

ಕುಲವಿನಾಶನಕೆಂದು ಪತಿಯ ಪೋಗಾಡಿ ನೀ ।
ನೆಲಕದೀಶಯೆನಿಪ್ಪೆ ಪಾಪಿ ಕುಲಗೆಡುಕಿ ನಿ ।
ನ್ನಲಿ ಜನಿಸಿದಾಂ ನರಕಕಧಿನಾಥನಾದೆ ದುರ್ಮೇಧೆ ನಿನ್ನತ್ತಣಿಂದಂ ॥
ಅಲಘುಮತಿ ಕೌಸಲ್ಯೆ ಸುಮಿತ್ರೆ ಮೊದಲಾದಖಿಲ ।
ಲಲನಾಶಿರೋಮಣಿಯರಿಂಗಿತ್ತೆ ಯತಿಶೋಕ ।
ಕಲನೆಯನ್ನಶ್ವಪತಿ ಸುತೆಯಲ್ಲ ದಂಡಧರನುದ್ದಂಡತನುಜೆಯಲ್ತೆ ॥ (20)

ಕಾಳರಕ್ಕಸಿ ಯಶ್ವಪತಿ ಯುತಾಗಿ ಯೆನಿಸಿ ಪಿತ ।
ನಾಳುವಂತಪಯಶವ ನೆಸಗಿ ಕುಲಮಂ ಕೆಡಿಸಿ ।
ಬಾಳಲೆಸಗಿದೆ ಕ್ರೂರಕರ್ಮಿ ನಿನ್ನೊಳ್ ನುಡಿದೊಡೆಹುದು ಪಾತಕದ ರಾಶಿ ॥
ಪೇಳ ಫಲವೇನೆನುತಲಮಿತಗರ್ಜಿತದ ವಚ ।
ನಾಳಗಳ ಬೀರಿ ಬಲುದುಃಖದಿಂ ಧರೆಗೊರಗಿ ।
ತಾಳದಂ ಮೂರ್ಛೆಯನ್ನರೆನಿಮಿಷಕೆಚ್ಚತ್ತು ನೋಡಿ ಬಿಸುಸುಯ್ದನಳಲಿ ॥ (21)

ಬಿಡುತ ನಿಟ್ಟುಸಿರ್ಗಳಂ ನಾಲ್ದೆಸೆಗಳಂ ನೋಡು ।
ತಡಬಲದ ಪರಿಯರೊಳಗೆಂದ ರಾಜ್ಯವ ಬೇಡ ।
ಬೊಡನೀಕೆಗಂ ಪೇಳ್ದನಲ್ಲ ರಘುವರಗಪ್ಪ ಪಟ್ಟಮಂ ಕೇಳ್ದರಿಯೆನು ॥
ಕಡೆಗರಸ ಸಗ್ಗಕೈದಿದ ನಣ್ಣ ಕ್ರೂರತರ ।
ದಡವಿಗಂ ತೆರಳದುದನೊಂದಕಾಣದೆ ಮೂವ ।
ನೆಡೆಯೊಳರ್ದೆನಗಡಸಿತತಿಭೀತಿ ಪಾತಕಿಯ ದೆಸೆಯಿಂದೆನುತ ಬೈದನು ॥ (22)

ಚಂಡಾತಪೋದ್ರಿಕ್ತ ದಿಕ್ತಟಗಳೆಂಬ ಮಾ ।
ರ್ತಂಡ ಮಧ್ಯಾಂಬರಾಧ್ಯಾಸೀನನೆನಿಸಲ್ಕೆ ।
ಕುಂಡಲಿತ ರಶ್ಮಿಗಳನಳದು ಹಲಕಂಕಟ್ಟು ಪಿಡಿದೆಳೆದು ಪುಂಗವಗಳ ॥
ಅಂಡಲೆದು ಬಂಧಿಸುತ ಹಲಿಕನುಳುತಿರಲದಂ ।
ಕಂಡು ಕಂಬನಿವಿಡಲ್ ಸುರಭಿ ಕಣ್ಬನಿಗಳುಂ ।
ತಂಡತಂಡದೆ ಮೊಳಬಂದಿತಮಾಗುತಾಸುರಪನಂಗದೊಳ್ ಬೀಳ್ ಜವದಿ ॥ (23)

ಕಂಬನಿಯು ಬಿಸಿಯಿಂದ ಪಾಕಶಾಸನ ಬೆದರಿ ।
ಬೆಂಬಿಡದೆ ನೋಡುತಳುತಿಹ ಕಾಮಧೇನುವಂ ।
ಸಂಭ್ರಮಿತಚಿತ್ತ ಮೇಂಕಶದೊಳಾದುದೆನುತ್ತ ಬೆಸಗೊಳ್ಳಲಾತನೊಡನೆ ॥
ತುಂಬಿತುಳುಕುವ ಶೋಕದಿಂದ ನುಡಿವಳ್ ಸುರಭಿ ।
ಯೆಂಬೆನೇನಣುಗರೀ ಮಧ್ಯಾಹ್ನದಾತಪದಿ ।
ಕೊಂಬಕ್ರಮಮಂ ನೋಡಿ ಕುಡಿಮರಿದುದಾದುದಕವೆನೆ ವಜ್ರಿ ಬಳಕೆಂದನು ॥ (24)

ಧರೆಯೊಳ್ ಬಲೀವರ್ದಮಖಿಲಗೋಗಣವಮಿತ ।
ನೆರೆದಿರ್ಪವೆಲ್ಲ ಭವದೀಯಸಂತತಿಯೆನುತ ।
ಮರುಕದಿಂ ತೊಳಲಿವರದೆಂತಿಗಾದರು ದುಃಖ ಕೊನೆಗಾಣ್ಬುದುಂಟೆ ಮರುಳೆ ॥
ತಿರೆಯೊಳೆಲ್ಲರ ಜೀವನಾಧಾರವೆಂದೆನುತ ।
ಸರಸಿಜಾಸನ ಗೈವ ಕೃತ್ಯಮಂ ನೋಡುತ್ತ ।
ಮರುಗಲೇಂ ಫಲಮೆನುತ ಸುರಚರೆಯು ಸಂತಸಂಗೊಳಸಿದಂ ಮೃದುನುಡಿಯೊಳು ॥ (25)

ಕುಲಪರಂಪರೆಯೊಳವತರಿಸಿದ ನೃಪಂಗಳ್ ।
ನೆಲದಲಿಟ್ಟಸಿ ಸುರಭಿ ಸಂಕಟಂಗೊಂಡುದೀ ।
ಲಲನೆಯರ ಕುಲದೇವತಾರೂಪಿ ಕೌಸಲ್ಯೆ ದಿವ್ಯಪೂರುಷನ ಸುತನ ॥
ಸುಲಲಿತೋದಾರಲಾವಣ್ಯಖನಿಯಿಂ ಒನೆಕೆ ।
ತೊಲಗಿಸಿದ ಸಂತಾಪಮನಿತೆಂದು ಸ್ಮರಿಪಳು ।
ಕುಲಗೆಡುಕಿ ಯಮರೂಪಿ ಸೂರವಂಶವ ನೀರೊಳಾಳಸಿದೆ ದುರ್ವಾರಕೆ ॥ (26)

ಪಾತಕಿಯು ಜಠರದೊಳ್ ಜನಿಸಿದುದರಿಂ ಮಹ ।
ತ್ಪಾತಕನೆ ನಿಪ್ಪುದೆನಗಾದುದೀಕ್ಷಣ ನಿನ್ನ ।
ಘಾತಿಸುವೆ ದುಷ್ಟನಿಗ್ರಹ ದೋಷಕರಮಲ್ಲವೆನುತ ನಾನಾವಿಧದಲಿ ॥
ತಾತನಂ ನೆನೆನೆನೆದು ಶೋಕಬಡುವವ ರಾಮು ।
ಮಾತೆ ಕೇಳ್ವಾಗ ಭರತಂ ಬಂದನೆಂದರಿದು ।
ತಾತ್ಪರ್ಯಮಾನಸದೊಳಳಲಿ ಕರದೊಳ್ ಕುವರ ಬಾರೆಂದು ದೈನ್ಯವಿಡಿದು ॥ (27)

ಅದೆ ಬಂದ ಭರತನೆಂದಾ ಸುಮಿತ್ರೆಯೊಳೊರೆದು ।
ಕದಳಯಂದದಿ ಬಳುಕುತ್ತೈತಪ್ಪುದಂ ಕಾಣು ।
ತಿದಿರೆದ್ದು ಶತ್ರುಘ್ನಸಹಿತ ಚರಣಂಗಳಂಗೆರಗಿ ಕೆಡೆದಂ ಧರೆಯೊಳು ॥
ಅಡೆಸಿ ಬಹ ದುಃಖದಿಂದಳಲುತಿಹ ಭರತನಂ ।
ಸುದತಿ ಪಿಡಿದೆತ್ತಿ ಮಸ್ತಕವನಾಘ್ರಾಣಿಸುತ ।
ಉದುಭುತದ ಶೋಕದಿಂದೆಂದಳಾ ಭರತನೊಳ್ ತರಹರಿಸಲಳವಲ್ಲದೆ ॥ (28)

ಪತಿಯು ಧರ್ಮಸ್ಥಿತಿಯು ನೋಡದೆ ಭವನ್ಮಾತೆ ।
ಯತಿಶಯದ ಸಿರಿಯನುಂ ಬಯಸಿ ಪುರುಷೋತ್ತಮನ ।
ಸುತನ ವೈದೇಹಿ ಲಕ್ಷ್ಮಣನ ಸಹ ಕಾನನಕೆ ಕಳಪಿ ದೊರೆತನವ ಗಳಸಿ ॥
ಸತತಸಂಪ್ರೀತಿಯಿಂದನುಭವಿಸಲೆಂದು ಸಂ ।
ಪ್ರತಿಹರ್ಷದಿಂದಿರ್ಪಳೆದರಿಂ ಮನೋರಥಂ ।
ಜತೆಯಾದುದತಿಸುಖದಿ ಧರಣಿಯಂ ಪಾಲಿಪುದು ತನಯ ನಿಶ್ಚಿಂತೆಯಿಂದೆ ॥ (29)

ಅಮರ ಸನ್ನಿಭತನಯುರಿಲ್ಲದಾನಿರ್ಪ್ರದಿದು ।
ಕ್ರಮವಲ್ಲ ವಧಿಸಿಡುಪ್ರದೆಂದು ಮಾತೆಗೆ ಪೇಳ್ಳು ।
ಮನುತೆಯುಂಟಾದರೆನ್ನೊಯ್ದು ಧಾರ್ಮಿಕನೆಡೆಗೆ ಸೇರಿಸಲ್ಕಿರ್ದ ಸುಖದಿ ॥
ವಿಮಲಮತಿ ಯೆನ್ನಲ್ಲಿ ಸುಪ್ರೇಮದಿಂ ವೇಗ ।
ಸಮನಿಸಲ್ ಪೇಳ್ಕು ಮೆಸುತಾ ಸಾಧ್ವಿ ನುಡಿದುದಂ ।
ಸುಮನಸೋತ್ತಮ ಭರತ ಕೇಳಿ ಪರಿತಾಪದಿಂದಿಂತೆಂದ ಮಾತೆಯೊಡನೆ ॥ (30)
ಬಾಧಿಸುವ ವ್ರಣಮಂ ಶಲಾಕದಿಂ ತೀವಿದಂ ।
ತಾದುದೀ ವಾಣಿಯುಂ ಕೇಳ್ದಾಗ ಭರತಗು ।
ದ್ಭೋದವಾದುದು ಶೋಕ ಪಾರವಿಲ್ಲದೆ ಪಲುಬಿ ಬಗೆಬಗೆಯುಸು ಪಲುಬುತೆ ॥
ಪಾದಂಗಳ್ಗೆರಗಿ ಪಟುತರಕ್ಲೇಶಪಿಂ ।
ರೋದಿಸುತೆ ಕೌಸಲ್ಯೆಯೊಡನೆಂದ ಕಿಲ್ಬಿಷದ ।
ಹಾದಿಯುಂ ತಿಳಿಯುದ ನಿರಾಗಸನ ನೀಂ ಪರಿಯಾಸಾಡಲೆಂತಾಯ್ತು ಮಾತೆ ॥ (31)
ಕರುಣಾತನದಿಂದಾನು ಶ್ರೀರಾಮ ಚಂದ್ರಮನ ।
ಚರಣಭಕುತಿಯೊಳಿರ್ದು ಸೇವಿಸುವೆ ವೃತ್ತಿಯು ।
ನ್ನರಿತರಿಯುದಂದದಲಿ ನುಡಿದರೇಂ ಲಾಲಿಸುವುದೀ ಪ್ರತಿಜ್ಞೆಯು ಪರಿಯುಸು ॥
ಧರಣಿಯುಂ ಜನನಿಗೈಧರ್ಮವಂ ಪೆರರಂದ ।
ಲರಿದರುಂ ಕೇಳ್ದರುಂ ತಾಯೆ ನಾಂ ಪರಕೆ ಬಾ ।
ಹಿರನಪ್ಪೆನೆನುತವಿ‍ತಶಪಥಗಳನಾಡಿವನು ಪೇಳಲೇನದ್ಭುತವನು ॥ (32)
ಹರಕೇಶವದ್ವೇಷ ಮೆರವ ಕಾರಣ ದೋಷ ।
ಗುರುನಿರಾಕರಣ ಗೋವಿಪ್ರತಾಡಿತ ಚರಣ ।
ಮರದೊರಗಿವರ ಹರಣಮಂ ಕೊಳುವ ಧೂರ್ತನಿಂಗಖಿಲಪ್ರಾಣಾಪಹರಗೆ ॥
ಪರವಿತ್ತವಂಚಕಗೆ ಪರವಧೂಕಾಮುಕಗೆ ।
ಮರೆಯೊಕ್ಕರಂ ಪೆರಂಗೀವ ಪಾಪಾಚಾರ ।
ನಿರತರಂಗಪ್ಪ ಗತಿ ತಪ್ಪದಾಗಲಿ ರಾಮನಂಘ್ರಿಗೆರಡೆಣಿಸಲೆನಗೆ ॥ (33)
ಹಿತದೊಳೇಕಾಂತಮೆಂದೊರೆದ ನೇಹಿತ ನುಡಿಯು ।
ಪ್ರತಿಜನರ ಮುಂದೊರೆವನಾವ ಮೋಹಿಸುತಲಘಿ ।
ಮತವನರಸುವ ಪರೀವಾದವಂ ನೆಗಳುತಿಹ ನನ್ಯಮನವಂ ನೋಯಿಪ ॥
ಅತಿಶಯುದ ಮಂತ್ರಮಂ ಕಲಿತು ಮರೆದಪ ಶಾಸ್ತ್ರ ।
ತತಿಯು ಮೀರಿದ ದುರಾಚಾರಿಗಹ ಗತಿ ಯೆನ ।
ಗೆ ತಪ್ಪದಪ್ಪುದು ರಾಮಚಂದ್ರನ ಚರಣಕೆರಡೆಣಿಸಲೆನಗೆ ॥ (34)
ನಂಬಿಸುತ ಗರವಿತ್ತು ನಗುತಲಗ್ನಿಯುನಿಕ್ಕಿ ।
ಡೊಂಬಿಯುಂ ಕ್ಷೇತ್ರದಾರಾಪಹರಣಂ ಗೈದು ।
ಕೊಂಬನೆಲ್ಲರವಿತ್ತಮಂ ಮಹತ್ಪಾಪಗತಗಾವಗತಿ ಸಮನಿಸುವುದು ॥
ಇಂಬಿಲ್ಲದಗ್ನಿಯೊಳು ನೀರೊಳಗಿದತನುವಿ ।
ಗುಂಬಲಿಯನಿತ್ತು ಕ್ಷಾಮದಿಪೊರೆದು ಮನದಿಪ್ರತಿ ।
ಬಿಂಬಿಸಿದರಂ ಮರದರಿಂಗಪ್ಪ ಗತಿ ತಪ್ಪದೆನಗೆ ರಾಮನ ಮರೆದೊಡೆ ॥ (35)

ಸತಿತನಯಸಂಬಂಧಿಗಳ ಕೂಡಿ ಪಾಯಸಂ ।
ವಿತತಭಾಗಾಂಗಭದ ಪಲಕೃಸರವುಂತಾದ ।
ಹಿತಕರಸುಭೋಜನವನುಂಡತಿಥಿಗಳ ಕೊಡದಿರುವ ಪಾತಕೆಗೆ ಬಪ್ಪೆ ।
ರತಿಗೊಂಡು ಪಾನಪರದಾರಾವಮರ್ಶನದ ।
ಜೊತೆಗೊಂಡ ಕಾಮಕ್ರೋಧಂಗಳನ್ನಾತಪನ ।
ಗತಿ ತಪ್ಪದೆನಗಪ್ಪುದಿದು ನನ್ನಿ ರಾಮಗಂ ಅಸೆರಡನು ನೆನೆದರೆ ॥ (36)
ಬಲಹೀನವಾದ ಮಾತಾಪಿತೃಗಳಂ ಮನವ ।
ತೊಲಗಿಸಿ ಋತುಸ್ನಾತೆಯಾದ ಪೆಂಡತಿಯುಳದು ।
ಖಲತನದೊಳಧಿಕರಾಜದ್ರೋಹಗಳ ನೆಸಗಿ ಭೃತ್ಯರ ತಿರಸ್ಕರಿಸುತ ॥
ಫಲಲೋಹಲಾಕ್ಷಾದಿ ವ್ಯಾಪಾರಗಳನೆಸಗಿ ।
ಕುಲವನಂರಕ್ಷಿಸುವ ಸೂರ್ಯಾಭಿಮುಖವಾಗಿ ।
ಜಲಶಂಕೆಗೈವಾತಗಪ್ಪಪಾತಕ ತಪ್ಪದೆನ ಗಹುದುಬಿಡಲಣ್ಣನಾ ॥ (37)
ಜನಿಸಿದಾಶೆಯೊಳೂರ್ಧ್ವಮುಖದಿಂದ ಪ್ರಾರ್ಥಿಸುತ ।
ಅನವರತಬೇಡುವಾರ್ತಿಯ ತಿರಸ್ಕೃತಿಗೈವ ।
ಘನಪಾತಕೆಗೆ ತನ್ನ ಪೊಗಳ ಪೆರರಂ ಬೈವ ನಾರಿಗೆ ಕುಡಿವ ಜಲವಂ ॥
ಕೆಸಿಸಿಂದ ಕೆಡಿಸಿ ನಿಜಧರ್ಮವಂ ಮಿಾರಿ ದು ।
ರ್ಜನವಾಂತ ವಿಪ್ರನಿಂಗಾವ ಗತಿ ಯಪ್ಪುದದು ।
ಯೆನಗಂಟಲಾರ್ಯಗೇನಾದೊಡಂ ಪಾತಕವ ಮನದೊಳಂ ನೆನದಿರ್ದೊಡೆ ॥ (38)
ಪ್ರತಿಬಡಿಸಿ ಯುಗ್ಗಡದ ರಣದೊಳಸುವಂ ಸಲಹೆ ।
ರತಿಯಿಂ ಪಲಾಯನಂಗೈದವಂಗಾಯುದ್ಧ ।
ಕ್ಷಿತಿಭೀತಿಯಿಂದ ಶರಣೆಂದವನ ಪೊಡೆದವನಿಗಪ್ಪ ಪಾತಕಮಡಸಲಿ ॥
ಕ್ಷಿತಿಯರಸಗಾನಘವ ನೆನದರಾದರೆನುತ್ತ ।
ಅತಿದುಃಖದಿಂದಳಲಿ ಕೂರಶಪಥಂಗೈದು ।
ಮತಿಗುಂದಿ ಕೆಡೆದ ಸುತನಂ ನೋಡಿ ತಳ್ಕೈಸಿ ಕೌಸಲ್ಯೆ ಯಿಂತೆಂದಳು ॥ (39)
ಮರೆದೆಂದಿಗಾದೊಡಂ ಧರ್ಮದಿಂದಳಿ ಚಲಿಸಿ ।
ಪೆರಸಾರುವದೆ ನಿನ್ನ ಮನ ಬಾಲ ನಾಂ ಬಲ್ಲೆ ।
ಮರುಗಿ ಮಾಡುವುದೇನು ವಿಧಿಕೃತವ ಮಿಾರುವರದಾರ್ಗಪ್ಪುದೀ ಭುವನದಿ ॥
ಪರಮಧಾರ್ಮಿಕಮೂರ್ತಿ ಬರಿದೆ ಶೋಕಿಸಿದರೇಂ ।
ಗುರುತರ ಪ್ರೇಮದಿಂದಂಕದೊಳ್ ಕುಳ್ಳಿರಿಸಿ ।
ಭರತನಂ ಸಂತೈಸುತಿರಲನ್ನೆಗಂ ರಾತ್ರಿಯಾಯಿತು ಸಂವತ್ಸರದೊಲು ॥ (40)
ಮೂಡಿತಿನಬಿಂಬ ಮುನಿಕರೊಳಾ ದ್ವಿಜೋತ್ತಮರ ।
ಕೂಡಿ ಮೈತ್ರಾವರುಣಿ ನಡೆತಂದು ಭರತನಂ ।
ನೋಡಿ ಸಂಕಟಗೊಳ್ಳುವದ ನಿಲಿಸಿ ಮುಂದಪ್ಪ ಕಜ್ಜಮಂ ನೆಗಳಸುವ್ರೊಡೆ ॥
ಮಾಡಿ ಯೋಚನೆಯ ಮನ ದೊಳ್ ಪ್ರೀತಿಯಿಂ ವಿನಯ ।
ಗೂಡಿ ಬಾಲಕ ವತ್ಸ ನೀನಿದೇಂಕಾರಣಕೆ ।
ಮಾಡುವೆ ಪ್ರಳಾಪಮಂ ಮರ್ತ್ಯಗಳಗೆ ಸಲ್ಪುದುಂ ನಿಲ್ಪುದೇ ಜಗದೊಳು ॥ (41)

ಭೋಗಂಗಳೆಲ್ಲಮಂ ಕೊಂಡು ಶ್ರೌತಾಚಾರ ।
ಯಾಗಂಗಳನ್ನೆಸಗಿ ಷೋಡಶಮಹಾದಾನ ।
ಯೋಗಂಗಳಿಂದಖಿಳದೇವಮನುಜಾದಿಗಳ ಸಂತುಷ್ಟಿಗೊಳಿಸಿ ಬಳಿಕ ॥
ಯೋಗೀಶರಾಮನಂ ಪಡೆದು ಮಘವಲ್ಲೋಕ ।
ಭೋಗೇಚ್ಛೆಯಿಂದೈದಿದಗಣಿತಯಶೋರಾಶಿ ।
ಯಾಗಾರನಂ ನೆನೆದು ಹಂಬಲಿಸುತಳುವುದಿದು ವ್ಯರ್ಥಪ್ರಳಾಪಮಲ್ತೆ ॥ (42)

ಜನನ ಮರಣಗಳೆಲ್ಲ ದಕ್ಷಯವಿಶುದ್ಧಾತ್ಮ ।
ಗೆವಿತುದೇಹಗಳರಲನಿತ್ಯ ನಶ್ವರಮಶುಚಿ ।
ಜನಿಪುದಿದ ಬಲ್ಲರ್ ನೋಡುತಲೆ ತಿಳಿಯದವಿತ್ರದುಃಖಗಳ ತೊಡರಿ ॥
ನೆನೆನೆನೆದು ಮರುಗಿ ಕೊರಗುವ ಮೂಢಜನರಿಗಿ ।
ಸ್ನಾನಮೋನ ವೇಳಲಪ್ಪುದು ಶೋಕಗೈವುದಿದು ।
ಬಿನದ ಮಾಗಿದೆ ಪೋದ ತನುವ ನಿಟ್ಟಿಸಿ ಬಳಲಲದು ನಿರರ್ಥಕಮಲ್ತೆ ॥ (43)

ಪುಟ್ಟಿದೊಡೆ ಸಗ್ಗ ನರಕಗಳ ಪಂಥಾನಮಂ ।
ಮೆಟ್ಟದಲ್ಲದೆ ತೀರದಲ್ಲಿಂದ ಮರಳ ಬಂ ।
ದಿಟ್ಟಿಸಲ್ಬೇಕು ಪುನರಪಿ ದೇಹ ಯೆನಿಸುವರಿಗಿದು ನನ್ನಿಯಾದ ಬಳಿಕ ॥
ಕುಟ್ಟಿಕೊಂಡಳುವದನ್ಯಾಯು ಸಂತತಚರಿವ ।
ಬಟ್ಟೆಯುಂ ನೋಡುವದಕೇಂ ದುಃಖಮೆನುತ ಮನ ।
ಮುಟ್ಟಿ ಪೋದ ಶರೀರಗಳನು ಲೆಕ್ಕಿಸರ್ಕೈಸೆ ಪಂಡಿತರ್ ಜಗತಿಯೊಳಗೆ ॥ (44)

ಮೊದಲು ಮಾಡಿದ ಸುಕೃತದುಷ್ಕೃತದಫಲದಿಂದ ।
ಲೊದಗುವದು ತನು ಶರೀರವ ಕೊಂಡವನಾತುರದೊ ।
ಳದುಭುತದ ಸುಖದುಃಖಗಳನುಂಬನಾ ದೇಹ ಜೀರ್ಣಮಾಗಲ್ ಬಿಡುವನು ॥
ಬದಲೊಂದು ಪೊಸಮೂರ್ತಿಯುಂ ಕೊಂಬನೀ ಪರಿಯು ।
ಲುದು ಭವಂ ನಷ್ಟಮೆರಡುಂತಥ್ಯಮಾಗಿರ ।
ಲೊದಗುವದದೆಂತು ನೆನೆದಾರಿಗಃರಳಲುವರದೇನು ಸಂಬಂಧ ತಿಳಿಯೆ ॥ (45)

ಶಾರೀರಸಂಗಮಾಗಲ್ ಬಾಲ್ಯಯೌವನಂ ।
ತೋರೆ ಜರೆಯಡಸುವುದು ಮಗುಳೊಂದುತನುವಿಡಿವ ।
ನೋರಂತೆ ತಥ್ಯಮದರಿಂ ಪೋದ ದೇಹಮಂ ನೆನೆದು ತೊಳಲುವದನುಚಿತಂ ॥
ಧೀರ ಕೇಳಾತ್ಮಗೆಂದಿಗು ಸಾವು ಹುಟ್ಟುಗಳ್ ।
ತೋರುವುದು ಷಡ್ಭಾವಕಲನೆಯಾನಂದಮಯು ।
ಸಾರಬುದ್ಧ್ಯಾದಿ ಸಾಕ್ಷಿಗೆ ಲೇಪವರ್ಜಿತನಿಗಹುದೆ ಜನನಗಳು ಮರುಳೆ ॥ (46)

ನಿರತಿಶಯದಾನಂದಮಯನಾತ್ಮನೆಂದರಿದು ।
ತರಿದಹಂಕೃತಿಯು ನಿತ್ಯದ ದೇಹದಭಿಮಾನ ।
ವೆರೆಯದನುದಿನನಿತ್ಯ ಸುಖದಲಿರ್ಪುದನುಳಿದು ಕಲ್ಪಿತಭ್ರಾಂತಿವಿಡಿದು ॥
ಮರುಗಲೇಂ ಪ್ರಾರಬ್ಧವಶಮಾದ ಬಳಿಕ ಬಂ ।
ಧುರಶೋಕಮೋಹಗಳ ನೋಡುತಂಬದಲಿರ್ಪ ।
ನರುವಿನುರುಳಿಯುನಿಷ್ಪನೊಂದ ಕ್ರಾಂತಿಗಳಪ್ಪ ತಿಳಿದು ಸೋಜ್ಞಿದನೆ ಬೊಪ್ಪ ॥ (47)

ಜನನಮರಣದ ಬಾಧೆಗಳ್ಳಕದಿಹೊಡನುಬಂಧ ।
ಚಿನುಮಯಾನಂದ ತಾನೆಂದರಿದು ತನ್ನೊಳಗೆ ।
ದಿನದಿನಂ ನೋಡುತಿರೆ ಲಭಿಸುವುದು ಪರಮಸುಖಮೆನುತ ಗುರುವರನುಸಿರಿದ ॥
ಘನರಸಾಯನವಾಣಿ ಘಮ್ಮನೆ ಮಹಾಶೋಕ ।
ದನುಪಾಂತ ರುಜೆಯನಪಹರಿಸಲಾಭರತ ತ ।
ನ್ನನುವ ತಾನೇ ತಿಳಿದು ಸುಖಿಯಾದನೇನೆಂಬೆ ಮಹದನುಗ್ರಹದ ಬಗೆಯ ॥ (48)

ತೊಡರಿದನು ತಾಪತಪ್ತನೆ ತೊಲಗಲಾಭರತ ।
ಗೊಡನೆ ನಿರ್ಮಲವಾಮದಂತರಂಗಂ ಬಳಿಕ ।
ಪೊಡೆಯ ಬಡಿದಳುವದೆತ್ತಲ್ ಪೋದುದೋ ಪುಟ್ಟಿದುದೇ ಪುಸಿ ಯೆಂಬಂದದಿ ॥
ನುಡಿಗಳ ಮಹಾಮಹಿಮೆಯಿಂದ ನಿರ್ಮಲನಾಗು ।
ತಡಿಗೆರಗಿ ಮುಂದಪ್ಪ ಕಜ್ಜಮಂ ಬೆಸಸೆಂದು ।
ವ್ರಡನಿಕಾಶ ಮುನೀಶಗರು ಪೇಳದಕುತ್ತರವನಿತ್ತ ನಾ ಯಮಿರಾಯನು ॥ (49)

ಮಡಗಿದಕೊ ತ್ತೈಲದ ಕಟಾಹ ತನ್ಮಧ್ಯದೊಳ್ ।
ಪೊಡವಿಪತಿಯ ಶರೀರ ಮದ [illegible]ಗ ಸೌಖ್ಯದಿಂ ।
ಕಡೆಗೊಳಿಸಿ ಬೇಗ ಶಾಸ್ತ್ರೋಕ್ತವಿಧಿಯಂ ವಿಚಾರದೆಸಗು ಸಂಯಾಗವನ್ನು ॥
ಕಡೆಗೈಯಲವಸರಮಿದಲ್ಲೆನುತ ಮುನಿತಿಲಕ ।
ನುಡಿದರಾಕ್ಷಣ ಭರತ ತತ್ಕಾರ್ಯಧುರ್ಯದಿಂ ।
ದೊಡನೆ ನೇಮಿಸಲಾಗಲರಸನಂ ಕಡೆದೆಗೆದರೆಣ್ಣೆಗೊಪ್ಪರಿಗೆಯಿಂದೆ ॥ (50)

ರನ್ನಮಯ ಪಾಸಿಗೆಯಲಾ ಮಹೀಪತಿಯನ
ತ್ಯುನ್ನತಿಕೆಯಿಂದ ಕುಳ್ಳಿರಿಸಲಂಕರಿಸಿರ್ಪ ।
ಬನ್ನಮಂ ಕಂಡು ಭರತಂ ಶೋಕಸಂತಪ್ತನಾಗಿ ಮರುಗಿದನು ಮಗುಳ್ ॥
ಎನ್ನ ಮಾತುಳನೆಡೆಗೆ ಕಳಪಿ ರಘುವೀರನಂ ।
ಖಿನ್ನವಾಸಸಗೈದು ಪೇರಡವಿಗಟ್ಟಿಯಾ ।
ರೆನ್ನುವರ ಕಾಣೀಪರಿಯ ಚರಮಾವಸ್ಥೆಗೈದ ಭೂಪಾಲತಿಲಕ ॥ (51)

ಎಂದಮಿತ್ರಗುಣಿಕರ್ಮಗಳ ನೆನೆನೆನೆದಳುವ ।
ಕಂದನಂ ನೋಡಿ ಮೈತ್ರಾವರುಣಿ ಪ್ರಿಯದಿಂದ ।
ಬೆಂದನೆಲೆಪುತ್ರ ಬಿಡು ಶೋಕಮಂ ಪಿತನಿಂಗೆ ಪ್ರೇತಕಾರ್ಯಗಳ ರಚಿಸು ॥
ಎಂದೊರೆಯಲಾಚಾರ್ಯ ಋತ್ವಿಕ್ಪುರೋಹಿತರ ।
ಸಂದೋಹಮಂ ಕರೆಸಿ ವೈಶ್ವಾನರನ ಬೇಗ ।
ತಂದಿರಿಸಿ ಪೆರಗೆಂದು ನೇಮಿಸಲ್ ಋತ್ವಿಜರ್ ನೃಪತಿ ಪೇಳ್ದ ತೆರದೊಳು॥(52)

ಕ್ರತುಭುಜನಪೊರಗಿಟ್ಟು ಪ್ರತಿಕರ್ಮಕಳವಟ್ಟು ।
ಕ್ಷಿತಿಪತಿಯ ಸಿಬಿಕಾಧಿರೋಹಣಂಗೈಸಿ ಮುಂ ।
ದತುಳತಂಬಟ ಭೇರಿಬಹುವಿಧದವಾದ್ಯಂಗಳು ಘೋಷಣೆಗೈವುತೈದಿ ॥
ಚತುರತೆಯ ಸೌವರ್ಣರಜತಕುಸುಮಂಗಳ ।
ಸ್ವತಿಶಯದ ವೀಥಿಯೊಳ್ ಪರಪುತ್ತಲೈತಂದು ।
ಚಿತೆಗೈದರಗರುಚಂದನ ದೇವದಾರುಮಯಮಾಧಿಷ್ಟಿಗಂಧಂಗಳಲಿ ॥ (53)

ವಿಧಿಯಿಂದ ಹುತಹುತಾಶನತೋಷಣಂಗೈದು ।
ಚದುರಿಂದ ಜಪವೆಸಗಿ ಸಾಮಗಾನದಿ ಪಾಡಿ ।
ಪದುಳದಿಂದಗ್ನಿಸಂಸ್ಕಾರಗೈದರ್ ಬೇಗ ಶ್ರೌತವಿಧಿಯಂ ಮೀರದೆ ॥
ಅದನೋಡಿ ಯಾರಾಜಯೋಷಿತರ್ ತಮತ್ರಮ್ಮ ।
ಹೃದಯಸ್ಥದುಃಖಮಂ ಪೊರಪರಪಲನ್ನೆಗಂ ।
ಸಪಯಂ ವಸಿಷ್ಠಮುನಿ ಯ್ಯೆತಂದು ಮತ್ತವರ ಪುಪಚರಿಸಿದಂ ವಿನಯದಿ ॥ (54)

ಕರದೊಯ್ದು ಸರಿಯೊಳವಗಾಹನಂಗೈಸಿ ಪ್ರಿಯು ।
ಕರದುದಕವಂ ಕೊಡಿ ನಗರಪ್ರವೇಶಮಂ ।
ತ್ವರಿತದಿಂ ಮಾಡಿಸಿದನಾ ವಿಪ್ರಕುಲತಿಲಕ ಬರೆ ದಶಾಹಂಪ್ರಿಯದೊಳು ॥
ಪರಮಭಕ್ತಿಯೊಳು ಶ್ರಾದ್ಧಂಗಳಂ ರಚಿಸಿ ಪರಿ ।
ಪರಿಯಭೂಷಣ ಭೂರಿಧನಧಾನ್ಯಗೋವ್ರಜಂ ।
ಧರಣಿ ಮುಂತಾದ ದಾನಂಗಳಂ ಮಾಡಿಸಿದ ಭೂಸುರರ್ ನಲಿವಂದದಿ ॥ (55)

ಗುರುವಿನನುಮತದಿಂದ ಪಿತೃಕಾರ್ಯವೆಲ್ಲಮಂ ।
ಪರಮಭಕ್ತಿಯೊಳು ಸಾಂಗೋಪಾಂಗದಿಂ ರಚಿಸಿ ।
ಭರತಶತ್ರುಘ್ನರೊಡವೆರದು ಸಂಕ್ಲೇಶದೊಳು ಮತ್ತೊಂದನೆಸೆಯದಾಗ ॥
ಸ್ಮರಿಸಿ ಗುಣವಿಕ್ರಮಗಳಂ ಮನೋವ್ಯಾಕುಲತೆ ।
ವೆರದು ಸಿರಿರಾಮಪುರದರಸ ನಂಘ್ರಿದ್ವಯಂ ।
ನಿರುಗೆಗೊಳಸಿದ ಕಾಣ್ಬೆನೆಂಬೆಗೆಂ ದಂದಿನಿರುಳಂ ಕಳೆದ ಕಷ್ಟದಿಂದ ॥ (56)

॥ ಸಂಧಿ 26 ಪದ 1119 ॥

## ಇಪ್ಪತ್ತೇಳನೆಯ ಸಂಧಿ

ಸೂಚನೆ ॥ ನೆರೆದ ಭೂಮಿಪದ್ವಿಜೋತ್ತಮರೆಲ್ಲ ಭರತಗಂ ।
ದೊರೆತನವ ಕಟ್ಟಲಿಚ್ಛೈಸಲವ ಮನ್ನಿಸದೆ ।
ಪರಮಭಕ್ತಿಯೊಳು ರಘುವೀರನಂಘ್ರಿಯ ಕಾಣ್ಬೊಡೈದಿದಂ ವಿಪಿನದೆಡಗೆ ॥

ಪಿತಗೌರ್ಧ್ವದೈಹಿಕಾದ್ಯಖಿಲಕರ್ಮಂಗಳಂ ।
ಯುತಿ ನಿರೂಪಿಸಿದಂತೆ ಪರಿಸಮಾಪ್ತಂಗೈದು ।
ಹಿತಬಂಧುಗಳ್ ಬೆರಸಿ ಕುಳ್ಳಿರಲ್ಕಾನದಿಂ ಶತ್ರುಘ್ನಸತಿದುಃಖದಿ ॥
ಕ್ಷಿತಿಯೊಳಗೆ ಪೊರಳುತಂ ತಾತನ ಚರಿತ್ರಗಳ ।
ನತಿಶಯದಿ ಪೊಗಳುತಂ ಯೆಣಿಸುತಂಗಾಂಗಗಳ ।
ನತಿಶೋಕಗೈದನೇನೆಂಬೆ ಮೋಹಕಮಖಿಳ ಪ್ರಾಣಿಗಳ ಬಿಟ್ಟಗಲ್ವುದೇ ॥ (1)

ನಿಮಿಷ ಕಂಗೊಳಸದಿರೆ ನಿಖಿಳಜನರಂ ಕೇಳ ।
ಪ್ರಮುದದಿ ಕರೆತಂದು ಪ್ರಾಂಗಣದೊಳಾಲಿಸುತ ।
ಸುಮನೋಹರಮೆನಿಪ್ಪಲಂಕೃತಿಗಳಂ ಮಾಡಿ ಹೆರೆಹಿಂಗದನುವಿನದೊಳು ॥
ಮಮತೆಗೈದಯ್ಯನೈದಿದರಣ್ಣನಿಂದಾನು ।
ಕ್ರಮದೊಳುಪಚರಿತಿಯವ್ವೆನೆನಲಾತ ಬನಕೈದ ।
ಲಿಮಗಾರು ಗತಿ ನಿರಾವರಣದೊಳಗೆಂತಿರುವೆನೆಂದಳಳಿದಂ ಬಳಲುತ ॥ (2)

ಅಪರಿಮಿತಶೋಕದಿಂ ಶತ್ರುಘ್ನನಳಲುತಿರ ।
ಲುಪಚರಿಸಲೈದಿ ಭರತಂ ತದಾಕೃತಿಯಿಂತಾಗ ।
ಲುಪಮಿಸಲ್ ಕೊಡೆದಾದುದು ಶೋಕದುರು ತಾಪದಿರವ ಕಂಡಾ ಮುನಿಯು ॥
ಕೃಪೆಯಿಂದ ಭರತನಂ ತಳ್ಕೈಸುತಿತ್ತಿ ಸ ।
ದುಪಚಾರಗೈದು ಮೊದಲಿಸಿದ ವಿವೇಕಕೇ ।
ನಪರಿಮಿತ ಮೋಹಮಂಕಿದುದನಘ ನಿಜತತ್ವ ತಲೆದೋರದಂತಾದುದು ॥ (3)

ಎನಿತಾದೊಡಂ ದುಃಖಮಾರನುತ್ತರಿಸುವೊಡೆ ।
ಜನರಿಂದೆ ತೀರುವುದೆ ಪರಿಹರಿಸಲಳವಲ್ಲ ।
ದನುವ ಚಿಂತಿಸುತೈದೆ ತೊಳಲಲೇಂ ಬರಿದೆ ಮೂರ್ತಿ ಸ್ವಭಾವವೆಂದು ॥
ಮನುಮುನಿಗಳೆಲ್ಲ ದುಸ್ಸಹದುಃಖಮಂ ಸಹಿಸು ।
ತನುಭವಸುತಿರ್ಪರದರಿಂದ ಕಲ್ಪಿತಭ್ರಾಂತಿ ।
ಯನುವರಿತು ಪರಿದಿಟ್ಟುಮಿಂತಪ್ಪ ಕಜ್ಜಮಂ ನೆನವುದತಿಲೇಸು ತನಯ ॥ (4)

ಗುರು ನಿರೂಪಿಸಿದರ್ಥಮಂ ಕೇಳ ಸಂತಸದಿ ।
ಪರಿದು ವ್ಯಾಮೋಹಮಂ ಶತ್ರುಘ್ನನಂ ನೋಡಿ ।
ಪರಿಪರಿಯುಲುಪಚರಿಸುತಿಂತೆಂದ ಬೊಪ್ಪನಂ ನೆನದೇನು ಸಗ್ಗಿಗನನು ॥
ದೊರೆದನಕ ಪರದೈವವೆಮಗೆ ರಘುವೀರನಹ ।
ನರನಾಥನೆಡೆಗೈದಿ ನಡೆದ ವೃತ್ತಾಂತಮ ।
ನೊರೆಯೆ ಪರಿಪಾಲಿಸುವ ಸರ್ವಭೂತಾವಾ ಸನಿರಲೇನು ಭೀತಿ ನಮಗೆ ॥ (5)

ಎಂದು ಶತ್ರುಘ್ನನಂ ಸಂತೈಸಲತಿಕಷ್ಟ ।
ದಿಂದಾತನಳುವದುಳದಿಟ್ಟಿಸುತಿರಲ್ ಪುರಕೆ ।
ಪೊಂದಿರ್ಪ ಬಾಗಿಲೊಳು ಕುಬ್ಜೆ ಕಂಗೊಳಿಸಿದಳ್ ಸಕಲಶೃಂಗಾರವೆರೆದು ॥
ಮಂಥರೆಯ ಕಂಡು ಕಡುಕೋಪದಿಂ ಭರತನೀ ।
ದಂದುಗಕ್ಕಾಧಾರಿ ಯಿವಳೆನುತ ಸೂಚಿಸಲ್ ।
ಬಂದು ಮುಂದಲೆವಿಡಿದು ಶತ್ರುಘ್ನನೊಂದೆರಡ ನೊದೆದ ನತಿಕೋಪದಿಂದ ॥ (6)

ತಾಡನೆಯ ಕಾಣುತಂತಃಪುರಾಂಗಣದೊಳೆಡೆ ।
ಯಾಡುವರ್ ಭಯಗೊಂಡು ನಾಲ್ದೆಸೆಯನೈದಲ್ಕೆ ।
ರೂಢಿಯೊಳೊರಗಿ ಗೋಳಿಟ್ಟುಕೂಗಿದಳಳುತ ಕುಬ್ಜೆ ಭೋಯೆಂದೊರಲುತ ।
ನೋಡಿ ಕೇಕಯತನುಜೆಯೈತಂದು ಬಿಡಿಸುವೊಡೆ ।
ಮಾಡಲತಿಯತ್ನಮಂ ಶತ್ರುಘ್ನ ಕೋಪದಿಂ ।
ಮೋಡಿ ಕುಲಗೆಡುಕಿ ತರಿದಿಡುವೆ ನಿನ್ನೀಕ್ಷಣದೆ ಯೆನಲಂಜಿ ಕಂಪಿಸಿದಳು ॥ (7)

ಕ್ರೋಧಮೂರ್ಛಿತನಾದ ಶತ್ರುಘ್ನನಂ ಕಂಡು ।
ಬಾಧೆ ಬಂತೆಂದಂಜಿ ಭರತನಂ ಮರೆಯೊಕ್ಕ ।
ರಾದುರಾತ್ಮೆಯ ಪೊಡೆಯಲೈತಂದ ಶತ್ರುಘ್ನಗಿಂತೆಂದ ಭರತ ನಂದು ॥
ಈ ದುಷ್ಟೆಯಂ ತರಿವುದುಚಿತಮಬಲಾಜನರ ।
ಬಾಧೆಗೊಳಿಸಲ್ಕಣ್ಣ ಗತಿಕೋಪಮಡಸಿ ದು ।
ರ್ಬೋಧರೆನ್ನುತ ತಿರಸ್ಕೃತಿಗೈವರದರಿಂದ ಕೈಗಾವುದೆಂದೊರೆದನು ॥ (8)

ಕೊಲುವುದನುಚಿತವಬಲೆಯರನೆಂದು ಕ್ಲೇಶಸಂ ।
ಕಲಿತಮನದಿಂ ಭರತ ಮೆಲ್ಲನಿರಿಪಲ್ ಕೇಳ ।
ತೊಲಗಿಸುತ ಕೋಪಮಂ ಶತ್ರುಘ್ನ ಕೈಸಾರಲನ್ನೆಗಂ ಕೈಕೆ ಜವದಿ ॥
ನೆಲದೊಳೊರಗಿದ ಕುಬ್ಜೆಯನ್ನೆತ್ತಿ ಪರಪಿರುವ ।
ಚೆಲುವ ಭೂಷಣಗಳಂ ನಿಟ್ಟಿಸದೆ ಶುದ್ಧಾಂತ ।
ಕಳುಗಲತ್ತಲ್ ಭರತಶತ್ರುಘ್ನರಿರ್ವರುಂ ಗುರುಬಿನೆಡೆಯೊಳಗೊಪ್ಪಿರೆ ॥ (9)
ಪದಿನಾಲ್ಕನೆಯ ದಿವಸವಾಯ್ತು ಧೊರೆಯಹುದಿನ್ನು ।
ಸಪಯ ಸರ್ವರ ಪೂರೆವುದೆಂದು ಪೇಳಲ್ಕಂದು ।
ಉದಿಸಿದಂ ರವಿ ತನ್ನ ಕುಲದೇಳ್ಗೆಯಂ ನೆನೆದು ಸಂತಸವ ಪೇಳ್ವಂವದಿ ॥
ಚದುರಿನ್ನೆತಂದರಖಿಳಾಗಮಜ್ಞರು ವಿಬುಧ ।
ರಧಿಕ ಧೀಮಂತ ಸಾಮಾಜಿಕಾದ್ಯರು ರಾಜ ।
ಸದನದೊಳಗಿರ್ಪ ಹಿತಕರರೊಂದಾಗೂಡಿದರ್ ನಿಮಿಷದೊಳಗಚ್ಚರಿಯೆನೆ ॥ (10)
ನೆರೆದಖಿಲಧೀಮಂತರಾಲೋಚನೆಂಗೈದು ।
ವಿರಚಿಸಲ್ ಪಟ್ಟಾಭಿಷೇಕವಂ ಬೇಕಾದ ।
ಕರಿಹಯ ಸುರಥರತ್ನಮಾಲ್ಯಾದಿಗಳನೆಲ್ಲ ತರಿಸಿ ಸಂತೋಷವೆರಸಿ ॥
ಭರತನಂ ಕರೆದು ಪೇಳದರಯ್ಯ ಸುರನಾಥ ।
ಪೊರೆಯ ಸೇರಿದನಣ್ಣ ಚಿತ್ರಕೂಟದೊಳಿರ್ಪ ।
ಧೊರೆಯಿಲ್ಲದಿರೆ ರಾಷ್ಟ್ರಕುತ್ಪಾತ ಸಂಜನಿಪುದೆಂದ ನೃಪನೆಪ್ಪುದು ॥ (11)
ಕುಲಪರಂಪರೆಯಿಂದುದಿಸಿದ ರಾಜಧರ್ಮವಂ ।
ತೊಲಗಲೀಯದೆ ಪಟ್ಟದರಸನಿನಿಸಿ ಲೋಕವಂ ।
ನಲವಿಂದ ಪಾಲಿಸುವ ತಾಮಸಂಗೈಸಲ್ಲಮೆಂದೆಲ್ಲರೊರೆಯೆ ಕೇಳ ॥
ಕುಲವೃದ್ಧಮೊದಲಾದ ಬಂಧುಗಳ್ಗಂತೆಂದ ।
ನಲಘುಮತಿ ಪಿರಿಯ ರಾಘವನನುಸುತನದೇಳ್ಗೆ ।
ಗೊಲವೀಯ ಬೇಕಲ್ಲದನ್ಯರಿಂಗಳವಡದು ವಿಭವ ಕೊಡದತಿಕೀರ್ತಿಯಂ ॥ (12)
ಅರಸುತನ ಪಿರಿಯನಿಗೆ ಯಾಸೇವೆಯನುಜನಿಗೆ ।
ದೊರೆಮಬಾದಿಹುದೆಮ್ಮ ಗೋತ್ರಪಾರಂಪರೆಯ ।
ಚರಿತೆಯಂ ಕೇಳರ್ದು ಸನ್ಮಾರ್ಗಗತಿಯುಳದು ಪಟ್ಟವಂ ಕಟ್ಟಲೆಂದು ॥
ಪರಮಪ್ರೀತಿಯೊಳೊರೆದ ಚೆಲುಪಿಗೇನೆಂಬೆ ಬಿನ ।
ಕರವಂಕಸಚ್ಚರಿತೆಯಂ ವಿಾರಿ ನಡೆದರಿಂ ।
ಗುರುತರದ ಸುಖಮಹುದೆ ಬಗೆಯ ನೀವಂಯುದುದೆ ಕೌಶಲ್ಯನಿಲಯರತ್ತೆ ॥ (13)
ಇಂದಾನು ಪೋಗಿ ರಘುನಂದನನ ಚರಣವಂ ।
ಪೊಂದಿ ಮಾತೆಯ ದೆಸೆಯೊಳುದಿಸಿದಪರಾಧಶತಕ ।
ದಂದುಗವ ಪರಿಹರಿಸಿ ರಾಜ್ಯಮನೊಪ್ಪಗಿಸಿ ಸುಖದೊಳಹೆ ಸೇವೆವೆರಸಿ ॥
ಮುಂದೈದಲಖಿಳವನೆ ಗೋಚರಾದಿಗಳೆಲ್ಲ ।
ರೊಂದೊರೆಯಿ ಕೇಳ್ ನೆರೆದಿರ್ಪರೆಲ್ಲರು ಸುಖಾ ।
ನಂದಾಶ್ರುಗಳ ತುಳುಕಲೆಳಸಿದರ್ ಕಂಗಳೊಳಗಚ್ಚರಿಯದೇನೆಂಬೆನು ॥ (14)

ಬಳಲಿರುವ ಸಸ್ಯಾಳಿಗಮೃತಾಭಿಷೇಚನಂ ।
ಗೊಳಿಸಿ ಕಳಕಳಿಪಂತೆ ಭರತನಾಡಿದ ನುಡಿಗೆ ।
ತುಳುಕುವಾನಂದದಿಂದಖಿಳಪ್ರಜಾಪರಿವಾರಮೆಲ್ಲ ಹರ್ಷದಿ ನುಡಿದರು ॥
ನಳಿನಾಕ್ಷರಾಘವನನೀಪರಿಯು ಭಕ್ತಿ ನಿ ।
ನ್ನೊಳಗೆ ಸಂಭವಮಾದಕತದಿಂದ ಸಿರಿಲಕುಮಿ ।
ನಿಳಯಗೈದಿರಲಿ ನಿನ್ನರಮನೆಯೊಳನುದಿನಮುಮೆಂದು ಪರಸಿದರು ನಸುದಿ ॥ (15)

ಜನರ ಕಲಕಲಗಳಂ ನೋಡುತ್ತ ಭರತ ತಾಂ ।
ಬನಕೈದಲಭಿಲಾಷೆಯಿಂದಮಾರ್ಗವ ಬೇಗ ।
ಲನುಗೈಯವೇಳ್ಕೆನುತ ನೇಮಿಸಲ್ ಮಂತ್ರಿ ಜನರತಿವೇಗದಿಂದಲೈದಿ ॥
ವನಗೋಚರರ ನಿಪುಣಕಾರ್ಯರ್ಗನುಕಾರಿಗಳ ।
ದಿನಿಪಿನುದ್ಯೋಗಗಳ ಮಾಳ್ಪರಿಗೆ ನೇಮಿಸಿದ ।
ರಿನ ಬೇಳ್ದ ತೆರದೊಳಾರಾಮಮಾರ್ಗಾಂತರವ ಸಿಂಗರಿಪ್ಪುದೆನುತ ಮುದದಿ ॥ (16)

ಪಿಡಿದು ಸೂತ್ರವ ನೆಲನನೊಂಮಾಡಿಯುಂಗೈದು ।
ಕಡಿದುತರುಗುಲ್ಮಗಳ ಕಂಟಕೋದ್ವೃತ್ತಗಳ ।
ನೊಡನೆ ಪರಿಹರಿಸಿ ನಿಮ್ನೋನ್ನತಗಳಂ ಸಮತೆಗೆಯ್ದು ನೆಳಲಿಲ್ಲದೆಡೆಯ ॥
ನಡೆಗರದ ತರುಗಳಂ ನಿರ್ಮಿಸಿ ಲತಾವಿಗಳ ।
ಕಡಿದಲ್ಲಿ ಕಾಸಾರಪದ್ಮಾಕರಂಗಳಂ ।
ತಡೆಯದನುಗೈದುಭಯಪಾರ್ಶ್ವದೊಳ್ ತೋರಣಗಳಂ ರಚನೆಗೈದರಾಗ ॥ (17)

ಪನ್ನೀರ್ಗಳಂ ತಳಿದು ಧ್ವಜ ಪತಾಕೆಗಳೆತ್ತಿ ।
ಕನ್ನಡಿಯತೋರಣಗಳಂ ರಚಿಸಿ ಸುರ ಮಾರ್ಗ ।
ವೆನ್ನುವಂದದಿ ಸೊಗಸ ಬೀರಲಾಮಾರ್ಗಮಂ ಸಮತೆಗೈವುತ್ತಲಿರಲು ॥
ಚೆನ್ನಾಗಿನೆರೆದ ಸಭೆಯಂಕಳುಪಿ ಮನೆಗಳಿಗೆ ।
ತನ್ನನಿಳಯವಸಾರಿ ಶತ್ರುಘ್ನ ಸಹಿತಗಮ ।
ನೋನ್ನತೆಯ ನೆನವುತಂ ಪವಡಿಸಿದ ಭರತ ಸುಖ ನಿದ್ರೆಯಿಂದಾಲಯದೊಳು ॥ (18)

ಅರುಣೋದಯದ ಸಮಯದಲ್ಲಿ ಶ್ರುತಿಪಾಠಕರ್ ।
ವರಶಂಖದುಂದುಭಿಮೃದಂಗಾದಿವಾದ್ಯಗಳ ।
ಪಂಪರಿಯ ಗಾಯನಾವಳಿಗಳ ನೆಸಗಲ್ ಧ್ವನಿಯು ಭರಿತಮಾಗಲ್ ಗೃಹದೊಳು ॥
ಭರತ ಕೇಳ್ದಿಚ್ಚರಂಗೊಂಡು ಗಾನಾದಿಗಳ ।
ಪರಿಹರಿಸುತರಸಲ್ಲ ತಾನೆನ್ನು ತೆಲ್ಲರೊಡನೊರೆದು ।
ಪೊರಟೈತಂದು ಶತ್ರುಘ್ನನೊಡನೆಂದ ನಿಜಮನೋವೃತ್ತಿಯನ್ನು ॥ (19)

ನೆಲಸಿರ್ಪ ಪರ್ಯಂತಮುಪಕೀರ್ತಿ ಯಡಸುವಂ ।
ತಲಘುಪ್ರಯತ್ನಮಂಗೈದು ನಿರ್ಲಜ್ಜೆಯಿಂ ।
ಲಲನೆಯೊಳರ್ಪಳಾಕೈಕೆ ಪೊಲಗೆಲಸಕೆನ್ನೆನೆಂಬೆನೇಂಗೈದಪೆಂ ॥
ಕುಲವಿನಾಶನಕೃತ್ಯಮಡಸಿತೆಂದಳುತಿರಲ್ ।
ಕೆಲಬಲದ ಶುದ್ಧಾಂತಜನರೆಲ್ಲ ಶೋಕಸಂ ।
ಕಲಿತಮಾನಸರಾಗಿ ಪಲುಬಿದರ್ ಮಾತ್ಮಾತನೊಡನೇನ ಪೇಳ್ವೆ ಪರಿಯ ॥ (20)

ಅನಿತರೊಳ್ ಭೂಸುರರ ಬಾಹುಜವಣಿಗ್ಜನರ ।
ಘನರಾಜ ಪುತ್ರರೊಳ್ ಬೆರದಾವಸಿಷ್ಠಬಂ ।
ದನುನಯದಿ ಚಿತ್ರಚಾವಡಿಯಲ್ಲಿ ಮಂಡಿಸಿದ ಪಟ್ಟಾಭಿಷೇಕಗೈವೆ ॥
ನೆರುತಖಿಳವಸ್ತುಗಳ ನೆರಹಿ ಸಂಭ್ರಮದಿಂದ ।
ಜನನಾಥ ಮಂತ್ರಿಗಳ ಕರೆಸಿ ಪೇಳದ ಮುನಿಯು ।
ಮನದಿರವ ಕಂಡು ಕಡುಗೋಪದಿಂ ಭರತನಂದಳಲಿದನದೇವೇಳ್ವೆನು ॥ (21)

ಮರುಗುತಿಹ ಭರತನಂ ನೋಡಿ ಮುನಿಯಿಂತೆಂದ ।
ದೊರೆತನವ ನಿನಗಿತ್ತು ಗಮಿಸಿದಂ ದಶರಥಂ ।
ಸುರನಗರದತ್ತ; ಶ್ರೀರಾಮ ಪಿತೃವಾಕ್ಯವಿಡಿದೈದಿದಂ ವಿಪಿನದೆಡೆಗೆ ॥
ಸುರರಾಜನಾಧಿಪತ್ಯಕೆ ಮಿಗಲ್ ನೋಡೆ ಸಭೆ ।
ವರಸುಧರ್ಮಾಧಿಕ್ಯತೆದಕೊಡೆಯನಾಗಿ ನೀಂ ।
ಪೊರೆವುದೆಲ್ಲರನೆನುತ ಗುರು ನಿರೂಪಿಸೆ ಭರತ ಕೋಪದಿಂದಿಂತೆಂದನು ॥ (22)

ಎಲ್ಲ ಧರ್ಮವ ತಿಳದ ಸರ್ವಜ್ಞರೀಪರಿಯು ।
ಸೊಲ್ಲಿಸಿದರಿದಕುತ್ತರವ ನೀವರೆನಗಳವೆ ।
ಬಲ್ಲವಿಕೆಯೇನಾಯ್ತು ಸಗರರಘುವಜಮಹಾರಾಜರಂಪಥಿಕತರದ ॥
ಬಲ್ಲಿದನೆ ಜೇಷ್ಠಧರ್ಮಿಷ್ಠರಗ್ಗಳಪಟ್ಟ ।
ದಲ್ಲಿರ್ದನರುಹನಲ್ಲದೆ ನಾಂ ಸಮರ್ಥನೇ ।
ಸೊಲ್ಲಾಡಲಾಂ ಪತಿತ ಕುಲಘಾಂಸನನೆನಿಪ್ಪೆನಲ್ಲದಾಂ ಸುಖಿಯಪ್ಪೆನೇ ॥ (23)

ಪಿರಿಯರ್ ಸ್ವತಂತ್ರರೇನೆಸಗಿದೊಡವೃತ್ತಮಂ ।
ತೆರದಾದೊಡಂ ಧರ್ಮಮಾರ್ಗಮಂ ಬಿಟ್ಟರವ ।
ರುರುತರದಪಾತಕಿಗಳಲ್ಲದಾರುಂ ಮೆಚ್ಚರದರಿಂದಲಾನೆ ಪೋಗಿ ॥
ಚರಣಕಾನತನಾಗಿ ಪಿತನಿತ್ತ ರಾಜ್ಯ ಮಂ ।
ಹರುಷದಿಂದೊಪ್ಪಗಿಸಿ ಪಾದುಕದ ಚಾಕರಿಯು ।
ಲಿರುವೆ ರಾಮನ ಪಾರ್ಶ್ವದಲ್ಲಾನು ಧೊರೆತನಕೆ ಯೋಗ್ಯನಲ್ಲೆಂದು ನುಡಿದಂ ॥ [24)

ಮಾತೆಯೆಸಗಿದ ಪಾಪಮೆನಗಿಲ್ಲ ಶ್ರೀರಾಮ ।
ತಾತನಿಂದಗ್ಗಳನೆನುತ್ತ ತಿಳದುಂ ಪೋಪ ।
ಮಾತ ನಿಶ್ಚಯಗೈದು ಮಾರ್ಗಮಂ ಸಮಗೈಯಕಳುಪಿರ್ದ ಧೀಮಂತರಾ ॥
ಯಾತ್ರೆಪರರವಣೆ ಯೆನಗೆ ಕಸವಂಪೊರುವ ।
ಜಾತಿಗೆಂದಿಗು ಮಹೋನ್ನತಿಕೆ ದೊರೆವುದೆ ಬರಿದೆ ।
ಯಾತಕೆನ್ನಂ ಬನ್ನಗೊಳಪಿರಿದನುಳದಿರ್ಪುದುಚಿತಮೆಂದೊರೆದು ಬಳಿಕ ॥ (25)

ಕರೆದು ಚರರೊಳ್ ಪೇಳ್ದ ಚತುರಂಗಬಲಸಹಿತ ।
ಬರಲಿ ಸೇನಾನಿಗಳೆನುತ್ತ ನೇಮಿಸಿ ಸೂತ ।
ಗೊರದ ಭರತಂ ತನ್ನ ರಥವ ಬೇಗದಿ ತಂಸವೇಳ್ಕೆನಲ್ ಜವದಿಪೋಗಿ ॥
ತುರಗಂಗಳಂ ಪೂಡಿ ತ್ವರಿತದಿಂ ಸಿಂಗರಿಸಿ ।
ಧೊರೆಯಮುಂಗಡೆಯ ನಿಲಿಸಲ್ ನೋಡಿ ಸಂತಸದಿ ।
ಪರಮಋಷಿಗಳ್ ನೆರೆದ ಜನರೆಲ್ಲ ತಮ್ಮೊಳಗೆ ತಾವೆ ವಿಸ್ಮಿತರಾದರು ॥ (26)

ಕರಕಲಿತರಾಜ್ಯಾಧಿಪತ್ಯಭೋಗವನುಳಿದು ।
ಪರವ ಚಿಂತಿಸಿ ರಾಮನಂ ಕಂಡು ರಾಜ್ಯಮಂ ।
ಚರಣಕರ್ಪಿಸಿ ದಾಸ್ಯದಿಂದಿರ್ಪೆನೆಂದೆಳಸಿದೀ ಬುದ್ಧಿಯತಿಶಯವನು ॥
ಧರರಿಂದ ಪೊಗಳ ತೀರುವುದೆ ನಿರ್ಮಲವಾದ ।
ಕರಣವೈರಾಗ್ಯನಿಧಿಯೊ ಭರತನೆಂದಾಗ ।
ಪರಮಋಷಿಗಳ್ ಸುಮನ ಸಂತೋಷದಿಂದ ನಿಜನಿಳಯಗಳ್ಗೈದಲಿತ್ತ ॥ (27)

ರಾಮಚಂದ್ರನ ಕರೆಯಲೈದುವಂ ಭರತನೆಂ ।
ದಾ ಮಹಾಪಟ್ಟಣದ ನಿಖಿಲಪ್ರಜೆಪರಿವಾರ ।
ಸೌಮಂತ್ರಮುಖ್ಯರೀವಾರ್ತೆಯಂ ಕೇಳುತ್ತ ಹರುಷರಸಮಂ ತುಳುಕುತ ॥
ಸಾಮಜಂ ಘೋಟಕಂ ಶಕಟ ಶಿಬಿಕಾದಿಸ್ವ ।
ಧೀಮವಾಹನಗಳನಲಂಕರಿಸಿ ಸಂತಸದ ।
ಲಾ ಮಹೋತ್ಸಾಹಮಂ ನಿಟ್ಟಿಪಫಲಾಪೇಕ್ಷೆಯಿಂ ಪೊರಪಾಳೆಯಂಗೈದರು ॥ (28)

ಪ್ರೀತಿಯಿಂದಣ್ಣನಂ ಕರತರಾ ಪೊಡೈತಹ ಮ ।
ಹಾತಿಶಯವಿಭವಮಂ ಕೌಸಲ್ಯೆ ಲಕ್ಷ್ಮಣನ ।
ಮಾತೆ ಮುಂತಾದವರ್ ಕೇಳ ಸಂತಸದಿಂದಲೊಸನ್ಯೆದಲಿಚ್ಛೆಗೈದ ॥
ಮಾತ ಕೇಳುತ ಕೈಕೆ ಮನದ ಹರ್ಷದಿ ಪೋಗಿ ।
ಖಾತಕವನೀಗಲೆಂದಖಿಲಸನ್ನಾಹಸಂ ।
ಪ್ರೀತಳೆನಿಸಲ್ಕಮಿತನಾರೀಕದಂಬಕಂ ಪೊರಮಟ್ಟುದೇಪೇಳ್ವೆನು ॥ (29)

ಅಂತಃಪುರಾಂಗನೆಯರಮಿತಪ್ರಜೆಪರಿವಾರ ।
ಸಂತರು ಯಾಯಜೂಕಾದಿಗಳ್ ಪರಮಪ್ರಿಯು ।
ಪಾಂತು ಮುಂದೈದಲೆಂದತಿಹರುಷಗೊಳುತ್ತೈದಲಾಗ ಭರತಂ ನಲಿವುತ ॥
ಮುಂತೆ ಮಾತೆಯರನೊಡಗೊಂಡು ಶತ್ರುಘ್ನಸಹ ।
ಚಿಂತಿತಮನೋರಥಂ ಫಲಮಾದುದೆಂದರಿತು ।
ಸ್ವಾಂತಾನುರಾಗದಿಂ ಚತುರಂಗ ಲವೆರಸಿ ನಡೆದನಣ್ಣನ ನೋಳ್ಪಡೆ ॥ (30)

ಪೊಡವಿ ಬೆಸಲಾದಂತೆ ಪಡೆನಡೆಯಲುಂ ಮುಂತೆ ।
ತುಡುಕಲಭ್ರವ ರಜೋಭರ ದೇವಗಂಗೆ ಕಾ ।
ಲ್ಪಡೆಯೆನಿಸಲಮರತತಿತಲ್ಲಣಂ ಗೊಳುತಿರಲ್ ಧ್ವಜಪಟದ ಬಿರುಗಾಳಿಯು ॥
ಪೊಡೆಯೆ ಸಗ್ಗದೊಳುಳ್ಳ ನಾರೀಜನಂ ಪತಿಗ ।
ಳೆಡೆವಿಡದೆ ತಳ್ಕೈಸಲದು ಪ್ರಳಯಕಾಲಮಂ ।
ತುಡುಕುವ ಮಹಾನಿಲನೊ ಎನೆ ತೊರ್ವರೊರ್ವರುಂ ಕಂಗೆಟ್ಟು ಚಿಂತಿಸಿದರು ॥ (31)

ಕರಿಗಳೊಂಭತ್ತುಸಾಸಿರ ತೇರ್ಗಳರುವತ್ತು ।
ತುರಗ ಲಕ್ಕಂ ಲೆಕ್ಕವಿಲ್ಲ ಭಟಸಂದೋಹ ।
ಕರರೆ ಮುಗುಳುಳದ ಜನಮಿನ್ನೆಂತೊ ಪದಹತಿಗೆ ಭೂಕಂಪನಂಗೊಳುತಿರೆ ॥
ಅರಸನೆಡಬಲದೊಳಗೆ ಮಂತ್ರಿಗಳ್ ಋಷಿನಿವಹ ।
ಪರಿವೇಷ್ಟನಂಗೈದು ಶ್ರೀರಾಮನಂ ಕಾಣ್ಬ ।
ಹರುಷದಿಂದಾತನ ಗುಣಂಗಳಂ ನೆನೆನೆನೆದು ಸಲ್ಲಾಪಗೈದಿರ್ದರು ॥ (32)

ಗತಿವಿಡಿದು ಜವದಿಂದ ಬೇಗ ರಾಮನ ನೋಳ್ಪ ।
ರತಿಶಯದ ಜನರಹಂಪ್ರೂರ್ವಮೆನುತ್ತೈದಿ ಬರೆ ।
ಚತುರಂಗಬಲಮವರನನುಸರಿಸಿ ಹರ್ಷದಿಂ ನಡೆಯಲಾ ಮುಂಗಡೆಯೊಳು ॥
ಕತಿಪಯದಿನಂಗಳೊಳ್ ಬಂದು ಗಂಗಾತಟ ।
ಕ್ಷಿತಿಯುಸಾರಲ್ ಕಂಡು ಭರತ ಮಂತ್ರಿಗಳೊಡನೆ ।
ಹಿತದಿಂದಲೊರೆದನಿಂ ಜಿನದಿನಂ ಬಲಮಿಲ್ಲಿ ನಿಂದು ವಿಶ್ರಮಿಸಲೆನುತ ॥ (33)
ವೇಳೆ ಸುರನದಿಯೊಳವಗಾಹನಂಗೈದು ತ ।
ನ್ನಾಳಮೊಡೆಯನ ನೆನೆದು ಪಿತೃತರ್ಪಣಾದಿಗಳ ।
ತಾಳದಿತ್ತಖಿಲಭೂಸುರರ ತೋಷಣೆಗೈದು ಭರತ ಕುಳ್ಳಿರಲಿತ್ತಲು ॥
ಕೋಲಾಹಳಧ್ವನಿಯ ಕೇಳ ಗುಹ ಚಿಂತೆಯಿಂ ।
ತಾಳ ನಿಜಬಲಮೆಲ್ಲಮಂ ನೆರೆತ್ತಗೈದು ಮಗು ।
ಳಾಳೋಚನಂಗೈವನೀ ಮಹಾಸೇನೆ ಯೇಂಕಾರಣದೊಳೈದಿತೆನುತ ॥ (34)
ತೋರಾಯಬಲಮಿಲ್ಲಿಗೈತಪ್ಪ ಬಿಂದಿದೇಂ ।
ಕಾರಣವೊ ಮತ್ತಾರ ದೊರೆಯಿದಾಬ್ಬಲಮೆಂದು ।
ಹೇರಾಳಚಿಂತೆಯಿಂ ನಿಷಾದಾಧಿಪತಿ ತನ್ನ ಜನ ವೆರದು ನೋಡುತಿರಲು ॥
ತೋರಲಾಕ್ಷಣ ಕೋವಿದಾರಕೇತನ ರಿಪ್ರವಿ ।
ದಾರಣೋದ್ಧತಸತ್ವದಿಂದ ಕಾಣುತ ಗುಹನು ।
ದಾರಶಕ್ತಿಯೊಳಖಿಲಬಾಂಧವರನೆಲ್ಲರಂ ಕರೆದು ಸೂಚಿಸಿದನೊಂದು ॥ (35)
ದುರುಳತನದಿಂ ರಾಮನಂ ವಿಪಿನದೆಡೆಗಟ್ಟಿ ।
ದೊರೆತನವನಾಕ್ರಮಿಸಿ ನಿಷ್ಕಂಟಕಂ ಗೈವ ।
ಪರಿಯು ತನ್ನೊಳ್ ತಿಳದು ನೆರಹಿ ಬಲಮಂ ಜವದೊಳೈಸಿ ರಘುನಂದನನನು ॥
ಸೆರೆವಿಡಿಮುಕೊಂಡೊಯ್ವ ದುರ್ಬುದ್ಧಿಯಿಂ ಬಂದ ।
ಪರಿಯಸಾಗಿ ತೋರುತಿದೆ ರಾಮನೆ ಸಹಾಯಮೆಂ ।
ದರಿತೆಮ್ಮ ತಂದಿಡುವನೀ ಭರತನತಿಕ್ರೂರ ಕೃಪಣ ಕುಲಘಾತಕನಲೆ ॥ (36)
ಅರಸುತನಮಂ ಬಿಟ್ಟು ಮುನಿವೃತ್ತಿಗಳವಟ್ಟು ।
ವರವಿಪಿನದೊಳಗಿರ್ಪರಿದ ನೋಡಿ ತಾಳದಲೆ ।
ಹುರಿಗೊಂಡು ಬಂದಿರ್ಪ ಭರತ ನಿಜಬಲಗೂಡಿ ನದಿಯನುತ್ತರಿಸದಂತೆ ॥
ಶರಚಾಪಗಳ ಪಿಡಿದು ಶರದೊತ್ತನಾಶ್ರೈಸಿ ।
ಪರಿಪರಿಯುಪಾಯಗಳನೆಸಗಿ ಬಲಮಂ ಮುಂದು ।
ಸೆರೆವಿಡಿಯವೇಳ್ಕು ಭರತನನೆಂದು ನಿಜಬಲಕೆ ಸೇಮಿಸುತ ಮಗುಳೆಂದನು ॥ (37)
ಇನಮಿತ್ರಬಾಂಧವಂ ಪಿರಿಯಗುರುದೇವತಾ ।
ತ್ಮನುರಾಮನೆಮಗೆ ಮತ್ತಾತಗೋಸುಗಮೆಮ್ಮ ।
ತನುಧನಪ್ರಾಣಂಗಳೊಪ್ಪಿಗಿಸು ನಿಷ್ಠೆಯಿಂದಿರ್ಪುದೇ ನನ್ನಿ ಯೆನುತ ॥
ಮನವೊಲಿದು ಬಾಂಧವರೊಳೊರೆದು ಮತ್ತಾತನೆಡೆ ।
ಗನುವಿಂದ ತೋರ್ಪನಾಗೈದಿ ತದ್ವೃತ್ತಾಂತ ।
ವನು ತಿಳದು ಬಹೆನೆನುತ ಮಧುಮುಜ್ಜಮಾಂಸಗಳಗಳಸಿದಂ ಕಪ್ಪಕೆನುತ ॥ (38)

ಕಪ್ಪಮಂ ಪಿಡಿದು ನೂರ್ವರ್ ವೆರೆದು ಸಮುಬಕ್ಕೆ ।
ತಪ್ಪ ಗುಹನಂ ದೂರದೊಳ್ ಕಂಡು ಭರತ ಹಿತ ।
ಮಪ್ಪ ಮಂತ್ರಿಗಳೊಡನೆ ಸೂಚಿಸಿದ ನಿವನಣ್ಣಗಾಪ್ತನೈತರುವನೆನುತ ॥
ಕಪ್ಪದಾವೃತ್ತಾಂತಮೆಲ್ಲಮಂ ಪೇಳ್ವೆನೆನು ।
ತಿಪ್ಪನ್ನ ಕರವಿಡಿದು ಬಂದು ಕಾಣಿಕೆಗೊಟ್ಟ ।
ರಪ್ಪಿನಿಂ ಪ್ರೀತಿಯಿಂ ಕುಳ್ಳಿರಿಸಿ ಕುಶಲವಂ ಕೇಳ್ದವಂ ಭರತ ನೊಲಿದು ॥ (39)

ಕರವಿಡಿದು ಕುಳ್ಳಿರಿಸಿ ಯುಪಚರಿಸುತಿಹ ಭರತ ।
ನಿರವ ನಿಟ್ಟಿಸಿ ಸುಮಂತ್ರಂ ನುಡಿದ ದೇವನಿವ ।
ಪರಮಪ್ರೀತಂ ರಾಮಚಂದ್ರಮನಿಗಿವ ಸುಮಿತ್ರಾತನಯಗಧಿಕಮತ್ತೆ ॥
ವರಧನುಷ್ಪಾಣಿಗಳನೇಕಮಿಹರೀ ವಿಪಿನ ।
ಚರರೆಲ್ಲ ದಾಸರೆನಿಸಿರ್ಪರೀಗುಹನಿಗೆಂ ।
ದೊರೆವನಿತರೊಳಗೆದ್ದು ಕರಗಳಂ ಮುಗಿದು ನಿಜಭಕ್ತಿಯಿಂ ಶಬರ ನುಡಿವಂ ॥ [(40)

ದೇವ ದಯವಿಂದೆಮ್ಮ ನಿಲಯಕೈತಂದುದಿದು ।
ಪಾವನಿತ್ರಮಾದುದಖಿಲಾವನಿ ಮದೀಯಕುಲ ।
ಪಾವನಕೆ ಪಾವನಮೆನಿಪ್ಪಂತೆ ಕೃತಪುಣ್ಯಫಲಮಿಂದು ಫಲಿಸಿದಂತೆ ॥
ಭಾವನೆಯನಾಂತುದೆನ್ನಯ ಚಿತ್ತದಧಿಪನಂ ।
ಭಾವನೆಯುಕ್ಕೈಕೊಂಡು ಪೊರೆವುದೆಂದೆರಗುತಂ ।
ಕೋವಿದಂ ಬಿನ್ನವಿಸೆ ನಸುನಗುತಲಿಂತೆಂದ ಭರತನತಿವಿನಯದಿಂದ ॥ (41)

ಬಲಸಹಿತಲೆಮಗೆ ಭೋಜನಗೈಸಲಿಚ್ಛೈಪೆ ।
ಯಲಘುಮತಿ ರಾಮ ನಿನ್ನಿಂ ಪೂಜೆಗೊಂಡೈದಿ ।
ಲಲಿತದಿಂ ಚಿತ್ರಕೂಟಕೆ ನಡೆದನೆನ್ನುವೀ ವೃತ್ತಂ ಸುಮಂತ್ರನಿಂದೆ ॥
ಪಲಬಗೆಯೊಳಂ ಕೇಳ ತುಷ್ಟರಾದೆವು ವಿಪಿನ ।
ದೊಲವರಿತು ಸೇನೆಯಂ ಭಾಗೀರಥಿಯ ಕಳೆವ ।
ಪೊಲಬ ತೋರುವುದೆನಲ್ ನಸುನಗುತ ಕೈಮುಗಿವುತಿಂತೆಂದ ಶಬರ ಮಣಿದು ॥ [(42)

ನೆರೆದಿದೆಕೊಸೇನೆ ಗಣಿಸಲ್ ಬಾರದಂದದಿಂ ।
ಕರಿಹಯರಥಂಗಳಂದಮಿತಭೀಷಣಮೆನಿಸಿ ।
ಪರಿಪರಿಯಸನ್ನಾಹದಿಂ ದೇವರೈತಂದ ಬಗೆಯೆನ್ನ ಮನಕೆ ಭಯಮಂ ॥
ಕರೆವುತಿದೆ ಮತ್ತೀಸುಪಾಯ ಭವದೀಯ ಸುಖ ।
ಕರಚಿತ್ತ ನೆನದಿಹುದೊ ನಾಂ ತಿಳಯೆನೆಂದು ಗುಹ ।
ನೊರೆಯೆ ಭರತಂ ಕೇಳ ಮೃದುಮಧುರವಾಣಿಯಿಂ ಮತ್ತಾತಗಿಂತೆಂದನು ॥ (43)

ಕಲುಷಹೃದಯರ ನೋಡಿ ಶಂಕಿಸುವ ಮಾಳ್ಕೆಯಿಂ ।
ದುಳಿವ ಬೆಸನೆನ್ನಮನ ಕಂಡಿಹುದು ಸತ್ಯಸಂ ।
ಕಲಿತಭಾಷೆಯನುಸಿರ್ ನಿಷಾದಾಧಿಪತಿ ಕೇಳ್ ಬೆಪ್ಪನಿಂದಧಿಕಮೆನುತ ॥
ಕುಲಪರಂಪರೆಯ ಸಚ್ಚರಿತಗಳ ನೆಸೆದು ರಘು ।
ತಿಲಕನಂ ಕರೆತರಲ್ಕೈದುವೆಂ ಸತ್ಯದಿಂ ।
ಚಲಿಸದೆನ್ನಯ ಮನಂ ಗುರುವಿನಂಘ್ರಿಗಳಾಣೆ ಧರ್ಮಮಂ ಮಾಣೆನನಘ॥ (44)

ಎನುತನಿರ್ಮತ್ಸರದೊಳೊರೆದ ಭರತನ ಚಿತ್ತ ।
ದನುವ ನಿಚ್ಚೈಸಿ ಗುಹಂ ಸಂತೋಷವುಯನೆನಿಸಿ ।
ಜನನಾಥ ನೀಂ ಧನ್ಯ ಮಾನ್ಯನೀ ಜಗತಿಯೊಳು ಪಾಸಟಿಯನಿಡಲಪ್ಪುದೆ ॥
ತನಗೆ ತಾನೈತಂದ ರಾಜ್ಯಮಂ ಬಿಟ್ಟು ಕಾ ।
ನನಕೈದಿದಣ್ಣನಂ ಕರೆತರುವರೈ ತಂದೆ ।
ವನಜಸಖ ಶಶಿಯಿರ್ಪತನಕ ನಿನ್ನಯ ಕೀರ್ತಿ ಬೆಳಗಿತಲೆ ಮೂಲೋಕದಿ ॥ (45)
ಚಿತ್ತನಿರ್ಮಲತೆ ಸಾಧುತ್ವ ಶಮೆ ದಮೆ ಕ್ಷಾಂತಿ ।
ಯುತ್ತಮದ ಮತಿಗೆ ನೀನೇ ನಿಲಯಮಲ್ತೆ ಮಗು ।
ಳುತ್ತಮರು ನಿನ್ನಿಂದಲಾರುಂಟು ಮೂಜಗದೊಳರಸ ನೃಪಕುಲರತ್ನವೆ ॥
ಬಿತ್ತರಿಸಲೆನಗಳವೆ ಭವದೀಯಗುಣವ ಶರ ।
ಣೋತ್ತಮನಚರಣದರ್ಶನದಿಂದಲಾಂ ಸುಕೃತ ।
ವೆತ್ತೆನೆನುತಾಗಲಾನಂದಮಯನಾಗುತ್ತ ನುತಿಸಿದಂ ಪರಿಪರಿಯೊಳು ॥ (46)
ನಾವಿಕೋತ್ತಮಭರತೀ ಪರಿಯು ಸಲ್ಲಾಪ ।
ಭಾವನೆಯೊಳರುವ ವಾರ್ತೆಯನು ತ್ವರಕೈದಿ ।
ಈವಿಯಿಂದುಸಿರಿ ಬಹೆನೆನುತ ರವಿ ಪಡುಗಡಲೊಳಿಳಿಯೆ ಸಂಧ್ಯಾದಿಗಳನು ॥
ಸಾವಧಾನದಿ ವಿರಚಿಸಿ ಶತ್ರುಘ್ನ ಸಹಿತ ನಿಜ ।
ದೇವತಾರಾಧನಂಗೈದು ಪವಡಿಸಲೈದಿ ।
ಶ್ರೀವಧೂರಮಣ ಶ್ರೀರಾಮಪುರದೆರೆಯನಂ ಧ್ಯಾನಿಸಿದ ಭರತ ಮುದದಿ ॥ (47)

॥ ಸಂಧಿ 26 ಪದ 1166 ॥

## ಇಪ್ಪತ್ತೇಳನೆಯ ಸಂಧಿ

ಸೂಚನೆ ॥ ಶೃಂಗಿವೇರಪುರಾಧಿನಾಥನುಪಚರಣೆಗಳ ।
ಭಂಗುರ ಸ್ನೇಹದಿಂದಿರುಳಿರ್ದು ಬ್ರಹ್ಮಋಷಿ ।
ಪುಂಗವಭರದ್ವಾಜರಾಶ್ರಮಕ್ಕೈತಂದ ನಿಜಸೇನೆಸಹಿತ ಭರತಂ ॥
ಕೇಳದ್ವಿಜಾತೆ ರಘುವೀರನಂಘ್ರಿಯ ನೆನೆದು ।
ತಾಳದುರುಚಿಂತೆಯಿಂ ತನು ಬೆಮರಿ ಬೆಂಡಾಗು ।
ತಾಳೋಚಿಸಂಗೈದನುತ್ತಮೋತ್ತಮಗುಣಾಕದಂಬಕಗಳಂ ನೆನೆವುತೆ ॥
ಖೂಳಮಾತಾಕೃತ್ಯ ಕುಲದ ಸಚ್ಚರಿತೆಯಂ ।
ಜಾಳಗೊಳಿಸಿದುದೇನ ಪೇಳ್ವುದೇನಳಲುತಿರೆ ।
ಕೇಳು ಮೃದುತರನುಡಿಗಳಂ ಗುಹನುಪಚರಿಸುತಿಂತೆಂದ ವಿನಯದಿಂದ ॥ (1)
ಸೂತನೊಡವೆರೆದು ಸೀತಾತೃತೀಯಂ ರಾಮ ।
ನೀತಾಣಕೈತಂದರಾಂ ಬಂದು ವಂದಿಸುತ ।
ಪ್ರೊತವಸ್ತ್ರಾಂಸಾದಿಗಳ ಕರವಿಡಿದು ಧನಧಾನ್ಯಸಿರಿರಾಜ್ಯತನುಗಳನ್ನು ॥
ಪ್ರೀತಿಯಿಂದೊಪ್ಪಿಗಿಸೆ ಪಿತುರಾಜ್ಞೆಯಿಂದ ವನ ।
ವ್ರಾತಂಗಳೊಚ್ಚರಿಸ ವೇಳ್ಪುಕವಿವು ನಮ್ಮಟಿವೆ ।
ನೀತಮೆನಿಸಲ್ ನಿನೆಯ ನೊಂದುನೆಲೆಯಂ ತೋರ್ಪುದೆನುತಲಾಜ್ಞಾಪಿಸಿದರು ॥ (2)

ಗುರು ದೈವ ಪ್ರಾಣ ಸಖ ದೊರೆ ಯೆನಗೆ ರಘುವೀರ ।
ಚರಣಂಗಳಿಗೆ ಶರೀರವನಿತ್ತು ಸತ್ಕೀರ್ತಿ ।
ವೆರೆದಪೆನೆನುತ್ತಾವ ಪರಿಯಿಂದಲುಪಚರಿಸೆ ತೃಣಕೊಡಂಬಡದೆ ಜಲವಾ ॥
ಕರದಿಂದ ಪ್ರಾಶನಂಗೈದೈದುದಿಂಗುದಿಯು ।
ತರುನೆಳಲೊಳೆಳೆದಳಿರ ಪಾಸಿಕೆಯ ಮಧ್ಯದೊಳು ।
ಧರಣಿಜಾತೆಸಮೇತ ಮಂಡಿಸಿದರೇನೆಂಬೆನಚ್ಚರಿಯು ಬಿನ್ನಣವನು ॥ (3)
ದೂರದೊಳ್ ಲಕ್ಷ್ಮಣಂ ಶರಚಾಪಗಳ ಪಿಡಿದು ।
ದಾರಭಕ್ತಿಯೊಳು ಜಾಗ್ರತೆಯಿಂದಲಿರೆ ಕಂಡೆ ।
ಪಾರಚಿಂತೆಯೊಳಾನು ಪೊರೆಗೈದಿ ಪ್ರೀತಿಯಿಂ ಮಾರ್ಜಿಸುತಿಂತೆಂದನು ॥
ವೀರಧರಣೀಧರೋಚಿತ ದಿವ್ಯಶಯ್ಯೆಗಳ ।
ತೋರಭೂಷಣ ಪಕ್ವಫಲಗಳಂಗೀಕರಿಸ ।
ದಾರಣ್ಯವಾಸಿಗಳ ಪರಿಯಾಸನುಕರಿಸಿದಂ ರಘುನಾಥನೇನೆಂಬೆನು ॥ (4)
ಪ್ರೀತಿಯಿಂದಾಂ ತಂದ ವಸ್ತುಗಳನಿನಿತಾಗೆ ।
ಜಾತುಚಿತು ಸುಕೃತಕರಮಲ್ಲ ಮಾದುದು ಪ್ರಿಯಾದಿ ।
ತಾತ ಮತ್ತಿವನೆಲ್ಲ ಕೈಕೊಂಡು ಮೃದುತಲ್ಪದೊಳು ಸುಖದಿ ನಿದ್ರಿಸುವುದು ॥
ಜ್ಞಾತಿಜನರೊಡವೆರೆದು ಜಾಗ್ರತೆಯೊಳಹೆ ನಾನು ।
ಈತಾಣದಿರವೆನಗೆ ತಿಳಿದಪುದು ಭಯಮಿಲ್ಲ ।
ದೇತಕಾಲಸ್ಯಗೈದಪೆಯೆನುತಲೆನೊರೆಯೆ ಸೌಮಿತ್ರಿ ನಗುತೆಂದನು ॥ (5)
ನೆಲದೊಳಗೆ ಪಾಮರರು ಕೇಳುತಿಹಗಾದೆಯಂ ।
ತಲೆಯುಳಿದು ಮೊಳಕಾಲ ಪೂಜಿಸುವರೆಂತೆಂಬ ।
ಪೊಲಬ ನೀನನುಕರಿಸಿ ರಘುವೀರ ಕಷ್ಟದೊಳಗಿಹನೀನು ಸುಖಿಪುದೆನುತ ॥
ಉಲಿವೆ ಯಾಚ್ಚರಿಯಲ್ತೆ ಜೀವಮುಳ್ಳೊಡೆ ದೇಹ ।
ಲಲಿತರಮ್ಯದಿ ತೋರ್ಪುದಲ್ಲದಿರೆ ಲೋಕಂಗೆ ।
ಚೆಲುವೆನಿಸಿ ತೋರ್ದಪುದೆ ಪೂರ್ವಜನ ಸುಖವೆಮಗೆ ಸುಖಮಲ್ಲದಿತರಮುಂಟೆ ॥
ಧರಣಿಜಾತೆ ಸಮೇತ ತ್ರೈಲೋಕ್ಯನಾಯಕಂ । [(6)
ಧರೆಯ ಪಾಲಿಕೆಯೊಳಿರಲದ ನೋಡುತಾನೆಂತು ।
ಪರಿಯಂಕಶಯನಮಂ ಗೈದು ನಿದ್ರಿಪೆ ನಾವವಸ್ತುಗಳ ನೋಡಿ ನಲಿವೆ ॥
ಇರವೇತಕೆನ್ನ ಶರೀರದೊಳಗೆಂದು ಸಂ ।
ಭರಿತಭಕ್ತಿಯೊಳು ಸಂಕಟಗೊಳುವುದಾಂ ಕಂಡು ।
ಪೆರೆಸಾರಿ ಜ್ಞಾತಿಗಳ್ಸಹ ರಾತ್ರಿ ಜಾಗ್ರತೆಯಲಿದ್ದೆ ಚಿಂತಿಸುತ ಮನದಿ ॥ (7)
ಅರುವತ್ತುಸಾಸಿರಬ್ದಂಗಳೊಳ್ ತಪವಿರ್ದು ।
ತರಳನೆನುತಲಿ ಪರಮಪುರುಷನಂ ಪೆತ್ತು ಸಂ ।
ಭ್ರಂತಹರ್ಷವನುಂಬ ಸಮಯದಿ ದುರವಸ್ಥೆ ಘಟಿಸಲರಸೆಂತಿರುವನು ॥
ಅರಸನಾಯಾಸಮಂ ಕಂಡು ಕೌಸಲ್ಯೆಯುಂ ।
ತಿರುವಳು ಸುಮಿತ್ರೆ ದುರ್ದೆಸೆ ಕಾಲಕೆ ಬಂದುಡಸಿ ।
ತರರೆ ವಿಧಿಕೃತಮೆಂದು ತಲ್ಲಣಿಸಿ ಮರುಗಿದಂ ನೆನೆನೆನೆದು ಕಾರ್ಯದಿರವ ॥ (8)

ಅಂದಿನಿರುಳಿನ ಬಗೆಯದೆಂತೊರೆಯಲಳವಪ್ಪು ।
ದಂದು ಗುಹ ನುಡಿಯಲಾವಜಾತನಾಲಿಸಿ ಭರತ ।
ಕಂದಿದಾನನದಿಂದಲಿಂತೆಂದ ನೆಲೆಸಿಬನೆ ಶ್ರೀರಾಮನಾ ನಿಶಯೊಳು ॥
ಇಂದು ಮಲಗಿದುದೆಲ್ಲಿ ಭೋಜನಮದೇಂಗೈದ ।
ನಿಂದುಮುಖಿ ಸೀತೆ ಮತ್ತಾವವಸ್ಥೆಯೊಳಿರ್ದ ।
ಳೊಂದನುಳಿಯದೆ ಪೇಳ್ವುದೆನೆ ದಾಶರಥಿಗಾತ ಬಿತ್ತರದೊಳಂ ಪೇಳ್ದನು ॥ (೯)

ಪರಿಪರಿಯ ಫಲಪಕ್ವಫಲಗಳಂ ತಂದಿಟ್ಟ ।
ರೆರೆಯ ನಿಟ್ಟಿಸದದಂ ಜಲಪಾನದಿಂದ ಬಂ ।
ಧುರದ ಸುಚ್ಛಾಯೆಯಿಂ ಕಂಗೊಳಿಸುವಿಂಗುದೀಭೂರುಹದ ಭೂಮಿಯಲ್ಲಿ ॥
ಪರಪಿ ತೃಣಮಂ ಸೀತೆವೆರಸಿ ಪವಡಿಸಿದ ಮ ।
ತ್ತುರುಚಾಪಕೃತನೆನಿಸಿ ಸೌಮಿತ್ರಿಯಂತಿರ್ದ ।
ರರಿತಾನು ವಿಪಿನಚರರೊಡವೆರೆದು ಕಾಯ್ದಿರ್ದೆ ಮತ್ತೊಂದುತಾಣದಲ್ಲಿ ॥ (10)

ಎನುತ ಗುಹನೀಪರಿಯ ಬಿತ್ತರಿಸೆ ಕೇಳುತ್ತ ।
ಜನನಾಥತನಯ ಹಾ ಎಂದಳಲಿ ಧರೆಗೊರಗಿ ।
ಘನರವದೊಳಳುತಿರಲ್ ಶತ್ರುಘ್ನಬಂದಪ್ಪಿ ನೆನೆಮಂ ಪ್ರಲಾಪಿಸುತಿರೆ ॥
ತನಯಾರವಮಂ ಕಂಡು ಕೌಸಲ್ಯೆ ಬಂದು ಮ ।
ತ್ತನುವ ಚಿಂತಿಸುತಪ್ಪಿ ಕಂಬನಿಗಳಿಡುತಿರಲ್ ।
ಅನಿತರೊಳ್ ಸೌಮಿತ್ರಿಜನನಿಮುಖ್ಯಸ್ತ್ರೀಯರಳಲಿದುದನೇನೆಂಬೆನು ॥ (11)

ಆದುದದ್ಭುತಮಂದಿನಿರುಳು ನೋಳ್ಪುದಕಂಜಿ ।
ಪೋದನತಿದೂರಕಂದಾ ಗುಹಂ ಭರತಮುಂ ।
ತಾಪವರ್ ತಮತಮ್ಮ ಚಿತ್ತಾನುತಾಪಮಂ ತಂಪಿಸುವರಂ ಕಾಣದೆ ॥
ಬಾಧೆಗೊಂಡುದ ಪೇಳ್ವರಳವಲ್ಲಮನಿತರೊಳ್ ।
ಕ್ಷೋದೀಯ್ಯುತಾಮಸಂ ಪರಿಜುದುಕಿಖಂಪೋಗೆ ।
ಮೂಡೇವಮಯ ಮೂಡಪೆಟ್ಟುದುದಿಯನ್ನಡು ನೋಡಿದಂ ಪ್ರೀತಿಯಿಂದೆ ॥ (12)

ಅಳುತಳಲಿ ಬಳಲಿ ಭೂಮಿತಳದೊಳೊರಗಿರಲ್ ।
ಚೆಳಗನಿಟ್ಟಿಸಿ ಭರತನೆಚ್ಚತ್ತು ಕಜ್ಜಮಂ ।
ತಿಳಿದು ಶತ್ರುಘ್ನನಂ ಎಚ್ಚರಿಕೆಗೊಳಿಸಿದಂ ಪಯಣಸನ್ನಾಹಕೆನುತ ॥
ಕೆಳೆಯರಂ ನೋಡುವೊಡೆ ಗುಹ ನನಿತರೊಳ್ ಬರುತ ।
ಲೊಳಪೊಕ್ಕು ಕರಗಳಂ ಮುಗಿದು ವಂದಿಸಿ ಭರತ ।
ನೆಳದಳರಕರಗಳಿಂದೆತ್ತಿ ಗುಹನೊಡನೆಂದನತುಲಾನುಮೋಹದಿಂದ ॥ (13)

ನಿಸೆಯೊಂದು ಯುಗವಾದುದಯ್ಯ ನಿನ್ನಿಂದಾವು ।
ಪೊಸತಾದ ಸುಖದ ಸುಗ್ಗಿಯನುಂಡೆವಾದುದಾ ।
ವಶದಿಂದಲೀನದಿಯ ದಾಂಟಿಸಲ್ವೇಳ್ಕೆನುತಲಾಜ್ಞಾಪಿಸಲ್ಕೆ ಗುಹನು ॥
ಸಸಿನ್ನೈದಿ ನಿಜಬಂಧುವರ್ಗಮಂ ನೆರಹಿ ಘನ ।
ದೆಸಕದಿಂ ಪಂಚಶತನಾವೆಗಳ ಸಂಗ್ರಹಿಸಿ ।
ಪೊಸಕರೀರಗಳಲಂಕೃತಮಾದ ಸ್ವಸ್ತಿಕವ ತಾಂ ಪಿಡಿದು ಬಂದನೊಲಿದು ॥ (14)

ತ್ವರಿತದಿಂದೈತಂದು ಬಿನ್ನವಿಸೆ ಶತ್ರುಘ್ನ ।
ವೆರಸು ಭರತಂ ಸ್ವಸ್ತಿಕಾರೋಹಣಂಗೈಯ್ಯೆ ।
ಹರುಷದಿಂದಂತಃಪುರಾಂಗನೆಯರ್ಗಳೆಲ್ಲರುಂ ನಾವೆಂಗಳೊಳ್ ಕುಳ್ಳಿರೆ ॥
ತರಣಿಯುಂ ಯಾಯಜೂಕಾದಿಗಳ್ ಕ್ರತುವಿಹನ ।
ಪೊರೆಯೊಳ್ದಾರ್ಗರೋಹಣಂ ಗೈಯುಲ್ಳದಿರ್ದ ।
ದೊರೆದೊರೆಗಳಂತಂತೆ ತಟಿನೀತರಣಿಗತಿಯು ನೆನೆದು ತೆರಳುತ್ತಲಿರಲು ॥ (15)
ಕೆಲರು ಕರಿಗಳನೇರಿ ಕೆಲರಶ್ವಗಳನೇರಿ ।
ಕೆಲರು ತೆಪ್ಪಗಳಡರಿ ಕೆಲರು ಘಟಗಳ ತೊಡರಿ ।
ಪಲಬಗೆಯುಪಾಯಗಳ ಲಾತರಂಗಿಣಿಯನುತ್ತರಿಸೆ ಮನಬಂದತೆರದಿ ॥
ಕೆಲರು ಬಾಹುಗಳಿಂದೆ ಕೆಲರು ನಾವೆಗಳಿಂದೆ ।
ತೊಲಗುವುದನಿಟ್ಟಿಸುತೆ ಭರತನಾಗಂಗೆಯುಂ ।
ಸುಲಭದಿಂದಾಂಟಿ ತಟವುಂ ಸಾರ್ದು ಕುಳ್ಳಿರ್ದನಚ್ಚರಿಯು ನಿಟ್ಟಿಸುತಲಿ ॥ (16)
ಎಲ್ಲರು ಸುಖೇಚ್ಛೆಯಿಂ ದಾಂಟಿ ಬಂದು ಪ್ರಯಾಗ ।
ದಲ್ಲುತ್ತಮಸ್ಥಾನದೆಡೆಯೆಡೆಯೊಳಿಸ್ಥಳದ ।
ಕೆಲ್ಲರಂ ಸಂತೈಸುತನಿಮಿಷವಿಲ್ಲಿರ್ಪುದೆಂದೆಣಿಸಿದು ಭರತ ಮುದದಿ ।
ಬಲ್ಲಹರ ಪಣೆಪಣಿ ವಶಿಷ್ಟರಂದೊಡಗೊಂಡು ।
ಚೆಲ್ವಿಂ ಭರದ್ವಾಜರಾಶ್ರಮವ ಸಾರಲ್ಕೆ ।
ಮೆಲ್ಲನಾಮುನಿವರನ ಛಾತ್ರರೈತಂದರುಪಲಾಗ ಮನದಿರವನರಿದು ॥ (17)
ಭರತನೊಡನೈತಪ್ಪ ಸರಸಿಜಾಸನತನಯು ।
ನಿರವ ನೋಡುತ್ತ ಭರದ್ವಾಜ ನಿದಿರೆದ್ದು ।
ಚರಿಸುತಿರಲನಿಕರೊಳಗೊಳಗೈದಲಾ ಮುನಿಯು ನೋಡಿ ಭರತಂ ಪ್ರಿಯದೊಳು ॥
ಚರಣಂಗಳಗೆ ನಮಿಸಲರಿತು ದಶರಥ ತನಯು ।
ರಿರವರಿತು ಪರಸಿ ಪರಮಾರ್ಘ್ಯೋಪಚಾರಗಳ ।
ವಿರಚಿಸಿ ವಸಿಷ್ಠರಂ ಸಂತಸದೊಳಾಲಿಂಗನಂಗೈದ ಮುನಿ ವಿನಯದಿ ॥ (18)
ಕರದೊಯ್ದು ಕುಳ್ಳಿರಿಸಿ ವಿನಯದಿಂದುಪಚರಿಸಿ ।
ಪುರದುರ್ಗಪುತ್ರಮಿತ್ರಾದಿಕುಶಲಂಗಳಂ ।
ಹರುಷದಿಂ ಕೇಳಲಾ ಮುನಿವರಗೆ ಭರತನಿಂತೆಂದ ಕರಗಳನು ಮುಗಿದು ॥
ಚರಣಬಲದಿಂದಖಿಲರಾರೋಗ್ಯ ಭಾಗ್ಯದಿಂ ।
ದಿರುವರೈಸಲೆ ಭವದ್ವನವೃಕ್ಷ ಶಿಷ್ಯರುಂ ॥
ವರತಪೋಗ್ನಿಗಳೆಲ್ಲ ಕುಶಲವೆ ನಿರೂಪಿಸುವುದೆನುತ ವಿಜ್ಞಾಪಿಸಿದನು ॥ (19)
ನುಡಿಯನಾಲಿಸಿ ಭರದ್ವಾಜ ಸಂಪ್ರಿಯದಿಂದ ।
ಲೊಡವೆರೆದು ಪೇಳುವ ಮಹಾರಾಜ ಭವದೀಯ ।
ದೃಢಪರಾಕ್ರಮದಿಂದಲಖಿಲಲೋಕಂ ಸೌಖ್ಯದಿಂದಿರ್ಪುದೈಸೆ ಮುದದಿ ॥
ಪೊಡವಿಪತಿಯೊಲಿದಿತ್ತ ರಾಜ್ಯಮಂ ಬಿಟ್ಟು ಬೇ ।
ರಡವಿಗೈತಂದುದೇಂ ಕಾರಣಂ ರಾಘವನ ।
ತುಡುಕೆ ನಿಷ್ಕಂಟಕದ ಭೋಗಾಭಿಲಾಷೆಗೇಂ ಮನವೊಡಂ ಬಟ್ಟಿರ್ಪುದೊ ॥ (20)

ಎನುತ ವಿಪ್ರೇಂದ್ರ ಮೊದಲಿಸಲಾಗಲ್ ಭರತ ।
ಜನಿತಾನುತಾಪದಿಂ ಕಂಬನಿಗಳಡಿುತ ಪದ ।
ವನಜಂಗಳಗೆ ನಮಿಸುತಾರ್ತಿಯಿಂ ಬಿನ್ನಪಂಗೈದನತಿಭಕ್ತಿಯಿಂದೆ ॥
ಜನನಿಯೆಸಗಿದಕಾರ್ಯವೆಳ್ಳನಿತನಾದೊಡಂ ।
ಎನಗರಿಕೆಯುಂಟಾಗೆ ನಿರಯಭಾಜನನಪ್ಪೆ ।
ನೆನೆವುದಂ ಭವದೀಯಚಿತ್ತಮೇನರಿಯದುದೆ ಬಿನ್ನವಿಸಲಾಂ ಶಕ್ತನೆ ॥ (21)

ಪಿತನಿಂದ ಸಂಪ್ರಾಪ್ತಿಯಾದ ರಾಜ್ಯದ ಸಿರಿಯು ।
ವಿತತಭಕ್ತಿಯೊಳು ರಾಮನ ಪಾದಪದ್ಮಕಂ ।
ಜೊತೆಗೈದುಬಿನ್ನವಿಸಿ ಕರೆತಂದು ಗದ್ದುಗೆಯ ಮೇಲೆ ಕುಳ್ಳಿರಿಸಿ ಬಳಿಕ ॥
ಕೃತಕೃತ್ಯನಹೆನೆಂದು ಕುಶಲಬುದ್ಧಿಯ ತಂದು ।
ಯತಿಪತಿಯಕೊಡಗೊಂಡು ವೇಗದಿಂ ಬರೆ ಕಂಡು ।
ರತಿಯಿಂದಲಖಿಳ ಪ್ರಜೆ ಪರಿವಾರಮಂ ಕೊಂಡು ಬರಲಾಯ್ತುದೊಂದು ದಂಡು॥ (22)

ಇದು ಸತ್ಯಮಿಥ್ಯವೆಂಬುದನುಂ ಭವತ್ಸರ್ವ ।
ಹೃದಯಮೇನರಿಯದುದೆ ತಪಿಸಲೇತಕೆ ಜೀಯ ।
ಮುದದಿ ಪ್ರತ್ಯಯದೃಷ್ಟಿಯಿಂತರಿತು ಕಲುಷಿಯಾದೆನ್ನ ಧಿಕ್ಕಾರಗೈದು ॥
ಸದಯವೇಳ್ಕೆಂದು ಗದ್ಗದವಾಣಿಯಿಂ ನುಡಿಯ ।
ಲುದುರುತಿರಲಶ್ರುಜಲ ವತಿದುಃಖದಿಂದಳ್ಕ ।
ಕುದಿವುತಿರಲಾ ಭರತನಿರವ ನಿಟ್ಟಿಸಿ ಮೌನಿ ಜನನಾಥನಿಂತೆಂದನು ॥ (23)

ತಿಳದಿರ್ಪೆವಾವು ಜ್ಞಾನದೃಷ್ಟಿಯಿಂ ಪರಹೃದಯ ।
ದೊಳಡಿಪ್ಪ ವಾದೊಡಂ ಲೋಕಕೇ ನಿರ್ಮಲತೆ ।
ತಿಳಯಲೆಂದಖಿಳವೃತ್ತಾಂತಮಂ ಬೆಸಗೊಂಡುದಲ್ಲದಘಮಂ ಶಂಕಿಸಿ ॥
ಪೊಳಪುದೋರಿದುದಿಲ್ಲ ಶ್ರೀರಾಮನಂಘ್ರಿಯುಗ ।
ನಳನಭಕ್ತನೆನುತ್ತಲಂದಿರ್ಪೆ ತಿಳಯಲೀ ।
ಜಲಧಿಮೇಖಲೆಯಲಾರುಂಟು ಪಾಸಟಿ ನಿನಗೆ ಸಜ್ಜನರ ಮಕುಟಮಣಿಯೆ ॥ (24)

ಪರತರಾನಂದಮಯ ಭೂಭಾರವನ್ನಿಳುಹೆ ।
ಧರೆಯೊಳುದುಭವಿಸೆ ತತ್ಪರಿಜರರು ನೀವೆಲ್ಲ ।
ನರರೂಪವಾಂತು ಬಂದಿರ್ಪಿರಲ್ಲದೆ ಮಿಕ್ಕಮಾನವರಿಗೀಬುದ್ಧಿಯು ॥
ದೊರೆದಪುದೆ ದೊರೆದೊಡೆಯು ಧರ್ಮಮಂ ಮೀರದಲೆ ।
ನಿರುಗೆಯುಪ್ಪುದೆ ಪರಮಪಾವನ ಪರಾತ್ಪರದ ।
ಪರಮಧಾಮದೊಳೇಕಮಪ್ಪುದೇ ಭೂಪಾಲ ಕುಲತಿಲಕ ತಿಳಯದಿಹುದೆ ॥ (25)

ಬಲ್ಲೆನೆಲ್ಲವಕ್ಲೇಶ ಗೊಳಲೇತ ಕೆಲ್ಲಮಂ ।
ಬಲ್ಲಹರೊಳಗ್ಗಳನೆ ಸಂತಾಪಮಂ ತ್ಯಜಿಸು ।
ತಿಲ್ಲಿರುಳು ಸುಖಮಿರ್ದು ಭಾಸ್ಕರೋದಯಮಾಗಲೈದವೇಳ್ಕೆಂದು ಮುನಿಪ ॥
ಸೊಲ್ಲಿಸಲ್ ಭರತ ಮಣಿದೆಂದ ರಘುವರನಿರ್ಪ ।
ದಿಲ್ಲಿಗಾವೆಡೆಯೆನಿತುದೂರಮೆಂಬುದ ಮನಕ ।
ಮೆಲ್ಲನರಿ ಪಲ್ ಜವದಿ ಪೋಗಿ ವಂದನೆಗೈವ ಕಾತುರ ಮನಕ್ಕೆಂದನು ॥ (26)

ಚಿಂತಿಸಲದೇಕೆ ಭಕ್ತಾಗ್ರಣಿ ಮಹಾಶೈಲ ।
ಮುಂತೆ ಕಂಗೊಳಸುತ್ತಿದೆ ಚಿತ್ರಕೂಟಾದ್ರಿಯು ವ ।
ಸಂತಸಾಲಯದಂತೆ ರಘುವೀರನಲ್ಲಿರ್ಪ ಸಂತೋಷದಿಂದ ತನ್ನ ॥
ಕಾಂತೆ ಲಕ್ಷ್ಮಣಸಹಿತವಾಶೈಲಸನಿಹ ಹಿಂ ।
ದಾಂತು ಸಂತಸವಿನಾವಿತ್ತ ವನ್ಯಾಹಾರ ।
ಮಂ ತಳೆದು ಪ್ರೀತಿಯಿಂ ಬೆಳಗೆ ಗಮಿಸಲ್ವೇಳ್ಕುಮೆನೆ ಭರತನಿಂತೆಂದನು ॥ (27)
ಕಂಡೆ ಚರಣಗಳ ಸದ್ಯೋಪಚಾರದಿ ಹರ್ಷ ।
ಗೊಂಡೆ ಸಲ್ಲಾಪದಿಂದಪರಿಮಿತಸುಖವ ಕೈ ।
ಕೊಂಡೆ ಮುನಿತಿಲಕನಾಶ್ರಮಕೆ ಕ್ರೋಶದ್ವಯದೊಳಹುದೆನ್ನ ಸೇನೆ ಬಳಕ ॥
ಕುಂಡಲಹಯರಥಪದಾತಿಗಳ ಬೇಗಲಿಂಡ ।
ಗೊಂಡು ಬರಲಾಶ್ರಮದ ತರುಲತಾದಿಗಳಗು ।
ದ್ದಂಡಪೀಡೆಯೆನಿಪ್ಪುದೆಂದರಿತು ಚರಣಾಭಯಕಳ್ಕೆ ನಾಂ ಬಂದೆ ಜೀಯ ॥ (28)
ಸೇನೆಯೊಂದೆಡೆಯಲಾನೊಂದೆಡೆಯಲಿರ್ದರನು ।
ಮಾನಂ ಸಮಾನೀಕರಿಂಗಪ್ಪುದೆಂಬುದಂ ।
ಮೋಣಾರಿಯದಿಹುದೆ ದಯದಿಂದಪ್ಪಣೆಯ ಕೊಟ್ಟಿರುಳಿರ್ದು ಬಲಸಹಿತಲಿ ॥
ಸಾನುಮಂತನ ಪೊರೆಗೆ ಪೋಪೆನೆನೆ ಮುನಿಪ ನಾ ।
ಮ್ನಾನು ಹರ್ಷದಿನುಡಿದ ಸಬಲಕಾತಿಥ್ಯವ ಸು ।
ಮಾನದಿಂ ಗೈಸಲಿಚ್ಛೈಸಿ ಬರ್ಪೆಲ್ಲವಂ ಕರೆಸು ತವಕದೊಳೀ ದಿನಂ ॥ (29)
ಪರಮಸತ್ಕಾರಮಂ ಕೈಕೊಂಡು ಸಂತಸಂ ।
ಬೆರದು ಗಮಿಸಲ್ವೇಳ್ಕುಮೆಂದು ಮುನಿಪತಿ ನುಡಿಯ ।
ಲರಸ ಜೀಯ ಹಸಾದವೆಂದೊಡಂಬಟ್ಟು ನಿಜಬಲವನೆಲ್ಲವ ಕರೆಸಲು ॥
ಶರಧಿ ಮೇಲ್ವಂದಂತೆ ಬರಲಿತ್ತ ತಾಪಸಂ ।
ಕರಚರಣಗಳ ತೊಳೆದು ಪ್ರತಾಚಮನಂಗೈದು ।
ನಿರುತಾಗ್ನಿಹೋತ್ರಮಂದಿರಕೈದಿ ಹುತವಹನ ಬಲವಂದು ನಮಿಸಿ ಮುದದಿ ॥ (30)
ಬ್ರುಸಿಯಲ್ಲಿ ಮಂಡಿಸಿದ ಕುಶಪಾಣಿಯೆಂದೆನಿಸಿ ।
ಕುಶಲದಿಂ ಪದ್ಮಾಸನವ ಬಲಿದು ಮುದ್ರೆಯಿಂ ।
ಶ್ವಸನನಂ ರೇಚಿಸುತ ತರಣಿಯಿಂದಗ್ನಿಯೊಳು ಕುಂಭಿಸಿದನರೆನಿಮಿಷದಿ ॥
ಪ್ರಶಮನಂಗೈದು ಸಂಪೂರ್ಣಕುಂಭಕದಿ ಮನ ।
ಮಿಸುಕದಂತದನೋಜಿಗೈದು ಕರಣಗಳಾಟ ।
ದೆಸಕಮಿನಿತಿಲ್ಲದೂಹಾಪೋಹನೆನಿಸಿರ್ದ ನಿಶ್ಚಲತ್ವವಿಡಿದು ॥ (31)
ನಡುನೆತ್ತಿಯೊಳು ಪೊಳೆವಖಂಡತೇಜೋರಾಶಿ ।
ಯೊಡವೆರೆದು ನಿದ್ರೆಯೆಚ್ಚರದೆರಡ ಪಂಗಿಲ್ಲ ।
ದೊಡನೊತ್ತನೆಯ ಸರಲಿಡಿದು ನಿಶ್ಚಲದೀಪಕಳಿಕಾನುಕಾರಿಯೆನಿಸಿ ॥
ಮೃಡವಿಷ್ಣು ವೈಧಾತ್ರರಂ ನೆಟ್ಟನಾನಂದ ।
ಘೊಡಮಿರಾವಾಪುರೀಶನೆನಿಸಿ ಭಂಗಗಳಿಳವ ।
ಕಡಲಂತೆ ಪರಿಪೂರ್ಣನಾಗಿರ್ದ ಜಲಮಗ್ನಕಲಶದಂತೇವೇಳ್ವೆನು ॥ (32)

(ಸಂಧಿ 27, ಪ 1199)

# ಇಪ್ಪತ್ತೆಂಟನೆಯ ಸಂಧಿ

ಸೂಚನೆ ॥ ಬ್ರಹ್ಮಋಷಿಯೆಸಗಿದಾತಿಥ್ಯದಿಂದಲಖಿಲಬಲ ।
ಬ್ರಹ್ಮಸುತ ಭರತ ಶತ್ರುಘ್ನರುಂ ಸಂತಸದಿ ।
ಬ್ರಹ್ಮಲೋಕಾನುಭವಗೈದಂತೆ ರಾತ್ರಿಯಂ ಕಳೆದು ಬೀಳ್ಕೊಂಡರೊಲಿದು ॥

ಆಗ ವೈತಾಧಿಪತಿ ಕರ್ಮಚಿತ್ತಾದಿ ಮುಖಾ ।
ಯೋಗೀಶನರೆನಿಮಿಷ ಚಿತ್ತವಾಧಿಯ ಸುಖೋ ।
ದ್ಯೋಗದಿಂದಿರಲಾದವಸ್ಥೆಯಂ ಬಿತ್ತರಿಸಿ ಪೇಳ್ವೆ ನಗರಾತ್ಮಸೂಚಿ ॥
ಯೋಗಬಲದಿಂ ಚರಾಚರಕರತಲಾಮಲಕ ।
ಮಾಗಿ ಕಂಗೊಳಿಸಲಾ ಮುನಿವರ ಕರೆದೊಂದ ।
ನಾಗ ಸೇವಿಸಿದ ನಚ್ಚರಿಯು ನಿನ್ನೇನೆಂಬೆನೆಂತುಟೊ ತಪೋಮಹಿಮೆಯು ॥ (1)

ಬಲಗೊಂಡೆ ತ್ವಷ್ಟಾರ ವಿಶ್ವಕರ್ಮನಂ ನಿನ್ನ ।
ಬಲಸಹಿತ ಭರತನಿರಲಾವಾಸತಾಣಮಂ ।
ನಲವಿಂದ ಗೈದೀವುದೆನು ತೋರೆಮ ದಿಕ್ಪಾಲಮುಖ್ಯರೊಡನಿಂತೆಂದನು ॥
ನೆಲದಾಣ್ಮಗಾತಿಥ್ಯಗೈಯಲಿಚ್ಛೈಸಿರುವೆ ।
ನೆಲಕೆಲ್ಲರೈತಂದು ಸಾಹಾಯ್ಯಮೆಸಗವೇ ।
ಳ್ಕೊಲಿದೆನುತ ನಾಲ್ವೆಸೆಯ ನದಿಗಳಗೆ ನೇಮಿಸಿದ ಸೇವೆಳ್ವನಚ್ಚರಿಯನು ॥ (2)

ನಳನಾಕ್ಷ ಭರತಗಾಂ ಭೋಜನಂಗೈಸೆ ಮನ ।
ವೆಳಸಿಹುದು ನೀವೆಲ್ಲರೈತಂದು ಕುಟೀಗಳ ।
ಕಳೆದು ಸಮತೆಯೊಳಖಿಳಪ್ರಾಣಿಗಳ ಸತ್ಕರಿಸಲೋಸುಗಂ ಸುಲಭವೆನಿಸಿ ॥
ಸುಳಿದಪುದು ಮೈರೇಯಮದ್ಯಪಾಯಸರೂಪ ।
ದಳದೆಂದು ಸೂಚಿಸುತಲಪ್ಸರೀಗಣದೇವ ।
ಕಳೆಯಾಂತ ಗಾಂಧರ್ವ ಮೇನಕಾದಿಗಳ ಕಂಡರಿಪಿದಂ ಮುನಿತಿಲಕನು ॥ (3)

ಹರುಷದಿಂ ಪ್ರೀತಿ ಮೋಹಕರೂಪವಾಂತ ಜನ ।
ರಿರವ ಸಂತಸಗೊಳಪುದೆಂದು ನಂದನ . . . . ।
. . . ಬನಂಗಳಗೆಲ್ಲ ಸೇಮಿಸಿದ ಮಕುಟಾದ್ಯಲಂಕಾರವಸ್ತ್ರತತಿಯ ॥
ವರವಿಲಾಸಿನಿಯರಾದ್ಯಖಿಲರುಂ ಫಲಪತ್ರ ।
ನೆರವಿಗೈತಂದು ಮಾನುಷರ ಕರತುಷ್ಟಿಗೈ ।
ದೊರಿಸೆಂದು ಪೇಳ ಚಂದ್ರನ ನೋಡುತಿಂತೆಂದನಾಮುನಿಪ ಸಂತಸದೊಳು ॥ (4)

ಸೋಮ ಷಡ್ರಸಗಳಂ ಸೃಜಿಸೆಲ್ಲ ಜೀವರಂ ।
ಪ್ರೇಮಗೊಳುವಂದದಲಿ ಪರಿಪರಿಯಲೆಂದು ಸು ।
ತ್ರಾಮಾದಿಗಳಗೆಲ್ಲ ನೇಮಿಸಿದನರೆನಿಮಿಷ ಧ್ಯಾನಯೋಗದಲಿ ಕುಳಿತು ॥
ಆಮಹಾಪುರುಷನಾನಾವಿಧದಿಂ ನೆನೆದು ।
ಕಾಮಿಸಿದನಂತಾದುದಾಕ್ಷಣದೊಳಂ ತಪೋ ।
ದ್ದಾಮತೆಯನೇಂ ಪೇಳ್ವೆ ಸಗ್ಗಕಿಮ್ಮಡಿಯಾದುದಾಶ್ರಮಂ ರಮ್ಯಕದೊಳು ॥ (5)

ರತುನಮಯಭೂಮಿಯಾಯ್ತ್ರೈದುಯೋಜನದಗಲ ।
ಮಿತವಿಲ್ಲದಮಿತವಿಭವಾಸ್ಪದೆಗಳ್ಳೇಯುವಾ ।
ಯುತನಂಗಳಾದುವಲ್ಲಲ್ಲಿ ತನ್ಮಧ್ಯದೊಳು ನೃಪನ ಮಂದಿರವೆಸೆದುದು ॥
ಸಿತಕಿರಣ ಬಿಂಬ ಚುಂಬಿತ ಗೋಪುರಂಗಳ ।
ಲ್ಲತುಳಕರುಮಾಡಂಗಳಗಣಿತ ವಿನೋದಗಳ ।
ಜೊತೆಗೊಳಪ ಕಾನನಂಗಳು ತೋರ್ದುವಾಕ್ಷಣಕದೆಂತೊ ಮಹಿಮಾತಿಶಯವು ॥
ರನ್ನದರಳಿಲೆಗಳಂ ನೋಡಿ ಪಿಕತತಿಯುಲಿವ್ರ । [(6)

ವನ್ನಿಗಂ ಸುರನೀಲಕರುಮಾಡವಂ ಕಂಡು ।
ಚೆನ್ನಾಗಿ ನಟಿಸೆಯಂ ಮಾಳ್ಪಮಾಯೂರಕುಲ ಮುಕ್ತಾಪ್ರಭೆಯ ಕಾಣುತಾ ॥
ನನ್ನಿಯಿಂದಾಡುವ ಮರಾಳಗಳ ಪಙ್ಕ್ತಿಯಿಂ ।
ದುನ್ನಮಿತಕಳಿ ಜಲಸೂಸುತ್ತ ಹರ್ಷಿಪ ಕೋಕ ।
ವನ್ನು ನಿಟ್ಟಿಸಿ ಬೆರಗ ಬೀರುತಿಹ ಕನಕಪುತ್ಥಳಿಕೆಗಳು ತೋರ್ಪವಲ್ಲಿ ॥ (7)
ಸುರಪನರಮನೆಯೊ ವೈಶ್ರವಣನಾಗಾರಮೋ ।
ಹರಗೃಹಮೊ ಸರಸಿಜಾಸನನ ಮಂದಿರವೊ ಯಿದು ,
ಹರಿಯ ನಿಲಯವೊ ಸಿರಿಯ ಜನನಭೂಮಿಯೊ ಯೆನಲ್ ತೋರುತತಿಶಯವಜೀರೆ ॥
ಪರಿಪರಿಯ ಚಿತ್ರರಚನಾಕ್ರಮಗಳಂ ಸಿಲ್ಪಿ ।
ಗಂಗಸಾಧ್ಯಮೆನಲ್ಕೆ ನಿಜಶಕ್ತಿಯುಳ್ಳನಿತ ।
ಪರಮಖುಷಿ ಮೆಚ್ಚುವಂತಾ ವಿಶ್ವಕರ್ಮ ತಾಂ ರಚಿಸಿದಂ ನಿಮಿಷದೊಳಗೆ ॥ (8)
ಕೆಲವು ಪಾಯಸ ಮಯದಿ ಕೆಲವು ಮೈರೇಯಮಯ ।
ಕೆಲವಾಸವೋಪಮಿತ ಕೆಲವಿಕ್ಷುರಸಭರಿತ ।
ಕೆಲವು ಪಾನಕ್ಷೀರ ಸ್ವಾದೋದಕದ ಮಯದಿನಖಿಳಸುಲಭೋಪಮಿತದಿ ॥
ಪಲವುನದಿಗಳ್ ಪ್ರಸನ್ನತೆವೆತ್ತು ಭೂಮಿಯೊಳ್ ।
ಚಲಿಸುತಿರಲಾಗಸದಿ ಮೇಘಸಂದೋಹ ಬಂ!
ದೊಲಿದು ಸುವೃಷ್ಟಿಯಂ ಸೂಸುತಿರಲೆಡೆಗೆಡೆಗೆ ಲೋಕರ್ಗಚ್ಚರಿಯೆನೆ ॥ (9)
ನಂದನಂ ಚೈತ್ರರಥ ಕುರುರಮ್ಯಕದ ವೃಕ್ಷ ।
ಗೊಂದಣಗಳೈತಂದು ಗುಜ್ಜನಿಸುತಾ ನೆಲದಿ ।
ಪೊಂದಿ ಮಾನಸಸುಲಭವಾಗಿ ಶಾಖಾಂತಗಳನು ಬಾರಿ ? ತಾಳ್ದು ಬಳಿಕ ॥
ಸುಂದರಾಂಗನೆಯರಂ ಸುಲಲಿತದ ವಸ್ತ್ರಗಳ ।
ಚಂದನಾದ್ಯಖಿಳಹಾರಂಗಳಂ ಪರಿಮಳಗ ।
ಳಂದ ಕಂಗೊಳಿಪ ಕುಸುಮಂಗಳಂದಲ್ಲಲ್ಲಿ ತೋರ್ದುವಚ್ಚರಿಯ ಬಿಡದೆ ॥ (10)
ದೇವತಾಂಗನೆಯರೈತಂದರೈ ಪದಿನಾರು ।
ಸಾವಿರ ಕುಬೇರನರಮನೆಯಿಂದ ನಡೆತಂದ ।
ರಾ ವಿಮಲನೇತ್ರಯರ್ ಪಲ ಬಗೆಯ ಭೂಷಣಗಳಂದಲಂಕಾರವೆತ್ತು ॥
ಠೀವಿಯಿಂ ನಾರದರ್ ತುಂಬುರರ್ ಗಾಂಧರ್ವ ।
ಕೋವಿದರ್ ಗುಂಪುಗೂಡಿ ಮುನಿಯೆಡೆಗೆ ಒರಲಾಗ ।
ದೇವದುಂದುಭಿಗಳ ವಾವೆಡೆಯೊಳೊಡರಿದವು ಶ್ರುತಿಹಿತಮೆನಲ್ ವಿಭವದಿ ॥ (11)

ಒಂದೆಡೆಯು ವಲ್ಲಕಿಯ ತಂಬೆಸೆಯೆ ಗಾನ ಮ।
ತೊಂದೆಡೆಯು ಮುರಜಾನುಕಾರಿ ಪಾಡುವತಾನ।
ವೊಂದೆಡೆಯು ಶ್ರುತಿ ಮಧುರ ಯತಿಲಯಾನ್ವಿತಮಪ್ಪ ಗಾಂಧರ್ವಜನರ ಗಾನ॥
ಒಂದೆಡೆಯ ಸುಷಿರಕಾಂಸ್ಯಾದಿ ಧ್ವನಿಗುಂಭನ ಮ।
ದೊಂದೆಡೆಯು ಲಾಸ್ಯ ನರ್ತನ ನೃತ್ಯ ವೈಭವದಿ।
ವೃಂದಾರಕರ ಲೋಕಕಿಂಪೊಡಿಸಿ ತೋರಿದುದು ನಿಬ್ಬೆಸಲ್ ಬೆರಗಪ್ಪೊಲು॥ (12)
ಸಂತಸವ ನೀಡುವ ವಸಂತ ಕೂಬರ ಜ।
ಯಂತ ಕ್ಷಣದಾಕಾಂತ ಕಂತು ಮಂದಾನಿಲರ।
ಮುಂತೆ ಶುಕಪಿಕ ವಂಚೆಕೊಂಚೆಗಳ ಸಂದಣಿಗಳೊಡವೆರೆದು ಸೇವಕರವು॥
ಕೊಂತಿ ಚಿಂತಾಹರಣಗೈಯುತಿರಲಾನಂದ
ಸಂತೆ ಮುಂಬರಿವುತಿರಲಖಿಲರು ನಿಳಿಂಪತ್ರೆಯ।
ನಾಂತು ತೋರಿದರಚ್ಚರಿಯನೇನ ಬಿತ್ತರಿಪೆ ಮತ್ತೇಭಮೃದುಗತಿಯರುಳ್॥ (13)
ಅನಿತರೊಳು ಭರತ ನಿಜಬಲವ ನಿಲಿಸುವೆನೆಂದು।
ಮನಬಂದು ನಿಬ್ಬೆಸುತ ಬೆರಗಾಗಿ ದೇವತೆಗ।
ಳನು ಧರೆಗೆ ತಂದ ಮುನಿಯಂದಮಂ ನೆನೆನೆನೆದು ವಿಸ್ಮಯಾಬ್ಧಿ ಪರಿವಾರವಂ॥
ಮನೆಮನೆಗಳಲಿ ತಣಿಗೈದು ವಿಶ್ರಮಿಸೆಂದು।
ವಿನಯದಿಂ ಪೇಳ ಪಿಂದಿರಗೆ ಕಾಣ್ಬುಟ್ಟದರ।
ಮನೆ ಯಿಂದ್ರಲೋಕದಂತಾನಂದ ಕರವಾಗಲೊಳಪೊಕ್ಕು ಸಚಿವನೊಡನೆ॥ (14)
ಮುಂದೆಸೆದುದಮರೇಂದ್ರ ನೋಲಗದ ಶಾಲೆಯಂ।
ತೊಂದು ಚೆಲ್ವ ಹಜಾರಮದರ ಮಧ್ಯದಿ ದಿವ್ಯ।
ಮೆಂದೆನಿಪ ಪಟ್ಟವಣೆ ಬೆಳ್ಗೊಡೆಯು ಚಾಮರಂ ಕಂಗೆಸೆಯಲಾಗ ಭರತಂ॥
ಚಂದದೀ ಗದ್ದುಗೆಯು ರಘುವರಗೆ ಯೋಗ್ಯಮಹು।
ದೆಂದು ವಂದಿಸಿ ಪಿಡಿದು ಚಾಮರವ ಭಕ್ತಿಯಿಂ।
ದೊಂಡೆಡೆಯು ಕುಳ್ಳಿರಲ್ ಮಂತ್ರಿ ಸೇನಾನಿಗಳ್ ಕುಳತರೆಡಬಲದೊಳೊಲಿದು॥ (15)
ಮುಡಿಸಲ್ ಭರತನರೆನಿಮಿಷದೊಳ್ ಪುಷ್ಪ ಕೋ।
ದಂಡಮದವಾರಣಗಳೆನೆ ದೇವತಾ ಸ್ತ್ರೀಯರ।
ತಂಡಮುದ್ದಂಡದಿಂದೈತಂದು ನಟನಾನುಗುಣಗಳ್ ಪರಪಲಾಗ।
ಖಂಡಶರ್ಕರೆಯ ರಸ ತುಳ್ಕುವಂದದಿ ಗಾನ।
ತಾಂಡವಂ ಪಸರಿಸಲು ಗಾಂಧರ್ವರಾಗಮುಂ।
ಕೊಂಡು ತುಂಬುರ ನಾರದಾದಿಗಳ್ ವೀಣೆಗಳ ಬಾಜಿಸಿದರಾನಂದದಿ॥ (16)
ಕೊಳಲು ನಾಸಿಕ ವೀಣೆ ಡಮರು ಡಿಂಡಿಮ ಡಕ್ಕೆ।
ತೊಳಪ ಮದ್ದಳೆ ಶಂಖ ತಾಳ ನಾದಿಪ ಗೆಜ್ಜೆ।
ಪೊಳಪಿನಂತ ನಾಗಸರ ಮೂ . . . . . ಗಳು ಮಸಗೆ ದಿಕ್ತಟಗಳ॥
ಕೊಳತೊಂದೆ ನಿಮಿಷಕಂ ಲೋಕ ಶಬ್ದನಂದ।
ದೊಳು ಲೀನ ಮಾಯ್ತೆಂಬ ರೀತಿಯಿಂ ಸಭೆಯಲ್ಲಿ।
ಹಳಚದಿವೆ ಯೂಥಗಳ ಚಿತ್ರಪುತ್ಥಳಿಗಳಂತಿರ್ದರದನೇನೆಂಬೆನು॥ (17)

ಪರಮಾನ್ನಕರ್ದಮಿತ ಮೈರೇಯ ಸಂಭರಿತ ।
ವೆರೆದ ನದಿಗಳ್ ಮುಂದೆ ಪರಿವೃತಿರಲದರಿಂದೆ ।
ಪರಿಪರಿಯ ಪಕ್ವಫಲ ರಸಷಂಡ ಭಂಗದಿಂ ಮುಂದೆಸೆವ ನಿಮಿಷದಿ ॥
ವರದುಕೂಲಂಗಳಾಭರಣಾವಲೇಪನಂ ।
ಪರಿಮಳ ಪ್ರಮುಖನಾನಾವಸ್ತುಸಂದೋಹ ।
ಬರೆ ಕಂಡು ಬೆರಗಾದ ಭರತನಾ ಸಂಯಮಿಯ ಯೋಗದುತ್ಸವವ ಪೊಗಳ ॥ (18)

ಎನಿತು ಮಾಲ್ಯಂಗಳಂಬರಗಳಾಭರಣಂಗ ।
ಳೆನಿತು ಮಾಗಧವಂದಿನಟಗಾಯಕಾಸ್ಯರಿಂ ।
ಗೆನಿತು ವೈಚಿತ್ರತರ ಬನತಟಾಕಾದಿಗಳ ಕ್ರೀಡೋಪಯೋಗಕರತ್ರ ॥
ಜನರಾಡಿಕೊಂಬರಾ ಸುರಲೋಕದೊಳಗೆನುತ ।
ಮನಿತೊಂದೆ ನಿಮಿಷದೊಳ್ ಭರತನಿದಿರಲಿ ಮನಸಿ ।
ನೆನೆದರಿಗೆ ನೆನೆದುದೆಡೆಯಲ್ಲಿ ಸಂಘಟಿಸುತಿಹುದೇನೆಂಬೆನಚ್ಚರಿಯನು ॥ (19)

ನೋಡಿದರೆ ಮೋಹಿಸುವಲಂಕಾರ ರಸಕಲಿತ ।
ಗಾಡಿಕಾತಿಯರಮಿತರಲ್ಲಲ್ಲಿ ಜನರುಗಳ ।
ನೋಡಿ ಮಜ್ಜನಭೋಜನಾದಿಗಳ ನಾಕಿಸಿ ತೊಡಿಸಿ ದಿವ್ಯಾಂಬರಗಳ ॥
ಜೋಡಿಲ್ಲದಾಭರಣಗಳನಿಟ್ಟು ಕರವಿಡಿದು ।
ಕೂಡೆ ಬೀದಿಯಲಿ ಸಂಚರಣೆಗೈಸುವರಲ್ಲಿ ।
ನೋಡೆನುತಲತಿವಿಚಿತ್ರವಾಟಿಕಾಟಗಳ ಬೀಳ್ವುದೇನತಿಶಯವನು ॥ (20)

ಕರಿಗಳುಪಯೋಗ ಭೋಜನವ ಪಶ್ವಸಂತತಿಗ ।
ಳುರುಕಬಳಭಕ್ಷಣಮನಡ್ವಾಡಿಗಳಗೂಟ ।
ಖರಮುಷ್ಟ್ರಕುನ್ಯಾದಿ ಸಕಲಪ್ರಾಣಿಗಳಿಷ್ಟವೆನಿಪ ವಸ್ತುಗಳೆಲ್ಲವ ॥
ಪರರ ಯಾಚಿಸದೆ ನಿಂದಲ್ಲಿ ಬೇಕಾದುದಂ ।
ಸರಭಸದಿ ತೆಗೆದು ಸಂತುಷ್ಟಿಗೊಳಿಸಿದರೇನ ।
ನೊರೆವೆನಚ್ಚರಿಯ ತಾಪಸನ ಸಚ್ಚರಿತನಂ ಸಂಯಮಸಾಮರ್ಥ್ಯತೆಯನು ॥ (21)

ಎಲ್ಲಿ ನೋಡಿದರನ್ನಪಾನಾದಿಗಳ ಸುಲಭ ।
ಮೆಲ್ಲಿ ನೋಡಿದರಖಿಲಭೂಷಣಾಂಬರಯುಗಳ ।
ಎಲ್ಲಿ ನೋಡಿದರಿಷ್ಟಫಲ ಮಾವ ಶೃಂಗಾರನಾಯಿಕಾಗುಣಸಮುದಯಂ ॥
ಇಲ್ಲವೆಂದೊಂದೊಂದ ಬೇಡುವರ ಕಾಣೆವುಂ ।
ದಲ್ಲಲ್ಲಿ ಜನರ ಮೂದಲಿಸುತ್ತೈತಹ ಸುರರ ।
ಬಲ್ಲಹರ ಸಂತೆಯೆಸೆದುದು ಚಿತ್ರಕರವೆನಲದೇನೆಂಬೆನಚ್ಚರಿಯನು ॥ (22)

ಬಿದಿಯ ಪಟ್ಟಣ ಪುರ್ದುದೇರನೊಪ್ಪಿಹ ತಾಣ ।
ಕುಧರೇಶನೆಲೆ ಕುಬೇರನ ನಗರ ವೆಲರುಣಗ ।
ರೆದೆಯ ? ನಾಸ್ಥಾನ ಪಾಶಿಯ ಪುರಂ ಸಗ್ಗಿಗರ ಪುಟಭೇದನವಮದೆಂಬೊಲು ॥
ಮದನನಾಡುಂಬೊಲ ಬಸಂತನಾಲಯ ಜಗ ।
ನ್ಮದವಿಹಾವ ಗಾಂಧರ್ವರಾಲಯಕ್ಕಧಿಕ ಮೆನೆ ।
ಚೆದುರ ಬರಿದುದಾಶ್ರಮಸ್ಥಾನವಾ ಮುನಿಯನುಜ್ಞೆಯಿಂದಾಕ್ಷಣದೊಳು ॥ (23)

ತರುಲತಾದಿಗಳೆಲ್ಲ ರಾಮಾಕೃತಿಯನಾಂತು ।
ಕರೆಕರೆದು ಮನವಿಷ್ಟಗಳನೀವುತೆಲ್ಲರುಂ ।
ಪರಿಪರಿಯ ಮೃದುಪಾನ್ನಡಿಯಲನ್ನಪಾನಾದಿಗಳು ವಸ್ತ್ರಮಾಲ್ಯಾದಿಗಳಲಿ ॥
ಹರುಷಗೊಳಿಸುತಲಿರ್ದರೇನೆಂಬೆವಾ ದಿನದಿ ।
ನೆರದವಿಳಪ್ರಾಣಿಗಳ್ ಸ್ವರ್ಗಭೋಗವನುಂಡು ।
ಬೆರಗಾದರೇನೊಂದ ನೆನೆಯದಾ ತಾಪಸನ ಶಕ್ತಿಯೆಂತಾಟೊ ಜಗದೊಳು ॥ (24)

ಅಕಲಂಕಸುಖದ ಸುಗ್ಗಿಯು ಸೂರೆಯಲಿ ಜನ ।
ಪ್ರಕರಮಿರುತಿರಲೊಂದು ನಿಮಿಷಮಾಗಲ್ ನಿಶೆಯು ।
ಪ್ರಕಟವಣಾಯಿತ್ತಿನಬಿಂಬ ಮೂಡವೆಟ್ಟದ ತುದಿಯೊಳಿಟ್ಟ ಮಣಿಮುಕುರದಂತೆ ॥
ಸುಕುಮಾರಭರತನಾ ಸಮಯ ದೊಳಗೆಚ್ಚತ್ತು ।
ಭಕುತಿಯಿಂ ಕುಲದೇವತಗೆ ನಮಿಸಿ ಶತ್ರುಘ್ನ ।
ಸಕಲಮಂತ್ರಿಗಳು ಮೈತ್ರಾವರುಣಿಯೊಡವೆರದು ಮುನಿಪನೆಡಗೈತಂದನು ॥ (25)

ಭೂಸುರಾಗ್ರಣಿ ಭರದ್ವಾಜ ಪೂರ್ವಾಹ್ನಿಕಾ ।
ಭ್ಯಾಸಕ್ರಿಯೆಗಳ ರಚಿಸಿ ಕ್ರತುಲಿಹನ ಪೂಜಿಸುತ ।
ಭಾಸುರಶ್ರೀನಿಧಿಯನಿಪ್ಪಂತೆ ಕ್ರತುಭಜಾಗಾರದೊಳು ಮಂಡಿಸಿರಲು ॥
ಕೋಸಲಾಧಿಪನೈದಿ ಚರಣಂಗಳಗೆ ನಮಿಸಿ ।
ವಾಸುದೇವಾತ್ಮಕ ಭವತ್ಕೃಪೆಯುಲಿರುಳಲ್ಲಿ ।
ವಾಸಮಂ ಗೈದಿರ್ದನತಿಸುಖದಿ ಒಲವೆರಸಿ ಸ್ವರ್ಗೋಪಮಾನಮೆನಿಸಿ ॥ (26)

ಅರಸನಂ ಕಾಣ್ಬ ಕೌತುಕದಾಗಿದೆ ಚಿತ್ತ ।
ಕರುಣಾಕಟಾಕ್ಷದಿಂ ನೋಡಿ ಬೀಳ್ಕೊಡೆ ಪೋಗಿ ।
ಚರಣಂಗಳಗೆ ನಮಿಸಿ ಬರುವೆನಗ್ರಜವೆರಸಿ ಪ್ರಸದಾಕಲಂಕನೆನಿಸಿ ॥
ಪರಿಪೂರ್ಣದಯೆಯಿಂದ ಪಾಲಿಸುವುದೆನುತಲೀ ।
ಪರಿಯವಿಜ್ಞಾಪಿಸಿದ ಭಾತೃಹಿತಕರ ಭರತ ।
ನಿರವನಿಟ್ಟಿಸಿ ಭರದ್ವಾಜಮುನಿಯಿಂತೆಂದ ನಸುನಗುತವಿನಯದಿಂದ ॥ (27)

ಸಲ್ಲಲಿತಮೆನಿಪ ಮಂದಾಕಿನಿಯು ಬಡಗ ದೆಸೆ ।
ಯಲ್ಲಿ ಮಾಲಿಕೆಯಂತೆ ಕಂಗೊಳಿಸಲದಾತಸುರ ।
ವಲ್ಲಿಪಾದಗಳಿಂದತಿಮನೋಹರಮೆನಿಸಿ ಚಿತ್ರಕೂಟಾಖ್ಯಗಿರಿಯು ।
ಚೆಲ್ವ ಬೀರುವದೈಸೆ ಭರತ ಕೇಳಾಶೈಲ ।
ವಿಲ್ಲಿಗಿಹುದೈದುಯೋಜನ ತೆಂಕಮುಖಮಾಗಿ ।
ಮೆಲ್ಲನೈದಲು ರಾಮಚಂದ್ರನಿರುವೆಲೆಮನೆಯ ತೋರ್ಪುದಚ್ಚರಿಯೊಳಲ್ಲಿ ॥ (28)

ಹಾದಿವಿಡಿದೈದಲತಿಸುಖದಿಂದ ರಘುವರನ ।
ಪಾದದರ್ಶನಮಹುದೆನುತ್ತಲಪ್ಪಣೆಗೊಡಲು ।
ಮೋದದಿಂದಡಿಗೆರಗಿ ಬೀಳ್ಕೊಂಡು ಕೆಲಸಾರಲನ್ನೆಗಂ ಕೌಸಲ್ಯೆಯು ॥
ಸಾದರದಲಾ ಮುನಿಯ ಪದಕಮಲಕಭಿನಮಿಸ ।
ಲಾ ದಯಾಂಬುಧಿ ಪ್ರಿಯದೊಳುಪಚರಿಸುವನಿತರೊಳು ।
ಮೋದುರದ ನಿರ್ಲಜ್ಜೆವೆರೆದಶ್ವಪತಿಯಣುಗಿ ಬಂದು ವಂದೆನೆಗೈದಳು ॥ (29)

ಭರದಿಂ ಸುಮಿತ್ರೆ ಮೊದಲಾದ ರಾಜಸ್ತ್ರೀಯು ।
ಲೆರಗಿ ಭರತನ ಕೆಲದಿ ನಿಂದಿರಲ್ ನೋಡಿ ಮುನಿ ।
ವರನೆಂದ ರಘುಜ ನಿನ್ನಯಮಾತೆಯಿಂದಾದುದತಿಶಯಮೆನುತ್ತರಿವೆನು ॥
ಧರೆಗಧಿಕಮೆಂದೀ ಯತೀಶನಾಜ್ಞಾಪಿಸಲ್ ।
ಕರಗಳಂ ಮುಗಿದು ಕಂಬನಿವಿಡುತ ಖಿನ್ನತೆಯೊ ।
ಳಿರಕವಾಗಿಹ ಚಿತ್ತದಿಂದ ವಿಜ್ಞಾಪಿಸಿದ ಭರತ ಬಿರುನುಡಿಗಳಿಂದೆ ॥ (30)
ಮಾತಿನಿಂ ಪತಿಯು ಪೋಗಾಡಿ ದೌರ್ಜನ್ಯಕರ ।
ಪ್ರೀತಿಯಿಂ ರಾಮಲಕ್ಷ್ಮಣರ ಕಾನನಕಟ್ಟಿ ।
ಘಾತಕವ ಗಳಸಿ ಕುಲಮಂ ನೀರೊಳಾಳಿಸಿದ ದುರ್ವಾರಕೆಯು ಬಸಿರೊಳು ॥
ಜಾತವಾದುದಕಾನು ಲೋಕನಿಂದಕನಾದೆ ।
ಖ್ಯಾತಿಯಾರಸಿದುದಖಿಲರಾಜ ಸಭೆಯೊಳಗೆಂದು ।
ಮಾತನಾಡಲಾರದಪಯಶಮದೇನೆಂಬೆ ಪೂರ್ವಕೃತದುಷ್ಕೃತವನು ॥ (31)
ಕಡಿಮೆ ಪರಪುವೆನೆಂದು ತುಡುಕಲಸ್ತ್ರವ ನೋಡು ।
ತೊಡನೆನ್ನ ಕರವಿಡಿದು ಕೌಸಲ್ಯೆ ಪರಿಹರಿಸೆ ।
ನುಡಿಯಲಮ್ಮದೆ ಸುಮ್ಮನಾಗಿ ಗಮ್ಮನೆ ಚರಣದೆಡೆಗೆ ನಡೆತಂದೆ ಜೀಯ ॥
ಕಡುಪಾಪಿ ಯೆನ್ನನೆಡೆವಿಡದೊಡನೆ ಬಂದಡಿ ।
ಕ್ಕಡಿಗೈವೆನೆಂದು ಬಿರುನುಡಿಗಳಿಂ ಘರ್ಜಿಸುವ ।
ನೊಡವಿಪತಿಯನ್ನೋಡಿ ಮೃದುಮಧುರವಾಣಿಯಿಂದುಪಚರಿಸಿ ಮುನಿನುಡಿದನು ॥
ಸುಮನಸರ ಪೊರೆದು ಗೋದ್ವಿಜರಕ್ಷಣೆಗೈದು । [(32)
ಕ್ರಮದಿಂದ ದಿತಿಜನಿಧನಂಗೈದು ಧರ್ಮಗಂ ।
ಭ್ರಮವ ನೆಲೆಗೊಳಸಲೀ ಕಾನನಕೆ ರಘುವೀರನೈತಂದ ಕರುಣದಿಂದ ॥
ರಮಣೀಯಕರಚರಿತೆ ಯಾಯಿತು ಕೈಕೆಸತಿಯು ।
ಮಮತೆವಚನಗಳಿಂದ ಲೋಕೋಪಕಾರ ನಿ ।
ರ್ಮಮತೆಯುಳ್ಳರ ಶ್ರಮನಿವಾರಣೆಗೈದುದತಿಲೇಸೆನ್ನುತೆಣಿಸವೇಳ್ಕು ॥ (33)
ಮಿತರಹಿತ ಹಿತಗೈದುದೀಕೆಯು ಸುವಾಣಿಯಿಂ ।
ದತಿಶಯದಿ ತಿಳಿಯೆನುತಲೊರೆಯೆ ಸಂಯಮಿ ಭರತ ।
ನತಿಭಕ್ತಿಯಿಂದೆರಗಿ ಬೀಳ್ಕೊಂಡು ಪೊರಮಟ್ಟು ನಿಜಬಲವನೆಲ್ಲ ಕರೆಸಿ ॥
ಗತಿವಿಡಿದು ಪದದಲರುಹಲ್ನೇಮವಿತ್ತು ನೃಪ ।
ಸತಿಯರನ್ನಂದಣದಿ ಕುಳ್ಳಿರಿಸಿ ಕನಕಮಯ ।
ರತುನವಿರ್ಮಿತಮೆನಿಪ ಶಿಬಿಕಾಧಿರೋಹಣಂಗೈದ ಮುಂದೈದಲೆನುತ ॥ (34)
ಚತುರಂಗಬಲ ನಡೆದು ದೆಸೆಪಥಗಳಂ ಪಿಡಿದು ।
ವಿತತಸಾಗರವು ಮೇಲ್ವರಿವ ಧರಣೀತಳವ ।
ರತಿಯೊಳಾಲಿಂಗಿಸಿದ ಮಾಳ್ಕೆಯೊಳ್ ತರುಗುಲ್ಮಗಿರಿನಿಕರಗಳ ಬಲದೊಳು ॥
ಜೊತೆಗೊಂಡು ಮರೆಯಾಗಲುಳಿದ ಖಗಶರಭಗಂ ।
ತತಿಗಳಾವೆಡೆಯು ಪೊಂದಿರ್ದು ವಾಹಯದ ಪದ ।
ಹತಿಯಿಂದ ಧರಣಿ ತಲ್ಲಣಗೊಂಡುದಾಕ್ಷಣದೊಳಾಸೇನೆಯುರುಭರದಲಿ ॥ (35)

ಕಳೆಕಳೆದು ಸಕಲನದಿನದಬನಂಗಳನೆಲ್ಲ ।
ಪೊಳೆ ಪ್ರಾಂತ ನಗರ ಖರ್ವಾಟ ಖೇಟಂಗಳಂ ।
ಕಳೆದೈದಿ ಬರೆ ಮುಂದೆ ಕಂಗೊಳಿಸಲಾಶ್ರಮ ಮುನಿವೇಳ್ದ ಕುರುಪನರಿತು ॥
ಜಲಜಪೀಠನ ಸುತ ಸುಮಂತಾದಿಗಳ ಕರೆದು ।
ಬೆಳಗುತಿದೆ ನವಿಯಂತದೊಳು ದಿವ್ಯಸಿರಿಯೆನುತ ।
ತಿಳಿಪಿಯಭಿವಾದನಂ ಗೈದಂ ಮಹೇಂದ್ರವರ ಪರದೈವವೆಂದು ಭರತ ॥ (36)
ನವಘನಾಘನಗಳಾಚ್ಛಾದ್ಯವೈದಿಹ ವಚ್ಛಿ ।
ನಿವಹಮೀಂ ಪರಿವೇಷ್ಟಿಸಿಹವ್ರೊ ಮೇಣಂಬರಂ ।
ನವಕವೆನೆ ಭರಿತವಾಗಿಹುದೊ ಕರಚಿತ್ರವೆನೆ ವಿವಿಧವರ್ಣಗಳನಾಂತು ॥
ನವರಸೋನ್ಮೇಷಪೋಷಣ ಬೀಜವಾಗಿ ಬನ ।
ಮವಿರಳದಿ ಕಂಗೊಳಸುತಿದೆ ಪ್ರಾಣಿಗಳ ಗಮನ ।
ಸವನಿಸುವುದತಿಕಷ್ಟವೆನುತ ಶತ್ರುಘ್ನ ನೋಡಚ್ಚರಿಯನೆಂದನೊಲಿದು ॥ (37)
ತರಣಿಕಿರಣಗಳಲ್ಲಿ ಚರಿಸುವರಸಾಧ್ಯ ಬಂ ।
ಧುರದವಮಾರುತ ಚಲನೆಗೈಯಲಸವಳ ಮುಳದ ।
ನರರೆಲ್ಲ ಸಂಚರಿಸಲಳವಹುದೆ ನಿಬಿಡತರ ಕಳ್ತಲೆಯು ಕವಿದುರ್ಪುದು ॥
ಶರಭ ಶಾರ್ದೂಲ ಹರಿಕರಿಗಳಾರ್ಭಟಿ ಘೋರ ।
ತರ ಭೀಕರವನೀವುತದೆ ಮನುಜರಕಣ್ಗೆ ಮುಂ ।
ದರಿಯಬಾರದಭಿಲ ಕಾನನವ ಪರಿಯನುಂ ಶತ್ರುಘ್ನ ನೋಡೆಂದನು ॥ (38)
ಬಿಡುಗಣ್ಣಡಂಗುಳಯು ತಾಣ ವೇರಳವಿ ಮುಂ ।
ದಡಿಯಿಟ್ಟಡಾವಾವ ನೆಲದಿನೆಲೆಗೈದು ತಪ ।
ದೊಡರಿರ್ಪರೋ ವಿಪ್ರರೀ ನಿಬಿಡತರತಮದಿ ದಿಟ್ಟಿಗೋಚರವಾಗದು ॥
ಕಡೆಗೆ ವಿಪರೀತ ಬಂದಡಸಲವನನುಭವಿಸಿ ।
ಬಿಡಿಸಲಸದಳ ಚಮೂನಾಥಗಿಂಗೆಚ್ಚರಿಸಿ ।
ತಡೆಸು ಬಲಮಂ ಗಹನ ಗೋಚರರಮುಖದಿಂದಲರಿದೈದವೇಳ್ಪುದೆನುತ ॥ (39)
ಎನುತಲಾಳೋಚಿಸುತ ವಿಪಿನಚರರಂ ಕರೆದು ।
ವನದೊಳಾವೆಡೆಯೊಳಹನರಸನೆಂದರಿತು ಬಹು ।
ದೆನುತ ನೇಮಿಸಲೈದಿ ಕಾನನವನೆಲ್ಲಮಂ ಸುತ್ತಿ ಪಂಥಾನವಿಡಿದು ॥
ಮುನಿಮುನಿಗಳಹ ನೆಲೆಯನನುವರಿತು ನೋಡುತ್ತ ।
ಜನಕಜಾರಮಣನಿಹ ಪರ್ಣಶಾಲಾಂತರದ ।
ಸನಿಹಕ್ಕೈದುತ ನೋಡಿ ತಿಳಿದು ಕುರುಹಗಳಂದ ಬೇಗದಿಂದೈತಂದರು ॥ (40)
ಬಂದು ವಂದಿಸಿ ಭರತಗೊರೆವರೆಲೆ ದೇವ ಕೇಳ್ ।
ಮಂದಾಕಿನೀತಟದಲತಿರಮ್ಯತರ ಪರ್ಣ ।
ಮಂದಿರದಿ ಸೀತೆಸಹ ರಘುವೀರನೊಪ್ಪಿರುವ ಪೊರವಳಯದೊಳ್ ದೂರದಿ ॥
ನಿಂದಿರ್ಪ ನಾ ಸುಮಿತ್ರಾತನಯ ಜಾಗ್ರತೆಯೊ ।
ಳೊಂದಿ ನಾಲ್ದೆಸೆಯ ನಿಟ್ಟಿಸುತಲಾ ನೆಲ ಸುರಪ ।
ನಿಂದಗವ್ಯಮೆನುತ್ತ ಬಿತ್ತರಿಪ ನುಡಿಗಳಂ ಕೇಳ ಮುದವಾಂತ ಮನದಿ ॥ (41)

ಸೇನೆಯುಂ ಸಂತೈಸುತ್ತೊಂದೆಡೆಯೊಳಿರ್ಪ್ಪ ನೃಪ।
ಸೂನು ಕುರುಪರಿತಧೀಮಂತವನಚರರೊಡನೆ।
ಸಾನಂದದಿಂದಣ್ಣನಂ ಕಾಣ್ಬ ಹರ್ಷದಿಂ ವಿಪಿನದೊಳಪೊಕ್ಕನಡೆದು॥
ನಾನಾಪರಿಯ ಗುಲ್ಮಲತೆಪಲ್ಲವಂಗಳಂ।
ನಾನುರಾಗದಿ ಪರಧ್ಯಾನದಿಂ ಕುಳ್ಳಿರ್ಪ।
ಮಾನಿಜನರಂ ನೋಡುತಲ್ಲಲ್ಲಿ ಪಥಗಳಂ ನೋಡುತಂ ನಡೆತಂದರು॥ (42)
ಸೂರಿಯನ ಬೆಳಕರಿಯದಾಬನದೊಳಹ ಸಕಲ।
ಚಾರುಖಗಮೃಗನಿಚಯ ಯುವನಚರ ಪುಳಿಂದಿನಿಯು।
ಮೋರೆ ಗಡೆಗಣ್ಣಿನಕಟಾಕ್ಷ ಬೆಳ್ದಿಂಗಳೊಂದಲ್ಲದ ನ್ಯತ್ರ ಬಳಕ॥
ಮಾರಮಂದಾನಿಲ ವಸಂತರಾಡುಂಬೊಲಂ।
ಕ್ಕೈರವಾಪ್ತನ ರಶ್ಮಿಯೊಂದದೊಲ್ತಡೆಯಾಗಿ।
ಬೇರಟವಿ ಶಿವನಂತೆ ತಾಳ್ದು ಘೋರಾಕೃತಿಯ ಕಾಣ್ಬಡಿಸಿತಿಖರಿನಲ್ಲಿ॥ (43)
ವನವಂಡೆಗಳ ನೋಡುತಲ್ಲಲ್ಲಿ ತಾಪಸೀ।
ಜನರ ನಿಟ್ಟಿಸಿ ಮೃಗಗಣಾಕೀರ್ಣ ರುಲ್ಲಿಕಾ।
ಘನರವಂಗಳ ಕೇಳಿ ಭಿಲ್ಲರೈದುವ ಮಾರ್ಗದನುಸರಣೆಯಿಂದೇರುತ॥
ಜನನಾಥಸಂಘ್ರಿಗಳ ಕಾಣಲುಜ್ಜುಗಗೊಂಬ।
ಮನವಡಿಶವಕದಿ ಭರತ ಬರುತಿರ್ಪ ನಿತ್ತರಘು॥
ವನಧಿಚಂದ್ರಮ ನೋಡಿ ಧರಣೀ ತನೂಭವೆಯ ನಸುನಗೆ ಯೊಳಿಂತೆಂದನು॥ (44)
ಗಿರಿಯ ವೈಭವವ ನಿಟ್ಟಿಸಿಪರೆನ್ನ ಮಾನಸಂ।
ಹರುಷಗೊಳುತಿದೆ ನವೀತರು ವೃಕ್ಷತಂಡಗಳ।
ಪರಿಪರಿಯ ಮೃಗಪಕ್ಷಿನಿಕರಂಗಳಿಟ್ಟುಪಫಲಾಶೆ ತಪಿದೋರುತಿದೆಕೊ॥
ಅರಸಿ ನೋಡೆಂದು ಶ್ರೀರಾಮಪುರಿನಾಯಕಂ।
ನರಲೀಲೆಯಿಂದ ನಾನಾಜನರ ಮೋಹಕದಿ।
ಬೆರಸಿ ಕೃತಕೃತ್ಯರಂ ಮಾಳ್ಪನಜ್ಞಾನ ದಿಂದಂಟದುರುಪರುಷದಂತೆ॥ (45)

(ಸಂಧಿ 28 ಪದ 1243)

---

## ಇಪ್ಪತ್ತೊಂಬತ್ತನೆಯ ಸಂಧಿ.

ಸೂಚನೆ॥ ಮಿತ್ರವಂಶೋದ್ಭವಂ ಶ್ರೀರಾಮಚಂದ್ರಮಂ ಸು।
ಮಿತ್ರಾತ್ಮಸಂಭವನ ನೊಡಗೊಂಡುಬಂದು ಭೂ।
ಮಿತ್ರಜನಕನ ತನುಜೆ ಸಹಿತಮಾನಂದದಿಂ ಚಿತ್ರಕೂಟದೊಳಿರ್ದನು॥
ಅರಸಿನೋಡೀಚಿತ್ರಕೂಟಾದ್ರಿ ಸಾಕೇತ।
ಪುರದ ನೆನಹಂ ಮರಸುತಿದೆ ಬಂಧುವರ್ಗದೊಲ್।
ವರಮಾನಿಸಂಕುಲಂ ಮೃಗಪಕ್ಷಿಗಣಮೈದೆ ತೋರುತಿದೆ ಚಿತ್ತಕೆಂದು॥
ಧರಣಿಜೆಯ ಕೈವಿಡಿದು ಶ್ರೀರಾಮ ಚಂದ್ರನತಿ।
ಹರುಷದಿಂ ತದ್ಗಿರಿಯ ಸಂಭ್ರಮವ ನೀಕ್ಷಿಸುತೆ।
ಬರಬರಲ್ ಮುಂದೆ ಕಂಗೊಳಸಿತ್ತುದೇಪೇಳ್ವೆ ನಗರಾಜತನುಸಂಭವೆ॥ (1)

ಪಾತಾಳಗತನಾಗಕುಲ ಮಿತ್ರಫಣಿಫಣೋ ।
ದ್ಘಾತ ಮಣಿಗಣಾರಚಿಪುಂಜಗಳ್ತಚ್ಛಾಯೆಸ ।
ವಾತದಿಂ ಮೇಲೆದ್ದುಬರಲಂಬುಜೋದ್ಭವಂ ಕಂಡಧಿಕಹರುಷದಿಂದ ॥
ಭೂತಳಕೆ ಚಿತ್ರಮೆನಲತ್ರಿಚಿತ್ರತರವಾಗಿ ।
ಶಾತಕುಂಭಾಚಲಕೆ ಮಿಗಿಲಾಗಿ ತೋರ್ಪಂತೆ ।
ಸಾತಿಶಯದಿಂ ಮುದ್ದೆಗೈದಿಟ್ಟನೆನೆ ಚಿತ್ರಕೂಟಾದ್ರಿ ರಂಜಿಸಿದುದು ॥ (2)

ರವಿಯಂತೆ ಗೋನಿಕರಸಂಶೋಭಿತಂ ರಮಾ ।
ಧವನಂತೆ ರುಚಿರವನಮಾಲಾನ್ವಿತಂ ಪದ್ಮ ।
ಭವನಂತೆ ನಿಕಟಭ್ರಮದ್ರಾಜಿ ಹಂಸನುರು ಧರಣೀಶ ಸೈನ್ಯದಂತೆ ॥
ನವಖಡ್ಗಸಮುದಯೋದ್ಭಾಸಿತಂ ಶಮಧನರ ।
ಭವನಂಗಳಂತೆ ಶಿಖಿಸಂದೋಹರಾಜಿತಂ ।
ಕುವಲಯಪ್ರಿಯನಂತೆ ದ್ವಿಜಸೇವಿತನುಮೆಂದು ಶೈಲೇಂದ್ರನೆಸೆದಿರ್ದನು ॥ (3)

ರಾಮಣೀಯಕಶಿವಾಲಾಪ ಸಂರಾಜಿತಂ ।
ಧೀಮುಕರ ನಾಗಕಟಕೋಜ್ವಲಂ ರಮ್ಯತರ ।
ಸೋಮಾರ್ಕ ಶಿಖಿನೇತ್ರ ಸಂಯುತಂ ಕಮನೀಯ ನೀಲಕಂಠಸುಶೋಭಿಯು ॥
ಶ್ರೀಮನ್ಮಹಾದುರ್ಗನಚ್ಛಾಯಾನ್ವಿತಂ ದ್ವಿಜ ।
ಸ್ತೋಮಸೇವಿತಪಾದಮನಿಶಾಂತಮಂ ಪರಮ ।
ಗೋಮಂತನಾಗಿ ಶಿವನಂತೆ ರಾರಾಜಿಸಿದನಚಲೇಂದ್ರನತಿಶಯದೊಳು ॥ (4)

ನಿರತ ಮೂರ್ಧಕ್ಷಾವೃತನುಮಾಗಿಚಂದ್ರಮನಲ್ಲ ।
ಶರಧರಂತಾನಾಗಿ ಘನರಾಜನಲ್ಲ ಭೂ ।
ಸುರ ವಿದ್ರುಮಾನ್ವಿತನುಮಾಗಿ ವಾರಿಧಿಯಲ್ಲ ತಾರೆಯಿಂ ಶೋಭಿಯಾಗಿ ।
ಗುರುವಲ್ಲ ಶೃಂಗಯುತನಾಗಿ ಕಾಂತಾಮನೋ ।
ಹರನಲ್ಲ ಕದಳೀವಿಲಾಸಕರವಾಗಿ ನೃಪ ।
ವರ ವೇದಳವಲ್ಲವೆಂದೆಸೆದನಾಜೀಮೂತನಾಥನತಿ ವಿಭವದಿಂದ ॥ (5)

ಹರಿಮಯಂ ಮದಕಲಿತಕರಿಮಯಂ ಫಲಭರಿತ ।
ತರುಮಯಂ ನಿರ್ಮಲಸುಶರಮಯಂ ಚಾರುಸ್ವ ।
ರ್ಕರಮಯಂ ಕರಮೆಸೆವದರ ಮಯಂ ಹರಿಣಮಯ ಮೃಗೇಶ್ವರ ಶುಭಮಯವು ॥
ಉರಗಮಯಮಳಮಯಂ ತುರುಮಯಂ ಪರಿವ ನಿ ।
ರ್ಝರಮಯಂ ಭಯದ ಕಾಸಾರಮಯಮಿರುವಮಾ ।
ನರಮಯಂ ಚರಿಪ ಖೇಚರಮಯಂ ದಿವ್ಯಸುಮಸುರಭಿಮಯವಮಾಗಿರ್ದುದು ॥ (6)

ಉರುತರ ಕರಾಳ ಕಾಸರಗಳಂ ಸರಗಳಂ ।
ಪಿರುವತ್ಪ್ರಮತ್ತ ಕಾಕೋಲದಿಂ ಕೋಲದಿಂ ।
ನಿರುಪಮೋತ್ಫುಲ್ಲಕಿಂಶುಕಗಳಂ ರತ್ನಕೂಟಂಗಳಿಂದ ॥
ಹರಿರಾಜಮಾನಕಂದರಗಳಂ ದರಗಳಂ ।
ಸ್ಫುರದತಿಕ್ರೂರ ಪನ್ನಗಗಳಂ ನಗಗಳಂ ।
ಪರಮ ಪುಷ್ಪಾಚ್ಛಟಾಸುರಭಿಯಿಂ ಸುರಭಿಯಿಂದೆಸೆದನಾಕ್ಷಿತಿಧರೇಂದ್ರಂ ॥ (7)

ಸಂತತಂ ಸತ್ಕುಲ ಭ್ರಾಜಿತನುಮಾಗಿದ್ವಿಜ।
ಸಂತತಿಯುನನುದಿನಂ ಪೋಷಣಂ ಗೈವುತಂ।
ಸ್ವಾಂತದೊಳ್ ಹರಿಯುಸಂ ನೆಲೆಗೈದು ವಂಶಾಭಿವೃದ್ಧಿಕರನೆಂದೆನಿಸುತಂ॥
ಸಂತುಷ್ಟಿಗೊಳಸುತಂ ಗೋಪಾಲರಂ ಪರಮ।
ಶಾಂತಃವಿಶೇಷೋಪಚಾರಗಳ್ಗೆಡೆಯಾಗಿ।
ಸಂತೋಷದಿಂದಿರ್ಪ ವಿಪ್ರವರನಂತೆಸೆದನಾಧರಾಧರವರೇಣ್ಯಂ॥ (8)
ಮುನ್ನಸುರನಾಯಕನ ಶತಕೋಟಿ ಹತಿಯಿಂದೆ।
ಬನ್ನಬಟ್ಟುರುತಪಂಗೈಯಲ್ಕೆ ಶಿರಿಯುಮನ।
ದನ್ನನೈತಂದಿರ್ಪನೆನಗಿನ್ನು ಭಯುವಿಲ್ಲಮೆಂದಧಿಕ ಗರ್ವದಿಂದ॥
ಉನ್ನತೋನ್ನತವಾಗಿ ಬೆಳೆ ಬೆಳೆವುತಿರೆ ಕಂಡು।
ಬನ್ನಗೊಳರ್ಕಳಿರೆಯುಂ ಮಹಾಭೀತಿಯಿಂ।
ರನ್ನಮಂ ಕೊಟ್ಟು ಸಂತೈಸಿದನೊಯೆನೆ ರತ್ನಶೃಂಗಂಗಳೆಸೆದಿರ್ದವು॥ (9)
ಕನಕರಾಜಿತ ನೀಲವರ್ಣಂಗಳಿಂದ ಮಂ।
ಜನಶೈಲ ಕೈಲಾಸ ಮೇರುಪರ್ವತಗಳತಿ।
ಘನಗರ್ವಮಂ ತಾಳದಿಪ್ಪವಿನಿತಕ್ಕೆ ನವಧಾತು ನವರತ್ನಂಗಳು॥
ಮಿನುಗುತಿಹ ನವಲೋಹಮೆನ್ನೊಳರೆ ಗರ್ವಿಸದೆ।
ಮುನಿಮೃಗಾವಳಿ ಪಕ್ಷಿಗಾಸ್ಪದಂ ತಾನೆನಿಸು।
ತನುದಿನಂ ಪೋಷಿಪೇಂ ಸಕಲ ಜೀವರನೆಂದು ಶೋಭಿಸಿದನಚಲೇಂದ್ರನು॥ (10)
ಮಿರುಗುವ ಲತಾಪುಂಜಕುಂಜದೊಳ್ ಶೋಭಿಸುವ।
ಸುರಯಕ್ಷಗಾಂಧರ್ವ ಕಿನ್ನರಾಂಗನೆಯುರುರು।
ತರಗಾನಮಂ ಕೇಳುತಂಬಂದು ಮರಳದಿಹವತ್ಸಯುತ ಧೇನುಗಳನು॥
ಕರದು ಪಾಲ್ಗರೆದುಂಬ ಶಬರಿಯರ ತನುಕಾಂತಿ।
ಪರಪುತಿರಲಂಜನಾ ಚಲಮಿದೆಂಬಂದದಿಂ।
ಕರವೊಪ್ಪುತಿರ್ದ ದಾರ್ಢ್ಯಮಂ ಬೀರುತಂ ಭೂಧರಂ ನೋಳ್ಪಜನಕೆ॥ (11)
ಶಿಖರಾಗ್ರದಿಂ ಪರಿವ ನಿರ್ಝರೋದಕಕಣಂ।
ಸುಕರಮುಕ್ತಾಫಲಗಳೆಂದು ಕೈರಾತಿನೀ।
ನಿಕರಮಭಿಲಾಷೆಯಿಂ ಮೇಲುಮಂ ತೆಗೆದೊಡ್ಡಿ ಗುಂಜದಂಡೆಯುಕಾಂತಿಯು॥
ಪ್ರಕಟಿಸಲ್ಕದ್ವನದ ಪದ್ಮರಾಗಾಯುಕೆಂಪಾಗೆ।
ಶುಕಕುಲಂ ಬಂದು ಕರ್ದುಂಕುತ್ತಮಿರೆ ಮಧುಪ।
ನಿಕುರುಂಬ ಮಾತರುಣಿಯರ ಕುಚಂ ಕಮಲ ಮೆಂದೆರಗುತಿಹ ಪೇಸೆಂಬಿನು॥ (12)
ಪದುಳದಿಂ ತಪ್ಪಲಂ ಮೇವರೈತಂದಿರ್ಪ।
ಕದನಿಜಯುಮಂ ಕಂಡು ನಿಜಜಾತಿಯೆಂದೈದಿ।
ಮದವೆತ್ತು ಮಾತಂಗ ಮುಗ್ರತರ ಕೋಪದಿಂ ತಿವಿಯುಲುರುಶಿಲೆಗೆತಾಗಿ॥
ರದನಗಳ್ ಮುರಿದು ಕೆನ್ನೀರೊಸರೆ ವೇಗದಿಂ।
ಬೆದರಿ ಬರುತಿರೆ ನೋಡಿ ಪೆಣ್ಣಾನೆ ಮರುಕದೊಳು।
ರುಧಿರಮಂ ತೊಳೆತೊಳೆದು ಮದ್ದನಿಕ್ಕುತ್ತಿರ್ದ ದೇಸೆಂಬೆ ನಚ್ಚರಿಯನು॥ (13)

ಸುರವಧುಗಳಕ್ಷಿ ರುಚಿ ದರಹಾಸರೋಚಿಯಿಂ ।
ಪುರಹರನ ಶೈಲದಂತೆಸೆದಿರ್ದುದೊಮ್ಮೆ ತ ।
ನ್ನಿರುಪಮಾಂಗದ ಕಾಂತಿಯಿಂದೊಮ್ಮೆ ಕನಕಾದ್ರಿಯೆಂಬಂತೆ ಶೋಭಿಸಿದುದು ॥
ಮಿರುಪ ತತ್ಕುಂತಳದ್ಯುತಿಯಿಂದಮೊಮ್ಮೆ ತೃಣ ।
ಚರಗಿರಿಯು ಮೆಂಬಂತೆ ರಾರಾಜಿಸುತಮಿರ್ದು ।
ದಿರವನುಂ ನಿಶ್ಚಯಿಪ ರಾರೆನುತಮಲ್ಲಲ್ಲಿ ಬೆರಗಾಗಿ ನೋಡುತಿಹರು ॥ (14)
ವೃತ್ತಕುಚೆಯರ್ ಪೇಳ್ವ ಬಿತ್ತರದ ಗಾನಕ್ಕೆ ।
ಪುತ್ತದಿಂ ಪೊರಟು ತಲೆಯೆತ್ತಿ ನೋಡುವ ಫಣಿಯ ।
ನೆತ್ತಿಯೊಳಗಿರ್ಪ ಮಣಿಯುತ್ತಮದ್ಯುತಿಯಿಂದೆ ರತ್ನಮಯ ಸಾನುವಾಗೆ ॥
ವಿತ್ತೇಶ ಸುರಪಸುರಸತ್ತಮರ್ ಸಂತಸಂ ।
ಬೆತ್ತು ತಮಗಾಲಯಂ ಮತ್ತೊಂದುಮಾಯಿತೆಂದು ।
ಮತ್ತೇಭಗಮನೆಯರ ವೊತ್ತಗಸುತಂ ಬಂದುಮೆತ್ತಲುಂ ಕ್ರೀಡಿಸುವರು ॥ (15)
ಹಾರಿದ್ರ ಸ ಮಿಶ್ರ ತಾಳೀದಳಾಬದ್ಧ ।
ಚಾರುತಾಟಂಕಗಳನುರೆ ಧರಿಸಿ ವಲ್ಕಲದ ।
ಸೀರೆಗಳನುಟ್ಟು ಕತ್ತುರಿ ಬೊಟ್ಟನಿಟ್ಟು ಮೆರೆನೊಸಲೊಳುರುಸೌಖ್ಯದಿಂದ ॥
ಭೂರುಹದ ನೆಳಲೊಳಾಶ್ರಮಗೈದು ಪತಿಯ ಪದ ।
ಸಾರಸವನರ್ಚಿಸುತಮನುದಿನಂ ಮುನಿವರರ ।
ನಾರಿಯರ ತಂಡಮತಿ ಶೋಭಿಸಿದುದಾ ಗಿರಿಯ ಸಾನುಪ್ರದೇಶದಲ್ಲಿ ॥ (16)
ಉರಗ ನಕುಲದೊಳೊಂದುಗೂಡಿ ಶೋಭಿಸುತಿಹವು ।
ಹರಿಣ ಶಿಶುವಿಗೆ ಮೊಲೆಯ ನೂಡುವದು ಶಾರ್ದೂಲಿ ।
ಕರಿಕಲಭಮಂ ಮುಟ್ಟುವುದು ಸಿಂಹ ಶಾಬಕಂ ಪಶುಪುಲಿಗಳೊಂದೆಡೆಯೊಳು ॥
ಮರನಡಿಯೊಳೊರಗಿರ್ಪವತಿಮೋದದಿಂದೆ ಮಂ ।
ಜರಪುಲಿಗಳುರು ಮೋಹವಂತಾಡುತಿರ್ಪ ವನ ।
ವರತಮಧಿಕಸ್ನೇಹಭಾವದಿಂದಿರ್ಪೊಡಿದು ಗಿರಿವರದ ಮಹಿಮೆಯಲ್ತೆ ॥ (17)
ಮುನಿವಟುಗಳೊಂದಾಗಿ ವ್ಯಾಘ್ರಮಂ ಪಿಡಿತಂದು ।
ತನುವ ನೇವರಿಸುತಂ ರಜ್ಜುಬಂಧನಗೈದು ।
ತಿನಲಿತ್ತು ಹವಿಯ ಶೇಷವನೈದೆ ಮಿಸಿದೆಡೆಗಳದೊಯ್ದು ಮುದ್ದುಗೈದು ॥
ಅನುವಿನಿಂದಂ ಸಮಿತ್ಕುಶಕಂದ ಮೂಲಂಗ ।
ಳನಿತನುಂ ಪೊರೆಗಟ್ಟಿ ಪೊರಿಸಿ ಸಿರಿಮಧ್ಯದೊಳ್ ।
ಮಿನುಗುತಿಹ ಮನಿಗಳ್ಗೆ ಕೊಂಡೊಯ್ವರನುದಿನಂ ಪೇಳಲೇನಚ್ಚರಿಯನು ॥ (18)
ಗೊರವಂಗೆ ಪಾಂಗೆನಿಪ ಕಿತ್ತಡಿಗಳನುದಿನಂ ।
ವಿರಚಿಸುತಮಿರ್ಪಗ್ನಿಹೋತ್ರಧೂಮಂ ಮನೋ ।
ಹರವಾಗಿ ದಂಡದೋಲಂಬರಾಂಗಣಕಡರಲಮರೇಂದ್ರ ಪುರದೊಳಿರ್ಪ ॥
ತರುಣಿಯರ್ ತದ್ಗಿರಿಯ ಸಾನುಪ್ರದೇಶಕಂ ।
ನಿರತಮೈತರ್ಪರಿದು ಕಬೊರ್ನ್ನದಿಂದೆಸಗಿ ।
ದುರುತರದ ಸೋಪಾನ ಮೆಂಬಂತೆ ಕಂಗೊಳಿಪುದೇನೆಂಬೆ ನತಿಶಯವನು ॥ (19)

ನೀರದಗಳೈತಂದು ಶಿಖರಮಂ ಕವಿಯಲಾ ।
ಹಾರಮಿದ ಪಿಡಿದು ಮೌಂಸಂಗೈಯುವೇಳ್ಕೆಂದು ।
ತೋರಮೊಲೆಗಳ ಕೊಂಡು ಗುರುಳೋರೆದುರುಬಿನೆಳೆದಳರುಡಿಗೆ ಎಣ್ಣೆಮ್ಯೆಯು ॥
ಕೈರಂತ ನಾರಿಯರ್ ತಮತಮಗೆ ಚರ್ಚರದೊ ।
ಳಾರೈದು ಭೋಜನಂಗಳನಿಟ್ಟು ಕಾದಿರಲ್ ।
ಚಾರುತರಶತಶೃಂಗಪರ್ವತಮೊ ಯೆಂಬಂತೆ ಭೂಧರಂ ಕಣ್ಗೆಸೆದುದು ॥ (20)
ತರಣಿ ಯುದಯದ ಮುನ್ನ ಶಬರಸತಿಯೊರ್ವೆ ಪು ।
ಷ್ಕರತಳದೊಳಂ ಶೋಭಿಸುವ ಮಿಾನ್ಗಳಂ ಮಲ್ಲಿ ।
ಯರಳಿಂದು ಪುಷ್ಪಾಪಚಯಕೆ ಶಿಖರವನೇರ್ದು ನೆಲೆಯುಸಳವಡಿಸಿಕೊಂಡು ॥
ಕರಗಳಂ ನೆಗೆನೆಗಪಿ ಚರಿಸಿ ಕಂಗೊಳಿಸಿದಳ್ ।
ಸರಸಿಜಪ್ರಿಯರಶ್ಮಿದಾಮಮಂ ಪಿಡಿಪಿಡಿವು ।
ತುರೆಕೋಡಕಲ್ಲ ಗಳಿಯಂ ಪತ್ತಿಯಾಡುತಿಹ ಕೋಲ್ಲಡಿಗರಬಲೆಯಂತೆ ॥ (21)
ಮಿಸುಪ ದರ್ಭಾಸನದ ಬನಜೋಗ ಪಟ್ಟಿಗೆಯು ।
ಶಶಿಕಾಂತರುಚಿಭಸಿತಲೇಪನದ ರುದ್ರಾಕ್ಷಿ ।
ವಿಸರಾಕ್ಷಮಾಲಿಕೆಯು ಜಿತಪವನಪಂಚಕದ ನಿಶ್ಚಲತ್ವದ ಮೌನದ ॥
ಪಸಿವುತೃಷೆನಿದ್ರೆಗಳ ಪಂಗಿನಿತುವಿಲ್ಲದಿಹ ।
ಬಿಸಿಲು ಛಳಮಳೆಗಳಂಟದ ದಿವ್ಯ ವಿಗ್ರಹದ ।
ಕುಸುಮಾಸ್ತ್ರನರುಚಿಯಂ ಗೆಲ್ದಯೋಗಿಯು ತೆರದೊಳೆಸೆವಸವನೀಧರೇಶಂ ॥
ವಿತತ ಮೃಗನಾಭಿಯಂ ಗಳಕೆ ಲೇಪಿಸಿ ಜವು । [(22)
ತ್ಕ್ರಿತಿಯಿಂದೆ ಕುಂಕುಮದ ಬೊಟ್ಟನಿಟ್ಟಂ ನೊಸಲೊ ।
ಳತಿಶಯದಿ ಜಡೆಗಟ್ಟಿ ಸುತ್ತಿ ಪವಿರಚಿತ ಶಿಖಿಭೂಷಣಂದಾಳ ತನ್ನ ॥
ಪತಿಯೊಡನೆ ಸುರರಮಣಿ ಸುಖಮಿರಲ್ ಪೊದರಿನೊಳ್ ।
ರತಿನಾಥ ನೈತರಲ್ಕಂಜಿ ಪಿಂದಿರುಗಲ್ಕೆ ।
ಯತಿಕಾಲಂ ತಪಕೆ ನಿರ್ವಿಘ್ನಮಾಯ್ತೆಂವಿದರ್ದಾಗಿರಿನಿತಂಬವಲ್ಲಿ ॥ (23)
ಮೇಲಣಿಂದಿಳಮಸಲಮೆರಡು ಕವಲಾಗಿ ನವ ।
ನೀಲೋಪಮದ ಶಿಲೆಯುಮೇಲೊಂದು ಮತ್ತೊಂದು ।
ಕೀಳು ಚಂದ್ರೋಪಲದ ಮೇಲೆ ಪರಿದೆರಡೊಂದುಗೂಡಿ ತನ್ಮೂಲದಲ್ಲಿ ॥
ಲೀಲೆಯಿಂದಮರಧುನಿ ಯಮುನೆಯರ ಸಂಗಮದ ।
ಕೂಲವೆಂಬಂತೆಸೆಯಲಲ್ಲಿರ್ಪ ಸನ್ಮುನಿ ।
ಜಾಲಮನಿಶಂ ಸಸ್ನಾನಪಾನಂಗಳಂ ಮಾಳ್ಪುದೇನೆಂಬೆನತಿಶಯವನು ॥ (24)
ಮಾರ್ತಾಂಡ ಮಂಡಲದ ನಂಡಲೆವ ಶೃಂಗಗಳ ।
ಕಾರ್ತಸ್ವರದ್ಯುತಿಯನಾಂತೈದೆ ಪರಿವೃತಿಹ ।
ನೀರ್ತಡಿಯೊಳುರೆ ಬೆಳೆದ ತನ್ಮಯದ ಶರವಣದ ಪೊದರಿನೊಳ್ ಹರಗಿರಿಶರಾ ॥
ಮೂರ್ತಿಗಳನಿಟ್ಟರ್ಚಿಸುತ್ತ ತನ್ಮಹಿಮೆಯಂ ।
ಕೀರ್ತನಂಗೈವುತ್ತಮಾನಂದರಸದಿಂದ ।
ನರ್ತಿಸುವ ತದ್ಭಜಕರೆಸೆದಿರ್ದರಾಗಿರಿಯ ಕಟಕಪ್ರದೇಶದಲ್ಲಿ ॥ (25)

ಗೋಮಯಂ ತಾನಾಗಿ ಗೋನಿಕರ ವಿರಹಿತಂ ।
ಸೋಮಕಾಶ್ರಯನಾಗಿ ಸೋಮಮಾತಿಲಂಘನಂ ।
ಪ್ರೇಮದಿಂದೆ ಪಲಾಶರಯುತನುಮಾಗಿ ಪಲಾಶಸಂಹಾರಿ ತೋಷಕಾರಿ ॥
ಆಮೋದಿಸುಮಮುನುಮಾಗಿ ಸುಮನೋಹರಂ ।
ಕಾಮಗಾಸ್ಪದನಾಗಿ ಕಾಮಾರಿಪೋಷಕಂ ।
ವಾಮಾನ್ವಿತನುಮಾಗಿ ವಾಮನನದುರ್ಗಮನನೆಂದೆಸೆದ ನಾಗಿರೀಂದ್ರ । (26)
ವೇಣು ರಂಧ್ರಾವಳಿಗತಾಗಮನಪವಮಾನ ।
ಮಾಣವಕ ? ಸಂಭೂತ ಗಾನಮಂ ಕೇಳುತಿರ ।
ಲೇಣಶಿಶು ಸಂಕುಲಂ ಬನ್ಮೂಲವಲ್ಮೀಕಕುಹರದಿಂದಹಿಗಳೆದ್ದು ॥
ಮಾಣಿಕ್ಯಮಂಡಿತದ ಹೆಡೆಗಳಂ ಮೇಲೆತ್ತಿ ।
ಕಾಣುತಂ ಬಳಸಿ ಪರಿದೋಡಲಕ್ಷಿದ್ಯುತಿ ।
ಶ್ರೇಣಿಯಿಂ ಚೆಲ್ವುಮದದ್ರಿ ತಾಂ ತಳೆರ್ದ ನೀಲಮಣಿಮಾಲೆಯಂತೆ ॥ (27)
ಕಮಲನೇತ್ರಂ ಭಾಸ್ಕರಾನ್ವಯದೊಳವತರಿಸಿ ।
ರಮಣಿಸಹಜಾತಸಹಿತಿಲ್ಲಿಗೈತಂದಿಹಂ ।
ನಿಮಗಿನ್ನು ದಾನವರ ಭಯಮಿಲ್ಲ ಸ್ವಸ್ಥಾನದಲ್ಲಿರ್ಪುದುಚಿತಮೆಂದು ॥
ಭ್ರಮರ ಝೇಂಕಾರ ವಚನೆಗಳಂ ಮರುಚ್ಚರಿಸುತ್ತ ।
ಕಮನೀಯ ಕಿಸಲಯಸುಹಸ್ತಂಗಳಿಂದೆ ಸಂ ।
ಯಮಿನಿಕರಮಂ ಕರೆವುತಿರ್ಪುವೆನೆ ತನ್ಮಹೀಧರನಾಥ ನೊಪ್ಪಿರ್ದನು ॥ (28)
ಸುರರಾಜನಿನವಂಶಸಂಭೂತರಾಘವನ ।
ದರುಶನಂಗೈವೆನೆಂದೈರಾವತವನೇರ್ದು ।
ಭರದಿಂದ ಬಂದಿಕ್ಷಿಸುತಮಿರ್ಪನೆನೆ ಚಂದ್ರಕಾಂತರುಚಿಯಿಂ ಶೋಭಿಪ ॥
ಗಿರಿಯಗ್ರದಲ್ಲಿ ಮಕರಂದ ಪಾನಾಸಕ್ತ ।
ತರುಣಾಳಿಯೊಂದೊಂದನಾಂತೆಸೆವ ಫುಲ್ಲಸುಮ ।
ಭರಿತೋರುಮಲ್ಲಿಕಾ ವೀರುಧಂ ರಾರಾಜಿಸುತಮಿರ್ಪುದತಿಶಯದೊಳು ॥ (29)
ಜಲಪಾನವಭಿಲಾಷೆಯಿಂದಲೈತಂದ ಕರಿ ।
ಕಲಭಗಳ್ ಕಾಸಾರಮಂ ಪೊಕ್ಕು ಕರಗಳಂ ।
ನಳಿನಂಗಳಂ ಕೀಳಲೊಡನೆ ತನ್ಮಧ್ಯಗತದಳಿಕುಲಂ ಪಾರಲಾಗಾ ॥
ಸಲಿಲಧರದಂತಾಗೆ ತಳರೆಲರ ಸೋಂಕಿನಿಂ ।
ಪೊಳೆವ ಸೌದಾಮಿನಿಯು ಪೋಗೆ ಪಾರಾವತದ ।
ಗಳರವಂಗುಡುಗಾಗೆ ವರ್ಷಾದಿಯೆಂದುಬ್ಬಿ ಕೇಕಿಗಳ್ ಕುಣಿವುತಿಹವು ॥ (30)
ಮರಕೇರಿ ಮಧ್ಯಮಂ ಕುಡಿದು ಪುತ್ತವನಗೆದು ।
ಸುರಿದು ಮಧುವಂ ಸೊಕ್ಕುದಳೆದು ಪರಿದಾಡುತಿಹ ।
ಕರಡಿಯಂ ಕಂಡು ಭಯಗೊಂಡೊರ್ವಸುರತ ಮಣಿಪರ್ವತವನೇರಲವಳ ॥
ಪರಿಮಳಕೆ ಕರತಳಕೆ ತಾರುಬಿಗಧರಕೆ ।
ಪರಮ ಕೋಗಿಲೆ ನವಿಲ್ ಗಿಳಿಪಂಸೆಗೊಂದಣಂ ।
ಬರೆತೋರ್ದುದಜ ನದ್ರಿಚೆಲ್ವಿಕಗೆ ಮೆಚ್ಚಿತ್ತು ಚಿತ್ರತರ ಚೇಲಜಂತೆ ॥ (31)

ಈಗಿರಿಯ ಶಿಖರಮಂ ನೋಡುವಭಿಲಾಷೆಯಿಂ ।
ಪೋಗದುತ್ತಾಳ ಕಮುಸಾರಿಕೇಳಾಳಿಂಗ ? ।
ಳಾಗಸಕೆ ಬೆಳೆದೈದೆ ಕಾಣದಿರಲಾಶ್ಚರ್ಯಮಂಬಟ್ಟು ಬಳಿಕ ತಲೆಯ ॥
ತೂಗುವಂದದೊಳೆಲರ ಸೋಂಕಿನಿಂದೊಲಿದಾಡೆ ।
ಲಾಗಳಂಬುಜಭವಂ ನಿಜಸೃಷ್ಟಿ ಶೈಥಿಲ್ಯ ।
ಮಾಗದೊಲ್ ಪಾಶಬಂಧನಗೈದನೆಂಬಂತೆ ನಾಗವಲ್ಲಿಗಳೆಸೆದವು ॥ (32)

ಶೃಂಗ ಸೌಧಂಗಳಂ ಸನ್ಮಾರ್ಗವೀಥಿಯಿಂ ।
ರಂಗದುಗ್ರಹಾವರೋಧಂಗಳಂ ಚಾರುಲತೆ ।
ಕಾಂಗನಾನಿಚಯದಿಂ ಪುನ್ನಾಗಪುರುಷರಿಂ ಗಂಡಶಿಲೆ ಗಜಗಳಿಂದ ॥
ಕಂಗೊಳಪಮೃಗತೃಷ್ಣೆ ಹಯಗಳಂ ಶುಕಪಿಕೋ ।
ತ್ತುಂಗ ಪಾಠಕರಿಂದ ಷಟ್ಪದಮಯೂರಕುಲ ।
ಸಂಗೀತನರ್ತನಗಳಂ ಸಿಂಹರಾಜನಿಂ ನಗರದಂತೆಸೆದುದದ್ರಿ ॥ (33)

ತಳರಡಿಯ ನುಣ್ದೊಡೆಯ ಗಿಳನುಡಿಯ ಬಟ್ಮೊಲೆಯ ।
ನಳತೋಳ ತೆಳ್ವಸಿರ ಸಳಿನಡುವಿನೆಳೆನಗೆಯ ।
ಪೊಳಪಾಂತ ಬೆರೆನೊಸಲ ತಿಲಕದುರುಕಾಂತಿಗಳನಳನನಿಭನೇತ್ರಯುಗದ ॥
ಅಳಿಗುರುಳನಬಲೆಯರ್ ಜಲಕೇಳಿಗೈತಂದು ।
ಜಲಜಪತ್ರಂಗಳಂ ಸಲಿಲಮಂ ಚಿಮ್ಮೆ ಭೂ ।
ಲಲನೆ ತನ್ನಂ ಧರಿಸಿದಾತಗಭಿಷೇಕಮಂ ಮಾಳ್ಪಳೆಸಲೆ ಸೆದಿರ್ದನು ॥ (34)

ಹರಿಯಕ್ಷಿ ವಿಧಿಯ ಗದ್ದುಗೆ ಲಕುಮಿಗಿಕ್ಕೆ ಭಾ ।
ಸ್ಕರನ ಮಿತ್ರತೆ ಮನಸ್ಸಂಭವನತೋಮರಂ ।
ಪರಮೊಗಳ ಭೋಜನದ ಶಾಲೆ ಸೌರಭ್ಯದಾಗಾರವಾಗಿರಲು ಮುಗುಳ್ ॥
ತರುಣಿಯರ ಮುಖಶರ್ವರೀನಾಥನಿಂದೆ ತಾ ।
ಪರೆಯಾದೆವೆಂದು ಮರುಗುತ್ತಮಿರಲದ್ರಿಮಣಿ ।
ತರಣಿಯಿಂ ವಿಕಸನಂಗೈಸಿದುದೊ ಯೆನಲಬ್ಜ ಸಂಕುಲಂ ಶೋಭಿಸಿದುದು ॥ (35)

ತರಣಿಸಂಯುತನಾಗಿ ವಿದ್ರುಮಾನ್ವಿತನಾಗಿ ।
ಹರಿನಿಕ್ಕಯಾಗಿ ಸಾರಂಗಶೋಭಿತನಾಗಿ ।
ಪರಮಹಂಸಾಶ್ರಯನುಮಾಗಿ ಚಕ್ರಾವೃತನುಮಾಗಿ ಶಿರಯುತನುಮಾಗಿ ॥
ಉರು ಪುಂಡರೀಕ ವಿಭ್ರಾಜಿತನುಮಾಗಿ ಭೂ ।
ಸುರಮಹಾದ್ವಿಜರಾಜ ಸಂತೋಷಕರನಾಗಿ ।
ಶರಭಂಗ ವಿಲಸಿತನುಮಾಗಿ ವಾರಿಧಿಯಂತೆ ರಂಜಿಸಿದನಚಲೇಂದ್ರನು ॥ (36)

ಎಳೆಲೆಯ ಬಾಳೆಯೊಳ್ ಪುಟ್ಟಿರ್ಪ ದಿವ್ಯಹಿಮ ।
ವಾಲುಕದ ಕಂಪಿಗಳಿಕುಲಮೆರಗೆ ಜಂಬೂ ।
ಫಲಾಳಿಯೆಂದೆನುತ ಗಿಳಿವಿಂಡು ಬರೆ ಕಂಡು ತತ್ತುಂಡಗಳ್ ತಳರುವೆಂದು ॥
ಲೀಲೆಯಿಂ ಪಿಕನಿಕರಮೈತರಲ್ ತನುಕಾಂತಿ ।
ಜಾಲಮರೆ ಕಳ್ತಲೆಯೊಳಾಗೆ ಶಬರಾಂಗನೆಯ ।
ರೋಳಿ ಮನ್ಮಥಕೇಳಿಯೊಳಗಿರ್ದುದಾಗಿರಿಯ ಮೂಲಪ್ರದೇಶದಲ್ಲಿ ॥ (37)

ಚಾರುತರಶೃಂಗಾಗ್ರವಂ ಕವಿದ ಶುಭ್ರಮಾಯಾ ।
ನೀರಧರದೊಳ್ ಪೊಳೆವ ಮಿಂಚು ಕರವೊಪ್ಪಿದುದು ।
ಮಾರನುರುಕೇಳಿಗನುಕೂಲೆಯಾಗಿ ದುಕೂಲವಂ ಧರಿಸಿ ಮುಸುಕನಿಟ್ಟು ॥
ಧಾರುಣೀಧರನಾಥನೆಂಬ ಪ್ರಿಯನಂ ಸುತನು ।
ತೋರಲತಿಕಾಬಾಹುಗಳಳಿ ಬಿಗಿದಪ್ಪಿ ಸುರ ।
ನಾರಿಯೊರ್ವಳು ಮುಸಿಸುರತಾನುಮೋದದಿಂದಿರ್ಪಳೆಂಬಂದದಿಂದ ॥ (38)

ಸರಸಿಜಪ್ರಿಯಶಕಟಚಕ್ರಶಾಣೋಲ್ಲೀಢ ।
ಮರಕತ ಮಹಾಪದ್ಮರಾಗ ವೈಡೂರ್ಯತೃಣಾ ।
ಚರಪುಷ್ಯರಾಗ ವಿದ್ರುಮವಜ್ರಗೋಮೇಧಿಕೋಜ್ವಲಿತ ಶೃಂಗಾಗ್ರದ ॥
ಉರುಕಾಂತಿಯಿಂದದ್ರಿ ರಮ್ಯತರವಾಗಿ ಸುರ ।
ವರನ ಮಣಿಶೈಲಮೊ ವೈಶ್ರವಣನಾಲಯದ ।
ಕರುಮಾಡಮೊ ಸೂರ್ಯಶಶಿಗಳಕ್ಕೆಯೋ ನೋಡೆಗಿರಿಯಲ್ಲಮೆಸಲೆಸೆದುದು ॥ (39)

ನೀಲಕುಟ್ಟಿಮದಿಂದ ರನ್ನಪಸೆವಣ್ಣೆಯಿಂದ ।
ಬಾಳೆಗಂಬಗಳಿಂದ ತಳಿರಮೇಲ್ಕಟ್ಟಿಂದ ।
ಸ್ಥೂಲವಂಶಜ ಮುಕ್ತಿಕದ ರಂಗವಲ್ಲಿಯಿಂ ಶುಕವಚನಮಂತ್ರದಿಂದ ॥
ರೋಲಂಬ ಗೀತದಿಂ ಕೋಗಿಲೆಯ ಪಾಠಿನಿಂ ।
ವ್ಯಾಳಭುಜನ್ನಾಟ್ಯದಿಂದೆಸೆವುತಿಹ ಮಂಟಪಂ ।
ಶೈಲೇಶವಾಧವಂ ವನರಮೆಯ ಕೈವಿಡಿವ ಲೀಲೆಯೆನೆ ಶೋಭಿಸಿದುದು ॥ (40)

ಧೊರೆಗೊಪ್ಪನಾವ ನಂಬುಜಕೆ ಶಶಿಯೇನಹಂ ।
ಸರಸತಿಗೆ ಪ್ರಿಯಮಾದ ಚೇಲವಾವುದು ರಾಮ ।
ಚರಣಸೇವಕನಾವ್ಯ ಕಾಂತಿತಾನಾವುದೀ ಪ್ರಶ್ನೆಗಳಗುತ್ತರವನು ॥
ಮಿರುಗುತಿಹ ಮೂರಕ್ಕರದೆ ನಾಲ್ಕು ಪಂಕ್ತಿಯಂ ।
ಬರೆದು ಮಧ್ಯಾಕ್ಷರವ ನೈದೆ ಸಾಲ್ವಿಡಿದೋದೆ ।
ಪರಿಶೋಭಿಸುವ ಪೆಸರ್ ತನಗಿರ್ಪುದೆಂದದ್ರಿ ಪೆಂಪಿನಿಂದೆಸೆದಿರ್ದುದು ॥ (41)

ಉದಯಪರ್ವತವಂತೆ ಹಂಸಸಿತರುಚಿಯುತಂ ।
ಮದನಾರಿಯೊಲ್ಸರ್ವಪುಂಗಳಾಸ್ಪದನಿಂದ್ರ ।
ಸದನದೋಲ್ ವಿಬುಧಗುರುಶೋಭಿತಂ ನೃಪತಿಯೋಲಗದಂತೆ ಕವಿಭಾಸುರಂ ॥
ತ್ರಿದಶರುಪವನದಂತೆ ಮಂದಾರರಂಜಿತಂ ।
ಕದನದೋಲ್ನಾಗಕೇತುವಿರಾಜಿತನುಮೆಂದು ।
ಮುದದಿಂ ನವಗ್ರಹರನಾಮಮಂ ತೋರ್ಪಿಸುತದ್ರೀಂದ್ರನೊಪ್ಪಿದ್ದನು ॥ (42)

ಸುರಪನೋಲ್ ರಂಭಾವಿಲಾಸಿ ವೈಶ್ವಾನರನ ।
ಪರಿಯೊಲುರು ಪುಂಡರೀಕಾನ್ವಿತಂ ಯಮನಂತೆ ।
ಕರದಂಡಶೋಭಿ ನೈರುತಿಯಂತೆ ಪುಣ್ಯಜನಪೋಷಕಂ ಪಾಶಿಯಂತೆ ॥
ಶರಮಯಂ ಪಾವನನೋಲ್ ಸಾರಂಗ ಸಂಯುತಂ ।
ನರವಾಹನನತೆರದೆ ಕಂಗೊಳಿಕಳಿಯಾಗೀ ।
ಶ್ವರನೋಲ್ ದಿಗಂಬರೋಜ್ವಲನೆಂದು ಗಿರಿವರಂ ದಿಕ್ಪಾಲರಂತೆಸೆದನು ॥ (43)

ರಾವಣನ ಸಭೆಯಂತೆ ವ್ಯಾಸಮಂದಿರದಂತೆ ।
ಕೋವಿದ ಶುಕಾಲಾಪಕಂಸರೋವರದಂತೆ ।
ಭಾವಸಂಭವಜನಕನಂತೆ ಕಮಲಾನ್ವಿತಂ ಪಾರ್ವತೀರಮಣನಂತೆ ॥
ದೇವಪತಿಯಂತೆ ಗೋಧರನಬ್ಜಭವನದಂತೆ
ಭೂಪರಾಲಯದಂತೆ ಕಲಕಂಠಶೋಭಿತಂ ।
ಸೌವರ್ಣಗಿರಿಯಂತೆ ರಣವಂತೆ ಖಗಯುತವುಮಾಗಿ ರ್ಪನದ್ರೀಂದ್ರನು ॥ (44)
ತರುಣಿಯೊರ್ವಳ್ ಪುರುಷನಡೆಗೈದುತಿರಲಾಗ ।
ಬಿರುಗಾಳಿಯಿಂದ ಮೇಲುದು ಜಾರೆ ಕುಚಗಳಂ ।
ಸರಸಿಜಗಳಿಂದು ತುಟಿದಯಾಲವಣ್ಣಿಂದಳಕುಕಂಗಳಿರಗಲ್ ಕದುರ್ಕಲು ॥
ಬರುವ ಪಥದೊಳಗವ್ರಂ ಚೆಲ್ವಮುತ್ತುಕದರಲ್ ।
ಮಿರುಪ ನೇರಿಲ ಪಣ್ಣನುತ್ತ ಪೋರಲ್ ನಗುತೆ ।
ತರುಣಿನಿಟ್ಟಗೆ ಮುಟ್ಟದೈದಿದವು ಭ್ರಾಂತಿ ಪರಿದಾಗಿರಿಯ ಶೃಂಗಾಗ್ರಕೆ ॥ (45)
ಸುರಪನೊಲ್ವಜ್ರವಜ್ರಯು ತೆರದೆ ಗೋವಿಭಾ ।
ಸುರನೈದೆ ಗೋವಿಭಾಸುರನೊಲೈರಾವತಸ್ಫುರಿತ ।
ಸ್ಫುರಿತನೈರಾವತ ಸ್ಫುರಿತನೊಲ್ ಭೂರಿ ನೇತ್ರಂ ಭೂರಿನೇತ್ರನಂತೆ ॥
ಪರಿಪೋಷಿತೇಂದ್ರಾಣಿ ಪೋಷಿತೇಂದ್ರಾಣಿಯೊಲ್ ।
ಸುರಭಿರಮ್ಯಂ ಸುರಭಿರಮ್ಯನಂತಾವಗಂ ।
ಧರಣೀಧರಾಧಿಪಂ ಸುರಪನೆಂದೆನಿಸಿ ತಾಂ ರಾಜಿಸಿದನೇಂ ಪೊಗಳ್ವೆನು ॥ (46)
ಒಂದೆಸೆಯೊಳಂ ರಜತಸನ್ನಿಭಂ ನೋಡೆ ಮ ।
ತ್ತೊಂದೆಸೆಯೊಳಂ ಪುಷ್ಪರಾಗಾಭಮರ್ಕನಿಭ ।
ಮೊಂದೆಸೆಯೊಳಂ ಕ್ಷತಜ ಪೀಡಸಂಕಾಶಂಗಳೊಂದೆಸೆಯ ನೀಲಕಾಂತಿ ॥
ಒಂದೆಸೆಯ ಮಾಂಜಿಷ್ಠ ಕೇತಕೀವರ್ಣಂಗ ।
ಳೊಂದೆಸೆಯ ಪಾರದಜ್ಯೋತಿರ್ಲತಾಚ್ಛಾಯ ।
ಮೊಂದಿ ಶೋಭಿಪ ಗಿರಿಯನೀಕ್ಷಿಸೆಂದವನಿಜೆಗೆ ತೋರಿದಂ ರಘುವೀರನು ॥ (47)
ಪನಸ ಖದಿರಾಂಕೋಲ ತಕ್ಕೋಲ ವೇತ್ರಾಧ ।
ನ್ವನತಿಲಕತಿಂದುಕಾಮಳಕ ವರುಣ ಮಧೂಕ ।
ಕನಕಾಮ್ರವೇಣಿ ಕಾಶ್ಮೆರ್ಯ ದಾಡಿಮ ಬಿಲ್ವಪಿಚುಮಂದ ತಿಮಿಶ ಬದರಿ ॥
ಸನೆಯಶಾಂತ ನೀಪಕುರುವಕ ಲೋಧ್ರ ಚವ್ಯಚಂ ।
ದನ ಜಂಬು ಜಂಬೀರ ಲಿಕುಚಪ್ರಿಯಾಳಕಾ ।
ಸನ ತಾಳ ಹಿಂತಾಳ ನಾಳಕೇರಾದಿ ತರುಷಂಡಗಳನೀಕ್ಷಿಸಬಲೆ ॥ (48)
ಚಾರು ಶುಕಕೋಕಿಲೋಲೂಕ ಚಾತಕ ಹಂಸ ।
ಸಾರಸ ಭರದ್ವಾಜ ಕಲವಿಂಕ ಗೃಧ್ರ ಮಾ ।
ಯೂರ ಖಂಜನ ಚಂಚರೀಕ ಟಿಟ್ಟಿಭ ಚಕ್ರ ಚಾಷಕ ಕ್ರೌಂಚ ಕುರರಿ ॥
ಪಾರಾವತ ಶ್ಯೇನ ಲೋಹ ಪುಷ್ಪಕಳಂಗ ।
ಚೇರು ಕಾಕಾ ಕೋಲ ಕಾರಂಡ ತಿತ್ತಿರಿ ಚ ।
ಕೋರ ಮುಖ್ಯ ಸುಪಕ್ಷಿ ಸಂಕುಲದ ಸಂಭ್ರಮವನೀಕ್ಷಿ ಪುದು ಧರಣಿಜಾತೆ ॥ (49)

ಹರಿಣ ಹರಿ ಕರಿ ಖಡ್ಗ ಭಲ್ಲೂಕ ವೃಷಭ ಕಾ ।
ಸರ ಕೋಲ ಕಂಪಳೀ ಚೀನ ಶಾರ್ದೂಲ ವಾ ।
ನರ ಚಮರ ವಾತಪ್ರಮೀ ಕಲಲಿಗೋಕರ್ನ ಗಂಡ ಶಿವ ಕೃಷ್ಣಸಾರ ॥
ಶರಭ ನಕುಲ ಚಮೂರು ಶುಭ್ರಾದಿ ಬೈಡಾಲ ।
ರುರುಮುಖ್ಯ ಮೃಗನಿಕರಮೈದೆ ನಿರ್ವೈರದಿಂ ।
ಗಿರಿಕಟಕದೇಶದೊಳ್ ಸಂಚರಿಸುತಿರ್ಪ್ಪುದಂ ನೋಡಬ್ಜಪತ್ರನೇತ್ರೆ ॥ (50)
ಇತ್ತ ನೋಡಬಲೆ ಫಲಪುಷ್ಪಸಂಭರಿತಮಾ ।
ಪುತ್ತಮದ್ರುಮದ ಸುಚ್ಛಾಯೆಯೊಳ್ ಸಮ್ಮುದಂ ।
ಚಿತ್ತ ವಿದ್ಯಾಧರ್ ಕಿನ್ನರರ್ ಕಿಂಪುರುಷರಲ್ಲಲ್ಲಿ ಬಿನದದಿಂದೆ ॥
ಮತ್ತಕಾಶಿನಿಯರು ಗೊಡನೈದೆ ಕ್ರೀಡಿಸುತಿರ್ಪ ।
ರೆತ್ತಲುಂ ಮಾರುತಂ ಗುಹೆಗಳೊಳ್ ಪರಿಮಳದ ।
ಮೊತ್ತಮಂ ಬೀರುತ್ತಿಹ ನಿದಕಾಮನುಂ ಸಂತಸಂಬಡೆನು ಕುವಲಯಾಕ್ಷಿ ॥ (51)
ಫಲಪುಷ್ಪ ಸಂಭರಿತವನದಿಂದೆ ಪಕ್ಷಿಕುಲ ।
ಕುಲದಿಂದೆ ಮೆರೆವ ಶಿಖರದೊಳನೇಕಾಬ್ದಮಾಂ ।
ನೆಲಸುವೆಂ ನಿನ್ನನೊಡಗೊಂಡನುಜ ಸಹಿತೆನ್ನ ಶೋಕಮದರಿಂ ದಹಿಸದು ॥
ಫಲಮೊರಡಮಾಯ್ತು ಪಿತೃಋಣವಿಮೋಚನಮೊಂದು ।
ಬಳಕ ಭರತಂಗೆ ರಾಜ್ಯಸಂಪದಂ ಸೇರ್ದುದೊಂ ।
ದಿಳೆಯೊಳೀವನವಾಸಮಾಗಾದ ಕಾರ್ಯಣಂ ಪ್ರತಿಯಾದೆ ನಮಲಗಾತ್ರೆ ॥ (52)
ವನನಿವಾಸಂಗೈಯೆ ಸ್ವರ್ಗಮೋಕ್ಷಾದಿಗಳ್ ।
ಜನಿಯಿಸುಗು ಮುಂದೆನಾತ ಮಿಕ್ಷ್ವಾಕು ನೃಪಮುಖ್ಯ ।
ರನುಮೋದದಿಂದೆ ವಾನಪ್ರಸ್ಥರಾಗಿರ್ದರಾವಂಶಜಾತನಾಗೆ ॥
ಎನಗಿದಪ್ಪುದು ಚೋದ್ಯಮಲ್ಲಮಿಾಗಿರಿಯೊಳನು ।
ದಿನಮೈದೆ ಸುಖಮಿಹೆಂ ನೀಂ ಬೇಸರಂಗೊಳದೆ ।
ಮನಕೆ ಸಂತೋಷಮಂ ಮಾಡುತಿರ್ದೆ ವಿಶುದ್ಧ ಭಾವದಿಂದೆನ್ನೊಳ್ ಸೀ ॥ (53)
ನೀಲಪೀತಸಿತಾರುಣಶೋಭಾಯಿಯಿಂದಂ ವಿ ।
ಶಾಲಮಾದುನ್ನತದ ಶಿಲೆಗಳಿವೆ ಪರ್ವತದ ।
ಮೂಲದೊಳಗಿರ್ಪ ವನಮುದ್ಯಾನದಂತಿದೆ ಲತಾಕುಂಜ ಪುಂಜಂಗಳು ॥
ಲೀಲಾಸದನದೊಲಿವೆ ಭೂರ್ಜಪತ್ರಸ್ಥಗರ ।
ನಾಳೀಕ ಪುನ್ನಾಗಕುಮುದಾತಿ ಸುಮಪರ್ನ ।
ಜಾಲತಲ್ಪಂಗಳಂದೊಪ್ಪುತಿದೆ ಕಾಮಿಗಳ ಸಂಕುಲಂ ನೋಡು ನೀರೆ ॥ (54)
ಮಿರುಪವ ಇಕ್ಷ್ವಾಕನಾಲೀವೆಳಗಳನೈದೆ ।
ಜರೆದು ತತ್ಫಲಪುಷ್ಪ ನಿರ್ಮಲೋದಕಗಳಿಂ ।
ಕರಮೊಪ್ಪುದಿರ್ದುದೀ ಪರ್ವತಂ ನಿನ್ನಿಂದೆ ಸೌಮಿತ್ರಿಯಿಂದೆ ಸಹಿತಂ ॥
ಎರಡೇಳುವತ್ಸರಂ ಸುಖಮಿರ್ದೆನಿಂತು ಸ ।
ತ್ಪುರುಷನಂದದೆ ರಾಜಋಷಿಗಳಂದದೆ ಸತ್ಯ ।
ಪರಿಪಾಲನಾಸಕ್ತನಾಗಿ ಕುಲಧರ್ಮಮಂ ವರ್ಧಿಸುವೆನಬ್ಜಗಂಧಿ ॥ (55)

ಲಲನೆ ನೀನೀಗಿರಿಯನಿಕಟದೊಳ್ ಶುಭ್ರಮಾಯ ।
ಜಲದಿಂದೆ ಹಂಸಸಾರಸಪಕ್ಷಿಚಯದಿಂದೆ ।
ಫಲನಂಗಳಿಂದೆ ಫಲಪುಷ್ಪಸಂಭರಿತಮಾಗಿರ್ಪ ತರುಲತೆಗಳಿಂದೆ ॥
ಬಳಲಿಬಾಯಾರಿ ನೀರ್ಗುಡಿಪರ್ಯೆತಪ್ಪ ಮೃಗ ।
ಕುಲದಿಂದ ಮಿತ್ತಡಿಯೊಳಾರುತಪಂ ಗೈವುತಿಹ ।
ನಳನಾಪ್ತನಿಭಸಿದ್ಧರಿಂದೆಸೆವ ಗಂಗೆಯಂ ನೋಡು ಗಾಂಗೇಯಗಾತ್ರಿ ॥ (56)

ಉರುಜಟಾಜಿನವಲ್ಕಲೋಪವೀತಂಗಳಂ ।
ಧರಿಸಿರ್ಪ ಋಷಿಗಳಂ ಸ್ನಾನಮಂ ಮಾಡುತಿಹ ।
ತರಣಿಮಂಡಲವನೀಕ್ಷಿಸುತೂರ್ಧ್ವ ಬಾಹುಗಳಗಿತ್ತಡಿಯೊಳು ಗ್ರತಪವ ॥
ವಿರಚಿಸುತಮಿರೆ ಮೌನಿಕುಲದೊಳಂ ಜಲದೊಳಂ ।
ಮಾರುತವಶದಿಂದೆ ಸೂಸಿದ ಸುಮಂಗಳಂಪತ್ತಿ ।
ಚರಿಸುತಿದೆ ಚಕ್ರಚಯ ಮಲ್ಲಲ್ಲಿ ಮಣಿನಿಭದ ಜಲಮಿದಕೊನೋಳ್ಪುದಬಲೆ ॥ (57)

ಈ ತರಂಗಿಣಿಯ ಸೊಬಗಂ ನೋಡಿ ಭೂಮಿಧರೆ ।
ನಾಥನತಿ ಸಂತಸದೆ ನರ್ತಿಪನೊ ಎಂಬಂತೆ ।
ವಾತವಶದಿಂ ಪುಷ್ಪ ಪತ್ರಗಳ್ ಚಲಿಸುತಿವೆ ಕೋಕಿಲುತಿ ತೀವಿತಿದಕೊ ॥
ನಾತಿಶಯದಿ ಕುಬೇರ ನಳನಿಯಂತೊಪ್ಪುವ ನ ।
ದೀತಟದೊಳಹರ್ಧದೇಂ ಕೃತಕೃತ್ಯರೋಮಹೀ ।
ಜಾತೆಕೇಳ್ ಸ್ನಾನಮಂ ಮಾಳ್ಪೆನೆನ್ನೊಡನೆನೀಂ ಮಜ್ಜನಂಗೈವುದಬಲೆ ॥ (58)

ಜಲಜಂತು ಭಯಮಿಲ್ಲಮೀ ನದಿಯೊಳಂ ಕುಮುದ ।
ನಳನಂಗಳಂ ಮುಳುಗಿಸುತ ಮೈದೊಳೆದು ನಲಿ ।
ನಲಿದಾಡು ಗಿರಿಯನುರೆ ಸಾಕೇತ ಪುರವೆಂದು ಪ್ಯಾಳಾವೆಪಶುಕುಲವನು ॥
ಪೊಳಲೊಳಹ ಜನವೆಂದು ನಿರ್ಜರಾಪಗೆಯನೆಂ ।
ಲಲಿತಸರಯೂ ನದಿಯುಮೆಂದು ತಿಳಿಸೌಮಿತ್ರಿ ।
ಯಲಸದೆನ್ನನು ಮತಿಯೊಳರ್ಪನೆನಗಂ ಪ್ರೀತಿಯಂ ಮಾಡುತಿರ್ದೆ ದೇವೀ ॥ (59)

ಕರವೆಸೆವ ಮಧುಮೂಲಫಲಗಳಾಹಾರದಿಂ ।
ಸುರನದೀಸ್ನಾನದಿಂ ಸತ್ಪುರುಷ ಸಂಗದಿಂ ।
ಹರುಷಗೊಳವೆನಯೋಧ್ಯಾನಗರವಂ ಬಯಸದಿದೆ ಮಚ್ಚಿತ್ತಮೆಂದು ಬಳಿಕ ॥
ಧರಣಿಸುತೆ ಲಕ್ಷ್ಮಣರ್ ಸಹಿತ ಸಂತೋಷದಿಂ ।
ಗಿರಿನದೀ ವೈಭವವನೀಕ್ಷಿಸುತೆ ಶ್ರೀ ರಾಮ ।
ಪುರದಧೀಶ್ವರನೈದೆ ಚರಿಸುತಿರ್ದಂ ಚಾರುಚಂತೆ ಶೈಲೇಂದ್ರ ಜಾತೆ ॥ (60)

(ಸಂಧಿ 29 ಪದ 1303)

## ಮೂವತ್ತನೆಯ ಸಂಧಿ.

ಸೂಚನೆ ॥ ಸೀರಧ್ವಜಾತ್ಮಭವೆಯಿಂದ ಮಂದಾಕಿನೀ ।
ತೀರದ ವಿನೋದವಮಂ ನಿಟ್ಟಿಸಿ ಮಹಾಶೈಲ ।
ವೇರಿಕುಳ್ಳಿರ್ಪ ರಘುವರನಂಘ್ರಿಯಂ ಕಂಡ ಭರತ ಶತ್ರುಘ್ನ ಸಹಿತ ॥

ಕ್ರಮದಿಂದಲಾವನವಿಹಾರವಮಂ ಕಳೆದುಬಿಂ ।
ದಮಿತ ಹರ್ಷೋತ್ಸವಧಿ ಪರ್ಣವಂದಿರದಲ್ಲಿ ।
ಸುಮನಸಾನಂದಕರವೆನೆ ಸೀತೆ ಸಹಿತಲ್ಲಿ ಮಂಡಿಸಿರೆ ಸೌಮಿತ್ರಿಯು ॥
ಸಮದೇಶದಂತೆ ಸಂಚರಿಸುತಿರೆ ಮುಂಗಡೆಯೊ ।
ಳಮಿತ ಭೀತಿಯೊಳೋಡಿಬರ್ಪ ಮೃಗಯೂಥಗಳ ।
ವಿಮಲತರವಕ್ಕಿಗಳ ನೋಡಿ ತಮ್ಮಂಗೆಂದ ರಘುವರಂ ಗಿರಿತನೂಜೆ ॥ (1)

ತುಂಡಗಳ ನೆಗಪುತಾಗಸಕೆ ಭೀಂಕರಿಪವೇ ।
ತಂಡ ತಂಡಗಳೋಡಿ ಬರುತ್ತಿವೆಕೊ ಭೀತಿಮಂ ।
ಕೊಂಡು ಪಿಂದಿರುಗಿನೋಡುತಬರ್ಪ ಹರಿಣಗಳನಲ್ಲಲ್ಲಿಡೆ ಯೂಥದಿಂದ ॥
ಮಿಂಡೆದ್ದುಬಹ ಘೃಷ್ಟಿಗಳ ನೋಡಿ ಪಡಿಗನಾ ।
ಗ್ಗೊಂಡು ಪಾರ್ರುತಲಿವೆಕೊ ಖಗಮೃಗಾಳೀಕಂಗ ।
ಳಂಡಲೆಯಿದೇಂಕತದೊಳಾಯ್ತು ಮತ್ತಾರೈಡುನೋಡು ಸೌಮಿತ್ರಿ ಮುದದಿ ॥
(2)

ಮನೆಸಾಲದುದಿಗಡರಿ ನಾಲ್ದೆಸೆಯನಿಟ್ಟಿಸಲ್ ।
ವನರಾಶಿ ಮೇಲ್ವರಿದು ಬರ್ಪಂತೆ ಪೆರ್ಬಲವ ।
ಘನರವವ ನಾಲಿಸುತಲಣ್ಣನೊಡನಿಂತೆಂದ ದೇವನೆಲಬೆಸಲಾದೊಲು ॥
ಘನಮಾದ ಸೇನೆಬರುತಿದೆಕೊ ಧರಣಿಜೆಯನಿಲೆ ।
ಮನೆಯಿಂದಲಾಚೆಯೊಳ್ ತೋರ್ಪ ಗುಹೆಯೊಳಗಿಟ್ಟು ।
ಧನುವ ಪಿಡಿಯಲ್ವೇಳ್ಕುಮತ್ತ ಲಕ್ಷ್ಮಣನುಸುರೆ ನಸುನಗುತಲಿಂತೆಂದನು ॥ (3)

ಕಾತುರದಿ ನುಡಿವೆಯಾತಕೆ ವೆರರಬಲಮಿತ್ತ ।
ಜಾತು ಸಂಚರಗೈಯಲಮ್ಮರಾದರುಧರಾ ।
ನೇತರೇಂ ಬಂದಿಹರೊ ಮೃಗಯಾವ್ಯಸನಕೆಂದು ಸಂತಸದಿಸಂಚರಿಪಡೆ ॥
ಭೂತಸುಳಿಯಲ್ಕಮ್ಮದೀ ತಾಣದೊಳುಮನುಜ ।
ರೇತಕ್ಕೆತಪ್ಪರಿದ ಪದುಳದಿಂ ನಿಟ್ಟಿಸೆನ ।
ಲಾತ ನಾಲ್ದೆಸೆಯನಾರೈದು ಕಂಡು ರಥದ ಗೊಂವಣದ ಸಂದಣಿಯನು ॥ (4)

ಕೋವಿದಾರಧ್ವಜದ ಕೊನಬ ನಿಟ್ಟಿಸಿ ಭರತ
ನೀವಸುಧೆಗೈತಂದ ನತ್ಯಾಸೆಯಿಂದೆಮ್ಮ ।
ಜೀವದಿಂದುಳುಹಬಾರದುವೆನುತ ದುರ್ಜನರ ಬೋಧೆನೆಲೆಗೊಂಡುಮನದಿ ॥
ತಾವನರಸುತಬಂದತಡೆಯದೀತನಬಲವ ।
ನೋವಿಖಡಿಖಂಡಗೈದಿಟ್ಟು ಕಾನನಿಯರಿಗೆ ।
ಸಾವಧಾನದಿ ಭೋಜನಂಗೈವೆನೆನುತತುಲರೋಷದಿಂ ಬಿಲ್ಪಿಡಿದನು ॥ (5)

ದುರುಳನುಡಿಗಳೊಳೆಮ್ಮ ಕಾನನಕೆ ಕಳುಪುತ್ತ ।
ಲರಸನಂ ಮರುಳೆನಿಸಿ ಧರೆಯನುಂ ವಶಗೈದು ।
ಪರಿಪೂರ್ಣಕಾಮಳೆನ್ನಿಸದಾದುರಾರಾಧ್ಯೆಕೈಕೆ ಸುತನಂ ಬೇಳಯು ॥
ನೆರಹಿ ಬಲವನು ಮಹಾರಣ್ಯದೊಳಗಿರ್ಪೆಮ್ಮ ।
ನರಸಿ ಪಿಡಿಯಲ್ಪೇಳ್ದುವೆನುತ ಬಂದಿಹಕಜ್ಜ ।
ಭರತನಾತನ ಮಾತೆಯುಂ ಪಜನರ ನೀಕ್ಷಣದೆ ಹತಗೈವೆನೆನುತಮನದಿ । (6)

ಮೊರವುತಲಿ ಮರನಿಂದಲಿಳಿದು ಶರಚಾಪಮಂ ।
ಧರಿಸಿ ಘುಡುಘುಡಿಸುತ್ತೈತಂದು ಸೇನಾಗಮದ ।
ಪರಿಯುಬಿತ್ತರಿಸಲೀತನ ರೌದ್ರಮಂ ನೋಡಿ ರಾಮನಯಗೂಡಿದಯದಿ ॥
ಪರಮಧಾರ್ಮಿಕಶಿರೋರತ್ನ ಸಾಧುಗಳರಸ ।
ಪರಿಹೀನರಾಗಲೋಭಾದಿವರ್ಜಿತಚಿತ್ತ ।
ತರಳನಾದರು ಭರತನೆಣಪನೆ ಕನಸಿನೊಳಗಪಕಾರಲೇಶಗಳನು ॥ (7)

ಮಾತೆಯುಂ ಧಿಕ್ಕರಿಸಿ ಮಗುಳುಪಜರಣೆಯಿಂದ ।
ತಾತನಂ ಸಂತೈಸಿ ತನಗಾದ ಸಂಪದ ।
ವ್ರಾತಮಂ ತನಗೊಪ್ಪುಗೈದು ಚರನಂತಿರ್ಪುದೀರಿಸಿ ನಿಜಚಿತ್ತದೊಳಗೆ ॥
ಮಾತೆಯರ ನೊಡಗೊಂಡು ಬಂದಿರ್ಪ ನೀಂ ಬೇಳ್ವ ।
ಮಾತಿದುದುರಾಗ್ರಹವಿದಂ ಸಹಿಸಿನೋಡುಕ್ಷಣ ।
ಮಾತುರದಿ ಕಂಗೆಸವುದೆನುತೋರೆಯ ಸೌಮಿತ್ರಿಯುಪಶಾಂತನಾಗಿರ್ದನು ॥ (8)

ಕೇಳು ಲಕ್ಷ್ಮಣ ಭರತ ಮಾತೃಕೃತಘುಷ್ಕರವ ।
ತಾಳಮನದೊಳು ಮರುಗುತೆಲ್ಲರಂ ಪಡೆಗೊಂಡು ।
ಜಾಳೆನಿಸಿ ಸಿರಿಯು ಗಹನದೊಳಾವು ಕಷ್ಟವಂಬಡುತಿಹುದ ನೆನೆದು ನೆನೆದು ॥
ಬೇಳಸಂತಸಗೊಳಿಸಿ ಕರೆದೊಯ್ವೆನೆಂದು ವಿ ।
ಪ್ರಾಳಿಯನ್ನೊಳಗೊಂಡು ಬಂದಿರ್ಪ ನೀಂ ಖತಿ ಯೊ ।
ಳ್ಳಾಳಲೇಂಫಲ ಭೋಗದಿಚ್ಛೆಯಿಂ ಸಹಜಾತರೆಸುಗಳಂಕೊಳೆ ಮುನಿವರೆ ॥ (9)

ಎನಿತುಪಾತಕಿಯಾದಡತಿ ಕ್ರೂರಮಾನಸಿಕ ।
ನೆನಿಸಿಕೊಂಡರು ತನಯ ಜನಕನಂ ಕೊಂದಪನೆ ।
ನಿನಗಿದೇಂ ಗುಣಮೆ ಬಾಲಕನ ತರಿಯಲ್ಕೆಳಸಿ ಕೋಪಿಸುವೆ ರಾಗವಿಡಿದು ॥
ಎನುತರಾಘವನುಡಿಯೆ ಸೌಮಿತ್ರಿಲಜ್ಜೆಯಿಂ ।
ಘನತರಾಮರ್ಷಮಂ ನೀಗಿ ತಲೆವಾಗಿ ಬಂ ।
ದಿನಕುಲೇಶನ ಕೆಲದೊಳಿರುತಿರ್ದ ನಿತ್ತಬಲವೊತ್ತರಿಸಿಬರೆ ಭರತನು ॥ (10)

ಗುಮಿಗೂಡಿಪೊಕ್ಕರಾತರುಲತಾಗುಲ್ಮಗಳು ।
ಯಮಿಜನರಿಗಪ್ಪುದಾಯಾಸ ಬಲವಿಲ್ಲಿರಲಿ ।
ಕ್ರಮದಿಂದ ಕರೆಸಿಕೊಳಲಪ್ಪುದೆಂದಾಭರತನಾಜ್ಞಾಪಿಸಲ್ಕೆ ದಯದಿ ॥
ಸಮದಗಜರಥ ಹಯಪದಾತಿಗಳನೊಂದೆಡೆಯ ।
ಸಮನೆಲದೊಳಳಸಿ ಸೇನಾನಿಗಳ್ಬಂದೊರೆಯೆ ।
ಪ್ರಮುದಿತಾಂತಃ ಕರಣದಿಂದ ಶತ್ರುಘ್ನನಂ ನೋಡುತೆಂದಂ ವಿನಯದಿ ॥ (11)

ಪರಪಿದರಖಿಳಾಂಗಲೇಶವ ಬ್ರಹ್ಮರುದ್ರೇಂದ್ರ ।
ರುರುತರೈಶ್ವರ್ಯಸಂಗತದ ಕಮಲಾವಸದ ।
ಸಿರಿರೇಖೆಯಖಾಂತ ಚರಣವ ಕಾಣುವನ್ನೆಗಂ ವರಮಂತ್ರಿಗುರುಗಳೊಡನೆ ॥
ಬೆರೆದು ವಾಹನವುಳಿದು ಪದಚರಣೆಯಿಂದೈದು ।
ತಿರವೇಳ್ಕುಮುಂದೆ ಗುಹಪೋಗಿ ಮಾರ್ಗಂಗಳಂ ।
ಸರಿಸಗೈಯುತೆನುತ್ತ ಪೇಳಲರುಗಲ್ ಶಬರ ಭರತ ಮಗುಳಂತೆಂದನು ॥ (12)

ಸುಳಯುರಲೆಯುಶ್ಮಾತವಾವೃಕೃತಿಯು ಚೆಲ್ವ ।
ತಳೆದು ಮುನಿಗಾತಿಥ್ಯವೆಸಗುವಂದದಿ ಮಾಳ್ದ ।
ತೊಳಪ ಪಾರ್ಥಿವ ಲಕ್ಷಣಾನ್ವಿತ ಮಹೋನ್ನತ ಮೆನಿಪ್ಪ ಶುಭಚರಣಂಗಳು ॥
ಪೊಳೆಯುತೆನ್ನಯು ಕಂಗಳದಿರಿನಲಿ ಸಂತಸವ ।
ತಳೆದಾನು ಶಾಂತಯುತ ಮನನಪ್ಪನಭಿಷೇಕ ।
ಜಲದಿಂದಮಸ್ತಕಂ ನೆನೆದರಾಂ ಕೃತಿಯಪ್ಪೆನೆನುತ ಮತ್ತಿಂತೆಂದನು ॥ (13)

ನೋಡುಮನುಕೂಲ ಪರಂಪರೆಯರಸುಗಳಲಿ ಭವ ।
ಗೂಡಿಪಟ್ಟವಣಿಯುಳಿ ಮಂಡಿಸಿರಲೋಲಗವ ।
ನೋಡಿಪದಸೇವೆಯುವಸರದಿಂದಲಾಂಧನ್ಯನಪ್ಪೆ ಮಣಿಮಕುಟಕಾಂತಿ ॥
ಮೂಡುತಿಹ ಶಶಿಪೂರ್ಣಬಿಂಬಕಂ ಸುಧೆಯುಶನ ।
ಮೂಡಿಸುವ ಮುಖವನಾಂ ಕಂಡು ಕೃತಿಯಹೆನು ಕೈ ।
ಗೂಡುವುದಿದೆಂದೆನುತಲಾನಂದ ಕಂಬನಿಗಳಡುತೆ ಮತ್ತಿಂತೆಂದನು ॥ (14)

ಸರಸಿಜಭವಾದಿಮುನಿವರರೆಲ್ಲ ನಿಜಯೋಗ ।
ವೆರದು ನಿಟ್ಟಿಸಿ ನಿಲುಕದಿಹಪಾವನಿತಚರಣ ।
ನಿರುತದೊಳಗವು ಕೈಗೂಡಿತು ಮಹಾಬಲ ಪರಾಕ್ರಮಿಗೆ ಸೌಮಿತ್ರಿಗೆ ॥
ಧರೆಯೊಳನ್ನೇಸು ಕೃತಕೃತ್ಯನೋ ಸಿರಿಪದವ ।
ಧರಿಸಿರ್ಪ ಸಿರಿಯೆನಿತು ಸುಕೃತಿಯೋ ತತ್ತಟದ ।
ಲಿರುವತರುಗುಲ್ಮ ವೀರುಧಗಳೇಂ ಪರಿಪಾಕತಪದ ಬೆಳಸಡೆಸಿರ್ಪವೋ ॥ (15)

ನೀಲಜೀಮೂತ ನಿಭಮೂರ್ತಿಯು ಸುಕೀರ್ತಿಯು ವಿ ।
ಶಾಲಸಾರಸನೇತ್ರನುರುತರಪವಿತ್ರನ ನಿ ।
ರಾಲಸ್ಯನುತಿಗಂ ವಶಂವದನ ಸಂಪದವನೀವ ಕರುಣಾವಸದನ ॥
ಬಾಲೇಂದು ಮೌಳಿಯು ಹೃದಾಲಯುಮ ದಾಲಯನ ।
ಶೀಲಸದ್ಗುಣ ರತ್ನರತ್ನಾಕರೋಪಮಿತ ।
ಲೀಲಾಮನುಜವೇಷಧರನ ಕಂಡಾಂಧನ್ಯನೆನಿಪೆನಾವಾಗಲೆನುತ ॥ (16)

ಎಂದಮಿತಭಕ್ತಿರಸದಿಂದ ಭರತಂ ತನ್ನ ।
ಬಂಧುಗಳನೊಡಗೊಂಡು ಪೊಕ್ಕನಾಕಾನನವ ।
ಮುಂದೆ ಗುಹ ಮುಗ್ರಪ್ರದರ್ಶನಂಗೈವುತಿರೆ ಪಾದವಿನ್ಯಾಸದಿಂದ ॥
ಬಂಧುರದಬಲಗಳಂ ಖುಷಿಗಳಾಶ್ರಮಗಳಂ ।
ಪೊಂದಿನಿಲದಲ್ಲಲ್ಲಿ ತ್ವರಿತದಿಂ ನಡೆಯುತಿರ ।
ಲಂದುರಾಮಾಶ್ರಮದಲಿಹ ಕ್ರತುಭುಜದ್ವಜಂ ತೋರೆ ಸನ್ನಿಹಿತವಾಗಿ ॥ (17)

ನೋಡಿ ಹರ್ಷದೊಳೊರೆದ ನಿಜಬಂಧುಗಳನೊಂದು ।
ಗೂಡಿ ಗುರುಗಳ ಬೇಗ ಕರತರುವುದೆನುತ ನೃಪ ।
ನಾಡಿಚರರಂ ಕಳುಪಿ ರಘುನಾಯಕನ ಕಾಣ್ಬಲವಲವಿಕೆಯಿಂದ ನಡೆದು ॥
ಕಾಡಾನೆಖಗಮೃಗಗಳಾಡುತಿಹನೆಲಗಳಂ ।
ನೋಡಿಕೊಳ್ಳದಲ್ಲಲ್ಲಿ ಪುಷ್ಪಪಚಯಗಳಂ ।
ಮೂಡಿರ್ಪತಾಣಗಳ ಕುರುಪಿಡಿದು ಗಮಿಸಿದಂ ಚಿತ್ತದನುರಾಗದಿಂದ ॥ (18)
ಮದಕರಿಕರೀಷಕಷಣಂಗೈದ ತಾಣವು ।
ತ್ತಿದುವೆ ಕಾಳ್ಗೋಣ ರೋಷಾಹತವಿಷಾಣ ವಿಂ ।
ತಿದುವೆ ಕೇಸರಿಯು ನಿಷ್ಠುರತರಕ್ಷಿಪ್ತಕರೀಕುಂಭ ಮುತ್ತುಗಳನೂನಾ ॥
ಇದುವೆ ಕಾರೀಷೋಗ್ನಿ ಸೀತಾಪನೋದನ ।
ಕ್ಕಿದೆ ತುಷಾಜನ ಮಾತ್ರಪಕ್ಕ ಕೇರಿದೆನೋಳ್ಪು ।
ದಿದೆ ಭರದ್ವಾಜಮುನಿಪೇಳ್ವ ಭೂಮಿಯೆನುತ್ತ ಸಂತಸವಕ್ರೋರುತಿದೆ ಕೋ ॥ (19)
ಘುಮುಘುಮಿತ ಮಾಧುರ್ಯಕರ ನಾದಕೇಳುತಿದೆ ।
ವಿಮಲಧಾರೇಯುನೀಯೊಡೆಗಾವು ಬಂದುದ ।
ಕ್ಕಮಿತ ಸಂತಸಗೊಳ್ಳುತಿದೆ ಚಿತ್ತಮಿಲೆವನೆಗಳೊತ್ತ ಸೇರಲ್ಕದೆಂತು ॥
ಪ್ರಮುದ ಸಂಭವಮಹುದೊ ಎನುತ ಪುಳಕಂಗಳೊಳು ।
ಕಮಲ ವಜ್ರಾಂಕುಶ ಸುರೇಖೆಗಳ ತೋರುತಿಹ ।
ಸುಮನಸಾನಂದಕರ ಹೆಜ್ಜೆಗಳ ನೋಡುತ್ತ ಭರತ ವಂದನೆಗೈದನು ॥ (20)
ನಿಗಮಶಾಖೆಗೆ ಶಿಖಾಮಣಿಯಧ್ಯಾತ್ಮವೇತ್ತೃಜನ ।
ಬಗೆಯ ಪರುಷದಕಣಿಯು ತಾಣಚಿಂತಾಮಣಿಯು ।
ಮಿಗೆಶಾಸ್ತ್ರನಿಕರ ಕಾದರವಚರಚನೆಗಳ ಪೋಷಿಸುವ ಸನ್ಮಣಿಯಿದೊ ॥
ಅಗಜಾರಮಣಬೊಮ್ಮರಾವಾಗ ಭಾವಿಸುವ ।
ಬಗೆಗಚೋರವಾಗದೀ ಸಿರಿಪದಂಗಳಿನ ।
ಗೊಗುಮಿಗೆಯು ಹರ್ಷವಂ ತುಳ್ಕಸಲ್ಕಂಗೆಸೆದವೇನೆಂಬೆನತಿಶಯಗಳ ॥ (21)
ಇದು ಜಗದ್ಬೀಜವತ್ತಿದು ನಿಗಮಗಳನೈಜ ।
ಮಿದುಮಂತ್ರತಂತ್ರಪೊಲಮಿದು ಸತ್ಯಸುಖದನೆಲ ।
ಮಿದುಶೈಲಜಾಚಿತ್ತ ಪಾಡುವಾಡುಂ ಬೊಲಂ ಹಂಸಹೃದಯಾಬ್ಜಹಂಸಂ ॥
ಇದು ಬೆಳಗಿನೋಳ್ಬೆಳಗೆನುತ್ತವಂದನಗೈದು ।
ಸದಮಳಾನಂದಸಾಗರ ದೊಳೋಲಾಡುತ್ತ ।
ಲದಿರಿ ಋಷ್ಯಾಶ್ರಮರನೋಡಿ ಹಿಗ್ಗುತ ನಡದಭರತ ನತಿಭಕ್ತಿಯಿಂದೆ ॥ (22)
ಸತತತಗೈವಭ್ಯಾಸ ಬಲದಿಂದ ಕಳ್ತಲೆಯು ।
ಗತವಾಗಿ ಚಿತ್ತದೋಳ್ ಚಿಜ್ಜ್ಯೋತಿ ಬೆಳಗುವಂ ।
ತತಿಶಯದ ನೀರಂಧ್ರವನವಕಳದೈದಲ್ಕೆ ಪರ್ಣಶಾಲಾ ಮಧ್ಯದಿ ॥
ವಿತತವೆನಿಪ ಕಪರ್ದಭಾರವೊಡದೊಳುಸಿರ್ದ ।
ಸತಿಯು ಬೆಳ್ನಗೆಯಿಂದ ಗೌರವೆನಿಪ ಶರೀರ ।
ದತಿಮೋಹನಾಕಾರವೆತ್ತ ರಘುವೀರನಂ ಕಂಡನಾಭರತ ಮುದದಿ ॥ (23)

ರಸೆಯೊಳಗೆ ಮಂಡಿಸಿರೆ ಕಂಡುಭಯಾಕಂಗಳೊಳ ।
ಗೊಸರುವನಿಗಳ ತಡೆಯಲಳವಲ್ಲದಲೆವ್ರೊರ್ಣ ।
ಶಶಿಯುನಿಟ್ಟಿಸಿದ ಮಣಿಕೆರಗುವಂದದಿ ಮರುಗಿ ಶತ್ರುಘ್ನ ನೊಡನೆಂದನು ॥
ಪೊಸತೆನಿಪ ಸೌಧಾಗ್ರದೆಡೆಯ ಮೃದುತಳ್ಪದಲಿ ।
ಕುಸುಮ ಪರಿಮಳದಿಂದ ರಾಜಶೀವಿಯೊಳರ್ಪ ।
ಬಿಸಜನೇತ್ರಂಗೆನ್ನ ದೆಸೆಯಿಂವಲೆಲೆವನೆಯುದೊರದುವಕಟಕಟೆಂದನು ॥ (24)
ಅಡಸಿತು ಗುರುದ್ರೋಹಮಿದಕೆ ನಿಷ್ಕೃತಿಯ ಸಂ ।
ಘಡಿಸದಾವಾವ ಶಾಸ್ತ್ರಂಗಳಲಿ ನಿಟ್ಟಿಸಿದ ।
ರೊಡನಾಡಿದಂಗೆ ಪ್ರಾಯಶ್ಚಿತ್ತ ಸಂಜನಿಸದಂ ತಾದುದನುಜ ತನುವ ।
ಮಡಗಿ ಫಲವೇನು ಪಾತಕೆಯಗರ್ಭದಿ ಜನಿಸಿ ।
ಕಡುಪಾಪಿಯೆನಿಸುತಪಕೀರ್ತಿಭಾಜನನಾದೆ ।
ನುಡಿವುದೇನಸುಗಳೆವುದತಿ ಲೇಸೆನುತ್ತಳಲಿಬಳಲಿ ಸಂಕಟ ಗೊಂಡನು ॥ (25)
ಬಿಟ್ಟರಸುಗಳನಾತ್ಮಘಾತಕಿಯೆನುತ್ತ ಖತಿ ।
ಪುಟ್ಟುವುದು ರಘುವರಗೆ ಕಾಣೆಲಕ್ಷ್ಮಣಮರುಳು ।
ಗುಟ್ಟದಿರನೆಂದೆಂಬ ಭಯಮೊನ್ನ ಮಾನಸವನೆತು ತಳವೆಳಗೊಂಬುದು ॥
ಇಟ್ಟಣಿಸುತಿರಪೋಗಲಳವಲ್ಲದೀಚಿಂತೆ ।
ಪುಟ್ಟತಿನ್ನೇಂಗೈವೆ ನೆಂದಳಲುತಿರೆ ಪದಗಳಂ ।
ಮುಟ್ಟಿ ಶತ್ರುಘ್ನನುಪಚರಿಸಿ ಕುಸ್ತರಿಸುತ್ತನುಡಿದ ನವಸರದನುಡಿಯ ॥ (26)
ಜಗದಖಿಲ ಪ್ರಾಣಿಗಳ ಬುದ್ಧಿ ಸಾಕ್ಷಿಕನಮಿತ ।
ಜಗದುದರಜೀವ ಚೇಷ್ಟಾಧಾರ ಸೂತ್ರಧರ ।
ನೊಗುಮಿಗೆಯ ಸುಕೃತಿ ಪಾಪಿಷ್ಟರೆಂಬುದಬಲ್ಲ ಸರ್ವಜ್ಞ ರಘುನಾಥನು ॥
ಸುಗುಣಂದರಾಪರನನಾಥರಕ್ಷಣಶೀಲ ।
ಬಗೆಯೊಳರಿದೆಮ್ಮವೃತ್ತವತಾನೆ ಕೃಪೆಯಿಂದ ।
ಮಿಗೆ ಪೊರೆವನಿದಕೆ ಚಿಂತಿಸಲೇತಕ್ಕೆದುವುದು ತರಲೇಸು ಚರಣದೆಡೆಗೆ ॥ (27)
ಎನುತ ಶತ್ರುಘ್ನ ಬಿತ್ತರಿಪಯುಕ್ತಿಯ ಕೇಳ ।
ಮನದ ಹರ್ಷೋತ್ಕರ್ಷಯಿಂದ ಭರತಂ ಪಥವ ।
ನನುಸರಿಸುತಲ್ಲಲ್ಲಿ ರಘುನಾಥ ಜಾನಕಿಯರಂಘ್ರಿಸಾರಸಗಳನ್ನು ॥
ನನೆಗಳಂದರ್ಚಿಸುತಲಡಿಗಡಿಗೆ ನೆಖಿಸುತ್ತ ।
ವಿನಮಿತಾನನದಿಂದಲರೆಮುಗಿದ ಕಂಗಳಂ ।
ಘನನೀಲನೀಲನಂ ಪೊರಗೊಳಗೆನೋಡುತ್ತ ನಡದನತ್ಯಾನಂದದಿ ॥ (28)
ಅಂಬುಜದಳಾಕ್ಷನಜಭವಸುರಾಧ್ಯಕ್ಷನಂ ।
ಜಂಭಾಹಿತವಿ ಪಕ್ಷಜನವವ್ರುಘಸೀಕ್ಷನಂ ।
ದಂಬಾದ್ಯಹಂಕಾರ ಕರ್ಬುರಕುಲೋತ್ತುಂಗ ಪಕ್ಷವಿಚ್ಛೇದಕರನಂ ॥
ಕುಂಭೀಪಶಾರ್ತಿಹರ ಹರಕೃದ್ವಿಹಾರನಂ ।
ಗಂಭೀರಜನ್ಯ ಮೂರ್ಧಂನ್ಯನಂ . ? ।
ಕಂಬುಗಳನಿಖಿಲ ಜನತಾಪಹರವೀರನಂ ಕಂಡನಾ ಭರತಮುದದಿ ॥ (29)

ಸುರುಚಿರದ ಮಕುಟಭೂಷಣ ಸಟಾಮಂಡಲದಿ ।
ಮೆರೆವ ಪಟ್ಟವಣಿ ಫಾಲಕರೂಪಮಿರೆ ಮುದದಿ ।
ಮಿರುಪಪೀತಾಂಬರ ಕುಶಾಜಿನಾಕಾರದಿಂ ಸೊಬಗಾಂತು ರಾಜಿಸುತಿರೆ ॥
ಕರಗಳಂ ಮುಗಿದು ಸೌಮಿತ್ರಿ ಸಮ್ಮುಖದಿ ಬಂ ।
ಧುರ ಭಕ್ತಿಯಿಂದ ಸೇವಿಸುತಲಿರೆ ಚಿದ್ರೂಪ ।
ಮರೆಗೊಳಿಸಿ ಮಾನುಷಾಕಾರದಿಂ ರಾಜಿಸುವ ಪರಬೊಮ್ಮನಂ ಕಂಡನು ॥ (30)
ಭಾನುಶಶಿಸರ್ವಾರ್ಚಿ ಯುರುತಟಿತ್ತೇಜಂಗ ।
ಳೇನೊಂದನುಪಮಿಸಲ್ಬಾರದ ಚಿದಾನಂದ ।
ಮಾನುಷಾಕಾರದಿಂ ಕಂಗೆಸೆಯೆ ಭರತನತಿ ತ್ವರಿತದಿಂದೈದೆ ಬಂದು ॥
ಜ್ಞಾನಸ್ವರೂಪ ಚಿದ್ದೀಪ ಶರಣರತಾಪ ।
ಕೂನತರ ಸುಕರ ಕರುಣಾಕರಾರ್ತತ್ರಾಣ ।
ಭಾನುವಂಶಪವಿತ್ರ ಸಲಹೆನುತ್ತೆ ಡೆಗೆಡೆವ ಮುಂಗಡೆಯೊಳತಿ ಭಕ್ತಿಯಿಂದ ॥ (31)
ತನ್ನಿಂದ ಘಟಿಸಿತಪರಾಧಮೆನಿಸಲ್ಸಾರ ।
ದಿನ್ನೇವೆನೆಂಬ ಭಯದಿಂದುಲಿತ ಶೋಕಭರ ।
ಚೆನ್ನಾಗಿ ಕಂಗಳಂ ಬಳಿದು ಕಂಪಸ್ವರವಪೊರಡಲೀಯದೆ ತಡೆದಿರೆ ॥
ಇನ್ನೇನನುಸುರಲಳವಲ್ಲ ದೀಪರಬೊಮ್ಮ ।
ನನ್ನು ನಿಟ್ಟಿಸಿದ ಸಂತೋಷವೆಳದೊಯ್ದಲ್ಲಿ ।
ತನ್ನೊಳಂತರ್ಭಾವಗೈದುನಮುಸೋನ್ನತಿಯಾಸೆಸಗಿದುದು ನಿಜಬಲದೊಳು ॥ (32)
ಅಂಬುಜ ದಳಾಕ್ಷನಡಿದಾವರೆಗಳಂ ಕಂಡು ।
ಡಂಬಮದಮಾನವರ್ಜಿತನಾಗಿ ಧರಣಿಯೊಳ್ ।
ಬಿಂಬಿಸಿದ ನೆಳಲಂತದೇನೊಂದನೆನೆವರಂ ನಿಟ್ಟಿಸುವರಳವಲ್ಲದ ॥
ಸಂಭ್ರಮಾಂಭೋರಾಶಿಯುಲಿ ಮುಳುಗಲೊಳಹೊರಗೆ ।
ತುಂಬಿದಾನಂದದಿಂ ರಾಮಪುರ ನಾಥತಾ ।
ನೆಂಬ ಭಾವಾತೀತ ನೆನಿಸಿ ಮಗುಳೇನೊಂದ ಚಿಂತಿಸದೆ ಕೆಡೆದಿರ್ದನು ॥ (33)

(ಸಂಧಿ 30 ಪದ 1336)

---

## ಮೂವತ್ತೊಂದನೆಯ ಸಂಧಿ

ಸೂಚನೆ ॥ ಕರುಣದಿಂ ತರುಣನೆಂದರಿತು ರಾಜ್ಯದಸಿರಿಯು ।
ಪರಿಕರಂಗಳ ವಿಶದಮೆನಲು ಬೋಧಿಸಿ ಭರತ ।
ನಿರವ ಬೆಸಗೊಂಡು ಗುರು ಕೌಸಲ್ಯೆ ಮೊದಲಾದವರ ಕಂಡ ರಘುಜನೊಲಿದು ॥
ನೆಲೆಗಾಣದತಿ ಖೇದದಿಂದ ಮುಂದರಿಯದಲೆ ।
ನೆಲದೊಳೊರಗಿದ ಭರತನಂತೆ ಶತ್ರುಘ್ನ ಪದ ।
ಜಲಜಂಗಳೆಡೆಯು ಕೆಡೆದಿರೆ ನೋಡಿ ಕರುಣದಿಂ ಪಿಡಿದೆತ್ತಿ ತೊಡೆಯೊಳಟ್ಟು ॥
ತಲೆಯನೇವರಿಸಿ ಕಂಗಳನೊರಸಿ ಕುಸ್ತುರಿಸು ।
ತಲೆತಾತ ಸುಖದಿಂದಿರಲು ದುಷ್ಟಮೃಗ ।
ಚಲಿಸುವಟವಿಗೆ ಬಂದುದೇಂ ಕಾರಣವಾದೆಂದು ಬೆಸಗೊಂಡ ಪ್ರಿಯದೊಳಗೆಜೆ ॥ (1)

ತರುಣಸುಕುಮಾರ ದೊರೆಯಣುಗ ಬಲುಕಷ್ಟದಿಂ।
ಬೆರೆದ ದುರ್ಗಮಪಥವ ಪಿಡಿದು ಕಾನನದೆಡೆಗೆ।
ಬರುವದೇ ನೈ ವ್ಯಾಳಮೃಗಗಣಾಕೀರ್ಣ ಘೋರಟವಿಯೊಳ್ ತೊಳಲಿ ಬಳಲಿ॥
ದೊರೆ ಸತ್ವ ವಿಕ್ರಮ ಸುಧಾರ್ಮಿಕ ಶಿರೋರತ್ನ।
ತುರಗಮೇಧಾದಿಗಳನೆಸಗಿದ ಮಹಾಪುರುಷ।
ಚರಣಸೇವನೆ ಪರತರೋನ್ನತದ ಗತಿಯೆನುತ ಸೇವಿಪೆಯ ತರಳ॥ (2)
ಕುಲಗುರು ವಸಿಷ್ಠ ತತ್ಪುತ್ರರುಂ ಕುಶಲಿಗಳೆ।
ಜಲಜಾಯತಾಕ್ಷಿ ಕೌಸಲ್ಯೆ ಮೊದಲಾದವರ್।
ಸುಲಲಿತಾಂತಃಕರಣ ದಿಂದಿರ್ಪರೇ ಭವನ್ಮಾತೆ ಶಿವಕರದಲಿಹಳೆ॥
ಜಲಜ ಬಾಂಧವ ವಂಶದನುಸರಣೆಯಿಂ ಬಂದ।
ಕುಲವೃದ್ಧರಾಪ್ತಮಂತ್ರಿಗಳು ಪ್ರಜೆಪರಿವಾರ।
ಮಲಘೋಹಕೀರ್ಣೋನ್ನತರೆ ನಗರಿ ಸುಕ್ಷೇಮದಿಂದಿಹುದೆ ಪೇಳ್ ತಾತ ಮುದದಿ॥ (3)
ವಿಧಿಬಲದಿ ಹುತಹೋಮ್ಯಮಾನಾಗ್ನಿ ಹೋತೃಗಳ।
ಪದುಳದಿಂ ಕಾಲವಿಚ್ಛಿನ್ನಮೆಸಗದೆ ಮಾಳ್ಪ।
ಸದಯರಾ ಪಟ್ಟಣದಿ ಕುಶಲದಿಂದಿರ್ಪರೇ ತ್ರಯ ಕಾಸ್ತ್ರ ಶಸ್ತ್ರ? ಕವಿತಾ॥
ವಿದಿತಾಗಮಜ್ಞ ವಿವಿಧಾಸ್ತ್ರ ಬಲಸಂಪನ್ನ।
ಕದನ ವಿಜಯೋದ್ಧತ ಸುಧನ್ವಮುಖ್ಯರಿಗೆ ಮುದ।
ಮುದಯಿಪುದೆ ತಾತ ಸಂತತ ನಿನ್ನದೆಸೆಯಿಂದಲೆನುತ ಮಗುಳಂತೆಂದನು॥ (4)
ನೀತಿಜ್ಞರತಿನಿಪುಣರಖಿಲಾಗಮಸುಶಾಸ್ತ್ರ।
ಚಾತುರ್ಯಪತಿಕಾರ್ಯಧುರ್ಯರತಿಶಯ ಜನರ।
ವ್ರಾತುಗಳ ಬಲ್ಲರನಸೂಯರತ್ಯಂತಾಪ್ತ ಮಂತ್ರಿಕೋವಿದರುತ್ತಮ॥
ಜಾತಿಯುತ ಮಂತ್ರಿಗಳ ಪಿಡಿದು ಸಾಮ್ರಾಜ್ಯ ಶುಭ।
ಜಾತಮಂ ಗೈದಪುದು ನೃಪನೀತಿ ನಿನ್ನೊಳೇಂ।
ತಾತ ಸದ್ವಂಶಪ್ರಸೂತ ಮಂತ್ರಿಗಳಹರೆ ಭೋಗಾದಿ ವೃದ್ಧಿಕರಮಾ॥ (5)
ಬಲು ಜನರ ಕರೆಯದೊರ್ವನೆ ಪ್ರಯತ್ನಂ ಗೈಯ।
ದೊಲಿದು ನಿದ್ದೆಯೊಳಾಳದೆಚ್ಚರಿತು ಕಾಲದೊಳು।
ಪಲವು ಕಾರ್ಯಂಗಳನ್ನಪರರಾತ್ರಿಯೊಳರಿತು ಮತ್ತೊರ್ವರರಿಯದಂತೆ॥
ಅಲೆಗೊಳಸದತಿವೇಗಮಾಲಸ್ಯದಿಂದೆಸಗ।
ಲೆಲೆ ರಾಜ ಕಾರ್ಯಗಳ ಸಾಧಿಸಲ್ಪೇಳ್ಕು ನೃಪ।
ತಿಲಕರಿಂಗಿದು ನಿನ್ನೊಳಹುದೆ ಸತ್ಕುಲಜಾತ ತಾತ ಪೇಳೆನ್ನೊಳೊಲಿದು॥ (6)
ಪಿಂತೆ ಯೋಚಿತಮಾದ ಕಾರ್ಯ ಸಮ್ಯತಿಕ್ಕೃತಂ।
ಮುಂತೆಸೆವತಿಶಯದ ಕಷ್ಟಂಗಳರಿತು ಧೀ।
ಮಂತರಿಂದೇಕಾಂತದಾಳೋಚನಂಗೈದು ಮೂರ್ಖಶತಶತಗಳುಳದು॥
ಸ್ವಾಂತಾನುರಾಗವನುಸರಿಪ ಪಂಡಿತನಿರಲ್।
ತಾಂ ತಳುವದೈಶ್ವರ್ಯವೃದ್ಧಿಯುಂ ಗೈದಪನಿ।
ದಂ ತಿಳಿದು ನಡೆವೇಳ್ಕರಸುಗಳು ನೀತಿಯುಂ ಕಂಡು ನಡವೈ ಬಾಲಕ। (7)

ಕುಮತಿಗಳ್ ಮೂರ್ಖರಯುತಾಯುತರ್ ಕಾರ್ಯಸಂ ।
ಕ್ರಮಗೈದು ನೃಪತಿಗಪಕೀರ್ತಿಯಂ ಗಳಸುವರ್ ।
ಸುಮತಿ ತಾನೊರ್ವಕಾರ್ಯಾರ್ಥ್ಯಕ್ಷನಾಗುತಂ ಸಿರಿಯು ಕೈಸಾರಿಸುವನು ॥
ಭ್ರಮೆಯಿಂದ ಪೂಜ್ಯರ ನಿರಾಕರಿಸಿ ನೀಚರಂ ।
ಸಮತೆಯಿಂ ಬೆರ್ಚಿಸಲು ದುರ್ಭಿಕ್ಷಭಯ ಮರಣ ।
ಸಮನಿಪ್ಪವು ರಾಜಧರ್ಮಸ್ಥಿತಿಯು ನೀಂ ತಿಳಿದು ನಡಸುವೆಯ ನೃಪಪುತ್ರಕ ॥ (8)

ತಿಳಿದುತ್ತಮಂ ಮಧ್ಯಮಾಧಮವ ಕಾರ್ಯಗಳ ।
ಪಳಯುದುತ್ತಮಮಧ್ಯಮಾಧಮರ ನೇಮಿಸುತ ।
ಕೊಳವೇಳ್ಕು ಕಜ್ಜಮಂ ವಿಪರೀತಗೈದೊಡಂ ಬರ್ಪುದಾಮನರ್ಥಮೆನುತ ॥
ಒಳಗರಿಯದಾವನಿಂದಾವ ಕಾರ್ಯವಗಳಸಿ ।
ಕೊಳಲೆನುತ ಚಿಂತಿಸುವ ಮಂತ್ರಿಯಿಂ ರಾಜ್ಯಸಿರಿ ।
ಬೆಳವುದಂತೊರ್ವನಂ ಸನ್ಮಾನಿಸುತ್ತಿಹೆಯ ನೃಪತನಯ ನೀತಿವಿಡಿದು ॥ (9)

ಕೌಶಲೋಪಾಯ ವೈದ್ಯನ ಸತತದೂಷಿಪಾ ।
ವೇಶಚರನಂ ಸಿರಿಯ ಬಯಸುತಿಹ ಶೂರನಂ ।
ನಾಶಗೊಳಸಿದೆ ಮರೆದರಪ್ಪುದರಸಿಗೆ ಹಾನಿ ಎಂಬುದಂ ತಿಳಿದಿರ್ಪೆಯ ॥
ಬೇಶಲತ್ವವನುಳಿದು ತೀಷ್ಣದಂಡದಿ ಪ್ರಜ್ಞಾ ।
ಕ್ಲೇಶಹಿಂಸಾ ಗತಿಯ ನಸುಸರಿಸೆ ಭೂತಳದಿ ।
ನಾಶವಹುದಿದನರಿದು ಕಾರ್ಯಕಾಲೋಚಿತಗಳೆಸಗುವೆಯ ನೃಪಪುತ್ರಕ ॥ (10)

ಮತಿವಂತ ಧೃತಿಯುತಂ ಶುಚಿ ಶೂರ ಬಹುಮಾನಿ ।
ಹಿತಕರಂ ಸತ್ಕುಲಜ ಪಿತೃಪಿತಾಮಹರಿಂದ ।
ಕ್ಷಿತಿಪತಿಗಳನುಸರಣೆಗೈದ ಕುಶಲನ ತಿಳಿದು ನಿಜಬಲಾಧ್ಯಕ್ಷತೆಯನು ॥
ಪತಿಕರಿಸಿ ಕೊಟ್ಟಹೆಯ ಯುದ್ಧವೈಶಾರದರ ।
ಕೃತಕರ್ಮಧಾರ್ಷ್ಟ್ಯರಂ ತಿಳಿದು ಸೇನಾಪತಿಯ ।
ಜತೆಯಲಿಟ್ಟಿಹುದುಚಿತ ನರನಾಥರಿಂಗೀಪರಿಯರಿತು ನಡವುತಿಹೆಯ ॥ (11)

ಪಲವು ಭೃತ್ಯಾಮಾತ್ಯರಿಗೆ ಭತ್ತ ಜೀತಂಗ ।
ಳೊಲಿದು ತತ್ಕಾಲಕಾಲದೊಳಿತ್ತು ಸತ್ಕರಿಸ ।
ದಲಿ ಮರಲವರು ಪಿಂದೆ ದೂಷಿಸುತನರ್ಥಮಂ ನೆನೆದಪರು ತೃಣಮೆನುತ್ತ ॥
ಬಲುಹಿಂದುಪೇಕ್ಷಿಸಲು ಚಿರಕಾಲವೆನುಷಂಗ ।
ನೆಲದ ಮೇಣಗಳಳಿದು ಕೃತಪಾಕವೇದನೆಯೊ ।
ಳೊಲಿದು ಕಾರ್ತಸ್ವರೋಪಮನಪ್ಪನರಸಿದಂ ತಿಳಿದಿದಂ ವರ್ತಿಸುವೆಯ ॥ (12)

ತಿಳಿದು ಮದ್ವಂಶರಪದಾನಂಗಳೆಲ್ಲಮಂ ।
ಪಳದನ್ಯದಾಪಾದಗಳ ದುಃಖಸುಖದಿ ಸಂ ।
ಪಲಿತ ನಾವಂತರಂ ಮಾನದಾನಂಗಳಿಂ ಪೂರ್ವಾನುಮತದೊಳೆಂದು ॥
ಸುಳಸದನುಮಾನಮಂ ರಾಜಕಾರ್ಯಗಳೆಸಗ ।
ಳಳಪದಿಚ್ಛೈಸಿರ್ಪರೇಂ ಪೇಳದುದ ಗೈವ ।
ತೊಳಪ ಚರರಿರ್ಪ ನೃಪ ಸುಖಯುಪ್ಪ ನೀಪರಿಯ ನರಿತಿರ್ಪೆಯಾ ಬಾಲಕ ॥ (13)

ಸಿರಿಯನೆಲ್ಲವ ಸೆಳೆದು ಪುರದಿಂದ ಪೊರವಡಿಸಿ ।
ಧರೆಗಳುಂ ಕೆಲಕಾಲಕೈತಂದರಾಪ್ತರೆಂ ।
ದರಿತುಪೇಕ್ಷೆಯೊಳಿರಲ್ ಕಕ್ಷದೊಳಗಗ್ನಿಯನ್ನಿಟ್ಟು ಪೊದೆಯನ್ನು ಸಾರಿ ॥
ಮರುಳನಿದಿರೊಳಗೊಪ್ಪುವನ ರೀತಿಯಿಂತಂತು ।
ಮರೆಯದೆಚ್ಚರೊಳಿಹುದು ನೃಪನೀತಿ ನೀನಿದಂ ।
ಪರಿಕಿಸುತೆ ಸತತ ಪರಿಪಾಲಿಪುದೆಯು ನೃಪತನಯ ಬಿಟ್ಟು ರಾಜಸದ ಭ್ರಮೆಯ ॥ (14)
ನಟವಿಟಾಕೃತಿವೆತ್ತು ನ್ಯಾಯದಲಿ ಮನವಿತ್ತು ।
ಪಟುತರೋಚ್ಚಾರದುಚ್ಚರಣೆಯಲಿ ಧರ್ಮಗಳ ।
ನಟವಿಯುಂ ಸೇರಿಸುತ ದುರ್ಬೋಧಖಂಡಿತ ಮನ್ಯಲೋಕಾಯತಿಕರ ॥
ಕುಟಿಲಬುದ್ಧಿಯನನರ್ಥಾಚರಣೆಗೈವ ಸಂ ।
ಕಟುಬಾಡಬೋಪಸೇವನೆಯಿಂದ ಹಾನಿಸಂ ।
ಘಟನೆಯಹುದಿದನರಿತು ನಡಪೆಯು ಮಹಾರಾಜಧರ್ಮಪದ್ಧತಿಯೊಳೊಲಿದು ॥ (15)
ಧನಧಾನ್ಯ ಜಲರಾಷ್ಟ್ರ ತೃಣಯಂತ್ರ ಸಾಮಗ್ರಿ ।
ಯನು ಪೂರ್ಣಮಾಗಿಟ್ಟು ಪ್ರಾಜ್ಞಾಪ್ತ ಕೃತಕಾರ್ಯ ।
ಮೆನಿಪ ಭಟರಿಂ ಗುಪ್ತಮೆನಿಪ ಪುರದುರ್ಗಾಭಿವೃದ್ಧಿ ಸಂಭವಮಪ್ಪುದು ॥
ಜನಪನಿದನರಿತೊರ್ವರಂ ನಿಷ್ಠುರಂಗೈಯ ।
ದನುಪದಂ ಪ್ರಿಯನುಡಿಯಲುಪಚರಿಸುತಿರೆ ರಾಷ್ಟ್ರ ।
ವನರಾಶಿಪರಿಯಂತ ವಶವರ್ತಿಯಹುದಿದಂ ತಿಳಿದು ವರ್ತಿಪೆಯು ತನಯ ॥ (16)
ದೇವತಾ ಪಿತೃ ವಿಪ್ರರಭ್ಯಾಗತರ್ ಯುದ್ಧ ।
ಕೋವಿದರ್ ಮಿತ್ರ ವರ್ಗಾದಿಗಳನೆಲ್ಲರ ।
ನ್ನಾವಾವಕಾಲದೊಳ್ ಸತ್ಕರಿಸಪೇಳ್ಕುಂದು ತಿಳಿದರ್ಥಮನ್ನೀವ್ರುತ ॥
ಸಾವಧಾನದಿ ಧನಾರ್ಜನೆಗೈದು ಕುಜನರಿಂ ।
ಗೀವುದುಳಿದಲ್ಪವೆಚ್ಚಂಗೈವ ನೃಪತಿಲಕ ।
ನೀವಸುಧೆಯೊಳ್ ಚಿರಾಯುಷನಪ್ಪನಿದ ತಿಳಿದು ವರ್ತಿಪೆಯು ನೀತಿಪ್ರಿದು ॥ (17)
ವಿತ್ತದಾಶೆಯೊಳು ಪರಗೇಹಂಗಳೊಳ್ ಚೋರ ।
ವೃತ್ತಿಯಿಂ ಸೆಳೆತಂದು ಕೋಶವರ್ಧನೆಗೈದು ।
ಮತ್ತರಿಷ್ಟಗಳಧಿಕರೊಳಗಿಟ್ಟು ಜೀವನವ ಸೆಳೆದು ನಿಷ್ಕಾರಣದಲಿ ॥
ಮುತ್ತಿದತಿಲೋಭಮೋಹಾದ್ಯಂಧನಾಗಮಿತ ।
ವಿತ್ತಾಶೆಯಿಂ ಧರ್ಮಮುಳಿದ ನೃಪಜವದಿಂದ ।
ಮಿತ್ತು ಸಾರುವನಿದಂ ವರ್ಜಿಸುತ ಸಜ್ಜನರನಡತೆಯೊಳಾಂತಿಹೆಯು ತನಯ ॥ (18)
ಗುರುವಿನಲಿ ಪಿರಿಯರಲಿ ದೇವತಾತಿಥಿಗಳಲಿ ।
ತರುಣರಲಿ ವೃದ್ಧರಲಿ ವೈದ್ಯರಲಿ ನಿಜಮೋಹ ।
ವೆರದತರುಣಿಯೊಳೆಲ್ಲಕಾಲದಲಿ ಸಮಚಿತ್ತನೆನುತಸೂಯವನೆಸಗದೆ ॥
ಸರಸಮೃದು ವಚನದಿಂ ದಾನಮಾನಂಗಳಲಿ ।
ಪರಿತೋಷಣಂ ಗೈವ ಭೂಭೃಚ್ಛಿರೋರತ್ನ ।
ಚಿರಕಾಲ ಸುಖಿಪರ್ಷನರಸುಗಳ ರೀತಿಯಿಂ ತಿಳಿದು ನಡಪೆಯು ಪುತ್ರಕ ॥ (19)

ತಿಳದು ವಿಪುಳಾಯಮಂ ಪಳದು ಪಾತ್ರವ್ಯಯವ ।
ತ್ರೊಳಪ ಧರ್ಮದಲರ್ಥಸಾಧನಂಗೈವುತ್ತ ।
ಉಳಿದರ್ಥದಿಂ ಧರ್ಮಮಂ ಗಳಿಸುತುಭಯಮಂ ಸಮದೃಷ್ಟಿಯಿಂ ನೋಡುತ ॥
ಬೆಳವಳಿಗೆಗೈವರಸು ಬಾಳ್ವನಲ್ಲದೆ ಕಾದು ।
ಕಳವಳದೊಳಾಳಿದರಸುಳಿಯನೆಂಬುವ ಧರ್ಮ ।
ದೊಳವರಿತು ವರ್ತಿಪೆಯ ಮತ್ತುಕುಲಪರಂಪರೆಯ ದೊರೆಗಳಾಚಾರವಿಡಿದು (20)

ಪುಸಿ ನುಗುಳು ಲೋಭ ಪ್ರಮಾದ ದೀರ್ಘದ್ವೇಷ ।
ಪೊಸಪೊಸಪ್ರೀತಿ ಕೋಪಾಲಸ್ಯ ಚಾಪಲ್ಯ ।
ಸಸಿನೇಕಚಿಂತೆ ವಿಪರೀತದಾಳೋಚನಂ ನೈಪಿಟ್ಟದನ್ನುಳವುದು ॥
ವ್ಯಸನ ಮಂತ್ರಾಗೋಪ್ಯ ಮೇಕಾಂತವಾಸಂಗ ।
ಳಿಸಕವರಸಂ ಕೆಡಿಪ ವವನುಳಿದು ವೇದಾರ್ಥ ।
ವೆಸನಕೋವಿದ ವಿಪ್ರಪೌರಜನ ಪೊಗಳುವಂತೊಪ್ಪಿರ್ಪೆಯಾ ಬಾಲಕ ॥ (21)

ಅರಿತು ನಾಲ್ವರೊಳೊಮ್ಮೆ ಮಂತ್ರಮಂ ಮಗುಳೊರ್ವ ।
ರರಿಯದಂತೊರ್ವರೊರ್ವರ ತಿಳದು ಸಮಗೈದು ।
ಪರಿಯಾತಾನೇ ತನ್ನೊಳಾಳೋಚನಂಗೈದು ಪೆರತೊರ್ವರರಿಯದಂತೆ ॥
ದೊರೆತನದ ಕಜ್ಜಮಂ ಕಾಣ್ಬೆಯ ಮಹಾಪ್ರಾಜ್ಞ ।
ತರಣಿವಂಶೋತ್ತಮ ನೃಪೋತ್ತಮರ ರೀತಿಯಂ ।
ಪರಿವಿಡಿದು ನಡಪವೆಯ ಸತ್ಯ ಶೌಚಾಚಾರಧರ್ಮನಿಷ್ಠೆಗಳ ಬಿಡದೆ ॥ (22)

ತಂದೆತಾಯಿಗಳಂವ ಬಂಧ್ವಿಷ್ಟ ಜನರೆಲ್ಲ ।
ಕುಂದಿಲ್ಲದುತ್ಸಾಹವೆರೆದಿರ್ಪರೇ ವರ್ಣ ।
ವೊಂದೊಂದನನುಸರಣೆಗೈದು ಧರ್ಮವ ಬಿಡದೆ ನಡೆವುದೆ ಯಥಾಕ್ರಮದೊಳು ॥
ಹೊಂದಿಬಹುದೆ ಸುವರ್ಷ ಪ್ರಜೆಗಳೆಲ್ಲಾರೋಗ್ಯ ।
ದಿಂದಿರ್ಪರೇ ಕ್ರೂರ ಶಾಪಾಪದಾದಿಗಳು ।
ಪೊಂದದಿಹರೇ ನೆಲನ ತಾತ ನೃಪನೀತಿಯಂ ಪಾಲಿಪೆಯ ಸುಮತಿವಿಡಿದು ॥ (23

ಉಸುರದೊಳವಂ ಪ್ರಿಯವ ಪ್ರಕಟಿಸುತ ಚಾಪಲ್ಯ ।
ದೆಸಕ ಪೆರ್ಚದ ತೆರದಿ ನಿಷ್ಠುರದ ಭಾಷೆಗಳೆ ।
ಮಿಸುಕಲೀಯದೆ ಪ್ರೀತಿಗೊಳಪೆಯಾ ಶುದ್ಧಾಂತದಂಗನಾಜನರ ತನಯ ॥
ಪೊಸಭೃತ್ಯರೊಪ್ಪದೆ ಪುರಾತನರ ವರ್ಜಿಸದೆ ।
ಪಶುವಾನೆ ಕುದುರೆಗಳನಾರೈದು ಭೂತರಂ ।
ಹಸದಿ ಸಂತೋಷಿಪೊಲು ಸಕಲಾಭರಣವಿಟ್ಟು ವೊಲಗ ದೊಳಿಸೆ ದಿರ್ಪೆಯ
ಅತುಲಸ್ವಾದ್ವನ್ನಮ ನ್ನೊರ್ವನೇ ಭುಂಜಿಸದೆ । (24)

ಹಿತಬಂಧುಸಂದೋಹವೆರೆಸಿ ಭೋಜನಗೈದು ।
ಸತತಸಂಪ್ರೀತಿಯಿಂ ಮೂರ್ತಿಸಂಬಂಧಿಗಳ ಪ್ರಿಯದಿಂದ ದಿಟ್ಟಿಸುವೆಯ ॥
ಕ್ಷಿತಿಯರಸನೀತನೇ ಚಿರಕಾಲ ಶಾಶ್ವತದೊ ।
ಳತುಲಭೋಗದೊಳಿರಲ್ವೇಳ್ಕೆಂದು ಸರ್ವಜನ ।
ಹಿತ್ರದಿ ಪ್ರಾರ್ಥನೆಗೈಯಲಾಳೋಚಿಸಿರ್ಪೆಯಾ ಮುಧದಿ ಭೂಪಾಲತನುಜ ॥ (25)

ಮಾಸನಾಲ್ಕೆಡೆವಿಡದೆ ಮಳೆಗರೆದು ಪುಷ್ಪಫಲ।
ರಾಶಿಗಳ ಬೆರ್ಚಿಸುತ ಲೋಕಸಂತಸಗೊಳಿ ವಿ।
ಳಾಸದಿಂ ಭೋಗಗಳನುಂಬ ಮಘವನ ತೆರದಲತಿ ಹರುಷಗೊಳಿಸಿ ಧರೆಯ॥
ಬೇಸರಿಲ್ಲದೆ ತನ್ನ ತನಯರಂದದಿ ಪೊರೆವ।
ವಾಸಿಯುಂಟದರಿಂದಲಿಂದ್ರನೈಶ್ವರ್ಯ ಸಂ।
ವಾಸನೆನಿಸುವನರಸು ಲೋಕಕಾಂಕ್ಷಿತನಪ್ಪನಿದು ಸಿದ್ಧ ನೃಪಕುಮಾರ॥ (26)
ಕಂದಿಸದೆ ಕುಂದಿಸದೆ ಕರೆಕರೆಯೊಳೊಂದಿಸದೆ।
ಚಂದದಿಂ ನಿಜಕರದಲೆಂಟುತಿಂಗಳು ಭೂಮಿ।
ಯೊಂದಿರುವ ಜಲವ ಗ್ರಹಿಸುವ ದ್ವಾದಶಾತ್ಮನೆಂತಂತೆ ಪ್ರಜೆಪರಿವಾರಮಂ॥
ನಂದನೋಪಮಗೈದು ನಾನಾವಿಧದ ಕರಗ।
ಳಂದ ವಸುವನ್ನಯದಿ ಸೆಳೆವನದರಿಂ ಲೋಕ।
ಬಂಧು ವಹ ನೃಪ ಕಾಂಕ್ಷಿಗರಿಗವಶ್ಯಂ ಕೇಳು ನರನಾಥತನಯ ಮುದದಿ॥ (27)
ಸರ್ವಭೂತಂಗಳೊಳಪೊಕ್ಕು ಶಾರೀರದೊಳ್।
ತೋರ್ವ ವೃತ್ತಂಗಳಂ ತಿಳಿದು ಸುಖಗೊಳಿಸುವಸು।
ಪರ್ವರಗ್ರಣಿಯಂತೆ ನೃಪನೀತಿಯಂ ಗುಪ್ತಚರರ ಸಂತೈಸಿ ಕಳಪಿ॥
ಸರ್ವಂಸಹೋದಂತಗಳನರಿತು ಮರೆತು ಬಲು।
ಗರ್ವಿಷ್ಠರೆನಿಪ ದುರ್ಮಾರ್ಗಿಗಳ ನಿಗ್ರಹಿಸ।
ಖರ್ವಮೆನೆ ಧರ್ಮಾಭಿವೃದ್ಧಿಗೈದಪ ನೃಪತಿಯದರಿಂದ ಧನ್ಯತನಯ॥ (28)
ತಿಳಿದು ಕೃತ್ಯಾಕೃತ್ಯಗಳ ಪೊತ್ತು ಬರುವನ್ನ।
ಕಳವಳಸದಿರ್ದ ಧರ್ಮವ ಮೀರದವರನ್ನು।
ಕೊಳುವ ವೈವಸ್ವತ ಧರಾನಾಥನಂತೆ ಜನರೆಸಗುವ ಹಿತಾಹಿತಗಳ॥
ತಿಳಿಯದರನಂತಿರ್ದ ಸಮಯಮೆಸಗಲು ಧರ್ಮ।
ಗಳಲಿ ಬೇಳ್ದಂತೆ ದಂಡನೆಗೈದು ಪಾತಕವ।
ಬೆಳೆಯದೆ ಜಗದ್ರಕ್ಷಣಂಗೈದಪನು ನೃಪವರಗಿದವಶ್ಯಕ ನರೇಂದ್ರ॥ (29)
ಬಯಸದಲೆ ಸಕಲನದಿಗಳು ನೀರಧಿಯ ಬಯಸಿ।
ಪ್ರಿಯನೆನ್ನು ತೊಲಿವಂತೆ ಮಾಡಿರುವ ವರುಣ ದೊರೆ।
ನಯದಿಂದರೆಲ್ಲರಂ ಸ್ವವಶಮಾಗಿರ್ಪಂತೆ ಮಾಡುತಿಹ ಶಾಸನದಲಿ॥
ರಯದಿಂದಲುದಿಸಲೋಷಧಿಯರಸ ಜನ ಮನಃ।
ಪ್ರಿಯದಿಂದಲಾನಂದಗೊಳುವಂತೆ ಸಂತತಂ।
ದಯದೊಳೆಲ್ಲರ ಹರ್ಷಗೊಳಿಸಿ ಪಾಲನೆಗೈವ ನೃಪ ಮುಖ್ಯಮೀ ಜಗತಿಗೆ। (30)
ಸುರವ ರವಿ ಪವಮಾನ ತರಣಿಸುತ ನಪ್ಪೆರೆಯ।
ಇರುಳೆರೆಯರಂಶವಂ ಧರಿಸಿ ಸಜ್ಜನಲೋಕ।
ದಿರವ ಪಾಲಿಸಲು ಪರದೇವತೆಯ ಪ್ರತ್ಯಕ್ಷರೂಪಿನಿಂ ಭೂಪನೆನಿಸಿ॥
ಮೆರೆದಪನು ಧರಣಿಪನು ಹರಿಗಭಿನ್ನ ಮೆನುತ್ತ।
ಲೊರೆವಖಿಲಶಾಸ್ತ್ರ ಸಾರ್ಥಕ ಮಪ್ಪೊಲುಂ ದಯದಿ।
ದೊರೆತನವ ಕೈಕೊಂಡು ಪರಿಪಾಲನಂಗೈವುದೆರಸ ಕುಲಧರ್ಮವಿಡಿದು॥ (31)

ಇಂತಪ್ಪಮಿತ ಸೌಖ್ಯಪ್ರಾಂತ ಶುಭವಚನಗಳ ।
ಸಂತಸದಿ ರಘುವೀರನುಪದೇಶಿಸಲ್ಕೆ ತ ।
ನ್ನಂತರಂಗದೊಳರ್ದ ಪರಿಯು ಬಿತ್ತರಿಸಿದಂ ಭರತನತಿಭಕ್ತಿಯಿಂದೆ ॥
ಚಿಂತಿಸಲ್ಕಾನಾರು ದಶರಥಮಹೀರಮಣ ।
ನೆಂತರಂಗಪ್ರೀತ ಪಿರಿಯು ಮತ್ತಾನೆಗರ ।
ಕಾಂತನಹನಲ್ಲದೆ ಕನೀಯಸಂ ದೊರೆಯಹನೆ ಧರ್ಮಪಂಥಾನಮುಳದು ॥ (32)
ತರಣಿವಂಶವ ಪೊರೆದು ತಾರೆಶಶಿಯುಳ್ಳನ್ನ ।
ಪರಮಮಂಗಳಚರಿತೆ ಪಾವನೀಕೃತ್ರಮೆನಿಸಿ ।
ಸುರನರರ ರಕ್ಷಿಪೊಲು ಮಾಳ್ಪನಂತಸುತಲ್ಪ ರಘುಕುಲೋತ್ತಂಸ ನೀನೆ ॥
ಕರುಣಾರಸದಿ ಬಿರೆದು ಪುರದಧೀಶತೆಯಾಂತು ।
ಸಿರಿಯು ಪಾಲಿಪ್ಪುದೆನುತ ಚರಣಂಗಳಂಗೆರಗಿ ।
ಭರತ ಸಂಪ್ರಾರ್ಥಿಸಿದ ಶ್ರೀರಾಮಪುರದೆರೆಯು ರಘುವೀರನಂ ನುತಿಸುತ ॥ (33)

॥ ಸಂಧಿ 31, ಪದ 1369 ॥

## ಮೂವತ್ತೆರಡನೆಯ ಸಂಧಿ.

ಸೂಚನೆ ॥ ಗುರು ವಸಿಷ್ಠಾದಿ ಮತವಿಡಿದು ದಶರಥಮಹೀ ।
ವರಗೆ ಸಗ್ಗದ ಪದವಿಯಿತ್ತು ಮೂಲೋಕಮಂ ।
ಪರಿಪಾಲಿಸಿದ ರಾಮಚಂದ್ರ ವಿಮಲಾನಂದವೆರೆದ ಸಚ್ಚರಿತೆಯಿಂದ ॥

ನಗಜಾತೆ ಕೇಳ್ ಭರತ ಶ್ರೀರಾಮಪದಪದ್ಮ ।
ಯುಗಳಕಭಿನತಿಗೈದು ನಗರವೃತ್ತಾಂತಮಂ ।
ಬಗೆಗಗೋಚರಮಪ್ಪತೆರದಿ ವಿಸ್ತರಿಸಿದುದನಾಲಿಸಚ್ಚರಿವೆರದುದ ॥
ಜಗದೇಕವೀರ ಕೇಳಾನು ಪಾತಾಮಹನ ।
ಮಗನೊಡನೆ ಪೋಗಲತ್ತಲು ಗಹನದೆಡೆಗೆಂದು ।
ಬಗೆದು ಮನದೊಳಗೆ ಕೈಕಾವಚನ ಸತ್ಯಮೆನುತರಿದು ನಡೆತಂದಾದುದು ॥ (1)
ಧರಣಿಜೆಯು ಲಕ್ಷ್ಮಣನ ಭವದೀಯಚರಿತೆಗಳ ।
ಸ್ಮರಿಸುತಂ ತಾತ ಸುರರಾಜನರ್ಧಾಸನದ ।
ಸರಸಮಂ ಬಯಸಿ ಸಂತಸದಲೈದಿದರನಿತರೊಳಗೆನ್ನ ಗುರು ವಸಿಷ್ಠಂ ॥
ಕರುಣದಿಂ ಬರಿಸಿ ಪಿತೃಕಾರ್ಯಗಳ ಶಾಸ್ತ್ರೀಯ ।
ವೆರೆದಾಚರಣೆಗೈಸಿ ದೊರೆತನವನಾಳೆನ್ನು ।
ತೊರೆದರಾಂ ಖತಿಯಿಂದ ಚೀರವಸನವ ಧರಿಸಿ ಬಂದೆ ಮುನಿವೇಷವೆರಸಿ ॥ (2)
ಬಿತ್ತರಂಗೈವೆನಂದಿಂದಾವನೃಪಕಾರ್ಯ ।
ವೃತ್ತಂಗಳೆಲ್ಲಮಂ ಸರ್ವಜ್ಞ ಬೇಗ ಪಿತ ।
ಗಿತ್ತು ಜಲಮಂ ರಾಜ್ಯಪರಿಪಾಲನಾವಸರಮಂ ತಿಳದು ನಡಪುದೆನುತ ॥
ಉತ್ತಮಶಿಖಾರತ್ನ ಭರತನಾಡಿದ ವಾಕ್ಯ ।
ಮೊತ್ತಗಳ್ ಪಿತೃನಿಧನಸೂಚಕಗಳಾಗಲ್ ರ ।
ಘೂತ್ತಮಂ ಕೇಳ ಹಮ್ಮೈಸಿ ಹಳವಳಸುತ್ತ ಧರೆಗೊರಗಿ ಮೂರ್ಛೆಯಿಂದ ॥ (3)

ಪಿತನಳಿದ ವಾರ್ತೆಯಂ ಕೇಳ ನಿಸ್ಸಂಜ್ಞೆಯಿಂ ।
ಕ್ಷಿತಿಯೊರಗಿದುದ ಕಂಡು ಸೌಮಿತ್ರಿ ಚಿತ್ತದನು ।
ರತಿಯಿಂದಲಣ್ಣನಂಘ್ರಿಗಳ ಪಿಡಿದಳಲುತಿರಲ್ ನೋಡಿ ಕಂಬನಿಗರೆವುತೆ ॥
ಅತಿಮಾತ್ರಖೇದದಿಂ ಧಗಣಿಜೆ ಪ್ರಳಾಪಿಸುವ ।
ಗತಿವಿಡಿದು ಭರತಶತ್ರುಘ್ನರಿರ್ವರು ತಮ್ಮ ।
ಮತಿಗೆ ತೋರ್ದಂತೆ ಪಂಬಲಿಸಿದರದೇನೆಂಬೆ ನಾಕ್ಷಣದವಸ್ಥೆಗಳನು ॥ (4)
ಅನಿತರೊಳಗೆಚ್ಚತ್ತು ರಘುನಾಥ ಸಾಲ್ದಿಸೆಗ ॥
ಳನು ನೋಡಿ ಶೋ (ಕದೊಳ್) ಭರತನೊಡನಿಂತೆಂದ ।
ನೆನೆದೆನ್ನ ಸಗ್ಗಕ್ಕೈದಿದ ತಾತ ಧರ್ಮಜ್ಞನೆಂಬ ವಾರ್ತೆಯು ಕೇಳುತ ॥
ಜನಪದಂ ರಾಜ್ಯಸಿರಿ ಪತ್ತನದ ಭೋಗಂಗ ।
ಳೆನಗದೇತಕೆ ಬನದಿ ಮುನಿವೇಷದಿಂದ ಬಲು ।
ದಿನಗಳಂ ಕಳೆವೆನೆಂದಾಡಿದ ಕಠೋರತರನಿಂದೆಗಳನೇಂ ಪೇಳ್ವೆನು ॥ (5)
ಗಿರಿಪ್ರತಿಧ್ವನಿ ಗೊಡುವ ತೆರದಿಂದಲೈವರುಂ ।
ಪರಿಪರಿಯ ಗುಣಗಳಂ ನೆನೆನೆನೆದು ಪಲುಬುತಿರ ।
ಲುರುತರದ ವಾರ್ತೆಯನ್ನಾಲಿಸುತ ಸನ್ನಿಹಿತವಾದ ಭರತನ ಸೇನೆಯು ॥
ದೊರೆಗಳೆಲ್ಲರ್ ತಿಳಿದು ಭರತನುಂ ರಘುವರನ ।
ಬೆರೆತನೆನುತರಿತಖಿಲಜನರೆಲ್ಲ ವೇಗದಿಂ ।
ಕರಿಹಯರಥಂಗಳಾದ್ಯಖಿತ ವಾಹನದಿಂದಲೈತಂದರಿಚ್ಛೆಯಿಂದ ॥ (6)
ಸ್ಥಂಡಿಲದೊಳುರುಜಟಾಮಕುಟದಿಂದೆಡಬಲದಿ ।
ಮಂಡಿಸಿಹ ಭರತಶತ್ರುಘ್ನಲಕ್ಷ್ಮಣರಿಂದೆ ।
ಖಂಡೇಂದುಮೌಳಿಯಂ ತೆಡದೊಳಹ ಜಾನಕಿಯ ನೋಡಿ ಪುರಜನರೆಲ್ಲರು ॥
ತಂಡತಂಡದಿ ಬಂದು ಕಂಡೆರಗೆ ಕೆಲರು ಮುಂ ।
ಕೊಂಡಪ್ಪಿ ಕೆಲರು ದೂರದಲಿ ನಮಿಸುತೀಪರಿಯ ।
ಖಂಡದಂತಃಕರಣದಿಂದ ಮಾತೆಯರೆಲ್ಲ ತೊಳಲುತ್ತಲಿರಲಿತ್ತಲು ॥ (7)
ಗುರುವಸಿಷ್ಠರ ಮುಂತೆ ಗೈದು ಮಾತೆಯರೆಲ್ಲ ।
ಧರಧರದಿ ಬಂದು ಸುತನಂ ಕಂಡು ಶೋಕರವ ।
ಭರದಿಂದಲಾರ್ತರಂ ಕೊಡುತಿರೆ ರಘುವೀರನಿದಿರೆದ್ದು ಭಕ್ತಿಯಿಂದ ॥
ಗುರುವಿನಡಿಗೆರಗಿ ಮಾತೆಯರಿಗಭಿವಂದಿಸಲು ।
ತರುಣನಂ ನೋಡಿ ಕೌಸಲ್ಯೆ ಕರುಣದೊಳಪ್ಪಿ ।
ಕರೆಯೆ ಕಂಬನಿಗಳಂ ಉಳಿದಮಾತೆಯರೆಲ್ಲರಂ ತೆಸಗಿದರ್ ಕೃಪೆಯೊಳು ॥ (8)
ಅನಿತರೊಳು ಸೌಮಿತ್ರಿಯಭಿವಾದನಂಗೈಯೆ ।
ಜನನಿಯರ್ ನೋಡಿ ಕರಗುತ ನಿಜೋನ್ನತ ಹಸ್ತ ।
ವನಜಂಗಳಿಂದ ತನುಪರಿಮೃಜನೆಗೈವುತಂ ಮರುಗುತಲ್ಲಲ್ಲಿ ಕುಳಿತು ॥
ವಿನಮಿತಾನನರಾಗುತೊರ್ವರೊರ್ವರ ನೋಡಿ ।
ತನಯರಂ ಸೆಳೆದಪ್ಪಿ ಸೈಪಿಡುತ ಸುಕ್ಷೇಮ ।
ವನುಗೈಯುವನಿತರೊಳ್ ಮುನಿತಿಲಕನಿಂತೆಂದ ಪಿರಿದ ಕಾಲೋಚಿತವನು ॥ (9)

ಸಕಲಭೋಗಂಗಳನ್ನುಂಡು ಭೂಸುರರ ಸು ।
ಪ್ರಕರ ನಲಿವಂತಖಿಲಯಾಗಂಗಳಂ ಗೈದು ।
ರಕುತಿಯಿಂ ಕೀರ್ತಿಯನ್ನೆಡಬಲದೊಳುಘ್ಘಡಿಸುತಿರೆ ನಿಲಿಂಪಾಪ್ತಜನರು ॥
ಸಕಲಸನ್ಮಾನದಿಂ ಸುರಪನಾಸ್ಥಾನದೊಲು ।
ಚಕಚಕಿಪ ಸಂತೋಷ ಕೌತುಕಿತಚಿತ್ತ ದಿಂ ।
ಸುಕರವಾಗಿಹ ಪಿತನ ನೆನೆದಳುವ ದೇಸೆಸಗು ಪುತ್ರಕೃತ್ಯವನು ಬಿಡದೆ ॥ (10)

ಎಂದೊರೆಯೆ ಬಂದು ಮಂದಾಕಿನಿಯೊಳಿಳಿದು ನಲ ।
ವಿಂದ ಸ್ನಾನಂಗೈದು ಜನಕನಿಗೆ ಜಲವಿತ್ತು ।
ಪೊಂದೆತಟವಂ ಸುಮಿತ್ರಾತನಯನೈ ತಂದು ಮಿಂದರ್ಘ್ಯಗಳನುಕೊಡಲು ॥
ಇಂದುಮುಖಿ ವೈದೇಹಿವೇಗ ಗೋದಾವರಿಯು ।
ಲಂದು ಸ್ನಾನಂಗೈದು ತಟವ ಸಾಗಲ್ ಲೋಕ ।
ಬಂಧುವಿನ ಕುಲತಿಲಕ ರಾಮನೊಳು ವಿಸ್ತರಿಸಿ ಪೇಳ್ದಂ ಮುನಿತಿಲಕನು ॥ (11)

ತರಣಿ ವಂಶೋದ್ಭೂತವಾದರಸುಗಳ ಕುಲವ ।
ನೊರೆಯೆ ಹಯಮೇಧಾದಿಗಳ ರಚಿಸಿ ಸತ್ಕೀರ್ತಿ ।
ಭರಿತಮುಲ್ಲೋಕನೆನಿಸಿದ ಪಂಕ್ತಿರಥನಿಂಗೆ ಸಂತುಷ್ಟಿಕರವೆನಿಸುವ ॥
ಚರಮಕೃತ್ಯಗಳ ರಚಿಪುದು ಲೇಸು ಮತ್ತಿಲ್ಲಿ ।
ಗಿರುವದತಿದೂರದೊಳ್ ಪಿತೃದೇವತಾತುಷ್ಟಿ ।
ಕರವೆನಿಪ ಪರಮಪಾವನವೆನಿಪ ಸ್ಥಳವೊಂದನೊರದಪೆನು ಲಾಲಿಸುವುದು ॥ (12)

ದೇವನಿರ್ಮಿತತಾಣ ಗಯೆಯೆನಿಪನಾದುದತಿ ।
ಪಾವನೀಕೃತಪಿತೃ ನ್ಯಗ್ರೋಧಸುಚ್ಛಾಯೆ ।
ಯುರ್ವರೆಯೊಳಗೊಂದು ಪುಣ್ಯಶಿಲೆ ಇಹುದಲ್ಲಿ ಫಲ್ಗುನೀನಾಮ ನದಿಯು ॥
ಭಾವಿಸುತ ತತ್ತಟಿನಿಯೊಳ್ ಮಿಂದು ಪಿತೃಗಳಂ ।
ಗೀವುದಾಮಳಕಪ್ರಮಾಣದನ್ನವ ನಕ್ಷ ।
ಸಾವಧಾನದಿ ತುಷ್ಟಿಗೊಳಪುದೈ ಮೂವೇಳುಕುಲಸಪ್ತಗೋತ್ರಗಳನು ॥ (13)

ಸೀತೆ ಲಕ್ಷ್ಮಣ ಭರತ ಶತ್ರುಘ್ನರೊಡವೆರೆದು ।
ಪ್ರೀತಿಯಿಂದಾಮಹಾ ಸ್ಥಳಕೈದಿ ಪಿತೃಗಳಂ ।
ಪ್ರೀತಿಗೊಳಿಸಲ್ವೇಳ್ಕು ಮೆನುತೊರೆದು ತತ್ಕಾಲಕಲಿತಕರ್ಮಗಳ ರಚಿಸಿ ॥
ಸಾತಿಶಯದಿಂಗುದಿಪಿಷ್ಯಾಕವಂ ತಂದು ।
ಸೀತೆ ಮೃದುಕರದಿಂದ ಗುಳಿಕೆಗಳಗೈದು ನಿಜ ।
ನೇತಾಗ್ರಹಸ್ತದಲ್ಲಿಡೆ ಮಂತ್ರ ಪೂತಗೈದಿತ್ತು ಪಿತೃಗಳನು ಸ್ಮರಿಸಿ ॥ (14)

ಕಾಲೋಚಿತದ ಕರ್ಮಗಳ ರಚಿಸಿ ಸೇನೆಯಂ ।
ಶೈಲದೆಡೆಯಲ್ಲಿರಿಸಿ ಗುರುಸಹಿತ ಗಯಕಂ ನಿ ।
ರಾಲಸ್ಯದಿಂದೈದಿ ಫಲ್ಗುನೀತೀರದೊಳು ಸ್ನಾನಾಹ್ನಿಕಗಳ ರಚಿಸಿ ॥
ಮೇಲೆ ಪಿತೃದೇವತಾರಾಧನಂಗೈಯೆ ದು ।
ಶ್ಶೀಲ ಬಾಡಬದಲ್ಲಿ ಕ್ರೂರಬುದ್ಧಿಯುಲವಿತ ।
ವಾಲಸ್ಯವೆಸಗೆ ವಿಪ್ರಾವಲೇಪವ ತಿಳಿದು ತನ್ನೊಳಾಲೋಚಿಸಿದನು ॥ (15)

ಕಿನಿಸಿಂದ ದಂಡಿಸಲಯೋಗ್ಯತೆಯು ವಿಪ್ರಕುಲ ।
ಧನಮದಾಂಧತೆಯಿಂದ ಗಣಿಸರಾರಾದೊಡಂ ।
ಸನುಮತಿಸರಾವಾವ ಪರಿಯು ನುಡಿಗಳಿವರಿಗೇಂಗೈವೆನುತ ಮನದಿ ॥
ನೆನೆದೊಂದು ಪರಿಯನೆಂತಾದೊಡಿಂದೀವಿಪ್ರ ।
ಜನದುಷ್ಟಕೃತ್ಯಗಳನಪಹರಿಸವೇಳ್ಕೆನುತ ।
ನೆನದಂ ಗಯಾಸುರನ ಪಿತೃತುಷ್ಟಿಕರನತುಲಸಾಘುಜನಸೇವ್ಯವರನ (16)
ದೃಢಮತಿಯು ಕೇಳು ನಾನಿತ್ತ ಪಿಂಡವಪ್ರಿಯುದಿ ।
ಪಿಡಿದು ಜಿಹ್ವಾಗ್ರದಲಿ ಪಿತೃಗಳಿಗೆ ಹರ್ಷವಂ ।
ಕೊಡುವುದೆನೆ ಜಗದೀಶನನುಮತಿಯೊಳಂ ಗಯಾಶಿರವು ಸಂತುಷ್ಟಿವಡೆದು ॥
ಕೊಡುವ ಪಿಂಡಂಗಳಂರಸನಾಗ್ರಕಂ ಪೋಗಿ ।
ತುಡುಕಲಾಕ್ಷಣ ನಿಖಿಲಪಿತೃಗಳೆಲ್ಲರ್ ಪ್ರಿಯುದಿ ।
ನುಡಿದರಾವ್ ಮುಕ್ತರಾದೆವೆನುತ್ತ ಪ್ರತ್ಯಕ್ಷಮಲ್ಲದಿಹ ನುಡಿಗಳಿಂದ । (17)
ಅಶರೀರವಾಣಿಯುಂ ಕೇಳುತತ್ಯಾಶ್ಚರ್ಯ ।
ವಶನಾಗಿ ರಘುವರಂ ಫಲ್ಗುನಿಯು ಬೆಸಗೊಂಡ ।
ರಸನಾವತಿಯಿದೇನು ಬೀಜವಲ್ಲದೆ ಮುಕ್ತಿಯಾದುದಸ್ಮತ್ಪಿತೃಕುಲಂ ॥
ಉಸಿರವೇಳ್ಕೆಂದೆನಲು ಸೈವಲಿನಿ ಸಂತೋಷ ।
ದೆಸಕದಿಂ ದೊರೆದಳೀ ವೈದೇಹಿ ಯಾಚವುನ ।
ವೆಸಗಿ ಬಿಟ್ಟುದಕವಿಂ ಮುಕ್ತರಾದರೆನುತ್ತ ಪೇಳಲಾವಗೆ ನಗುತಲಿ ॥ (18)
ಸತಿಯು ಮುಖವುಂ ನೋಡಿ ಸಂತಸವಿ ನಗೆವೆರಸಿ ।
ಕ್ಷಿತಿಸುತೆಯು ಸಾಕ್ಷಿ ತನ್ನುಂಗುಟವ ನೋಡುತ್ತ ।
ಖತಿಯಿಂದ ಫಲ್ಗುನಿಯು ಕರೆದು ನಿಷ್ಠುರಭಾಷಿಯಿಂದ ಕೋಪದೊಳಿಂವಳು ॥
ಸತಿಯಾಕೃತಿಯನಾಂತು ಮತ್ತವರ ಚರಿತೆಗಳ ।
ಪತಿಗೊರೆವೆ ದುಷ್ಟಾತ್ಮೆ ನೀ ಗುಪ್ತವಾಗಿ ಸಂ ।
ಗತಿಗೈವುದಧಿಯನೆನುತ್ತ ಶಾಪವನೀಯೆ ನದಿ ತಿರೋಹಿತಳಾದಳು । (19)
ತಾಮಸದ ಬಾಡಬವ ನಿಜಜೀವನೋದ್ವಿಗ್ನ ।
ರಾಮ ಗಯುಮಂ ನೋಡಿ ಪಿತೃಗಳಂಗಡಸುವ ನಿ ।
ರಾಮಯಾನಂದಮಂ ಕಂಡು ಕಳವಳ ಗೊಂಡು ಕರುಣಾವರಣನಿಲಯನು ॥
ತಾಮಸಧ್ವಾಂತರದಿ ರವಿಕುಲಾರಾಮ ನಿ ।
ಸ್ಸೀಮ ಹರಿಚಂದನಿತ ವಿನಮಿತಾನನಜನ ।
ಸ್ತೋಮಪಾಲನಶೀಲನಂ ಘಟೀಯಂತ್ರಗಳಗಗ್ರಭವರೆನಿಪಂವದೆ ॥ (20)
ಗುರುಪುಣ್ಯ ತೀರ್ಥ ದೇವತೆ ಪಿತೃಗಳಂ ಧರ್ಮ ।
ಕರಮಾರ್ಗ ವೃದ್ಧ್ವರ್ಥ . . . . . . ನಾವಾಣಿ ಸಂ ।
ಚರಿಸದರ್ಥಾಕಾಂಕ್ಷೆ ವಿಡಿದ ದೌರ್ಜನ್ಯಜನಕ ಘಟಿತದುರವಸ್ಥೆಯು ॥
ಸರಿಸದಲಿ ಮಾರ್ದದಿತದಂತೆ ಸವ್ರುದ್ಯೆ ಸ್ವಾಂತ ।
ವರೆನಿವಿುಷ ವೀತಿಹೋತ್ರಾಂತರದ ಲೋಹವಂ ।
ತರರೆ ಜೀವನದಾಸೆಯಿಂ ವಿಪ್ರರೈತಂದು ಬಿನ್ನಪಂಗೈದರೊಲಿದು ॥ (21)

ದೇವ ನಿಖಿಲಾಧಾರ ನಿರುಪಮ ದಯಾಕರ ಸು।
ಜೀವನಾಧಾರ ನಾರ್ತತ್ರಾಣ ಶುಭಚರಣ।
ಪಾವನ ಪವಿತ್ರ ಪರಬ್ರಹ್ಮ ಮುಮುಕ್ಷುಗಳ ಚಿತ್ತಾತ ಬಿಡಿಯು ತಾತ॥
ಶ್ರೀವಧೂ ರಮಣ ಸಚ್ಚಿದ್ರೂಪ ಸೌಂದರಿಯ।
ದೀವಸುಧೆ ಯರಸನೆಂದವಲೇಪಗರ್ವದಿಂ।
ಭಾವನಾಂತಃಕರಣರಾದೆಮ್ಮ ನುದ್ಧರಿಸಿ ಪೊರೆ ಚರಣಶರಣರೆಂದು॥ (22)
ಸಂಗವಿರಹಿತ ಚರಾಚರಜೀವರೊಳ್ಹೊರಗೆ।
ಭಂಗುರದಲಿರ್ಪಾತ ಸ್ಥಿತಿಲಯಂಗಳ ಕರ್ತೃ।
ಮಂಗಳಾತ್ಮಕ ಪ್ರಮಾಣಾವೇದ್ಯ ಜಗದಾದಿಯೆನಿಪ ನಿನ್ನಯ ಮಹಿಮೆಯ॥
ಹಿಂಗದನುದಿನ ಮಾಳ್ಪ ಯೋಗಿಗಳು ತಿಳಿಯೆ ನಿಗ।
ಮಂಗಳಮ್ಮವು ಮನುಜರಾವೆಂತು ಕಂಡಪೆವಿ।
ದಂ ಗಣಿಸಲೆಮ್ಮಳವೆ ಭವದಿಂದ್ರಿಯಾದಿಗಳಗಳವಡದ ಸನ್ಮಹಿಮೆಯ॥ (23)
ಮರೆದೆಮ್ಮ ಕೃತ್ಯಗಳ ಸ್ಮರಣೆಗೈಯದೆ ಜೀವ।
ಪರಮಾರ್ಥವೃತ್ತಿಯಂ ತೋರಿ ಪಾಲನೆಗೈಯ।
ದಿರಲಾವದೆಂತು ಬದುಕುವೆ ವಖಿಲಹಿಂಸಕರ ಪಿಸುಣ ಕ್ರೋಧಾದ್ಯುಪೇತರು॥
ದುರುಳರತಿಕಾಮನಿರ್ದಯನಿಪುಣರೆಮ್ಮ ನೀ।
ತಿರೆಯೊಳಾರ್ಗೈ ನೋಳ್ಪಿಂದು ನೀಂ ಕೃತಗಯಯೆ।
ಧರೆಯೊಳಗನಾಯಾಸದಿಂದ ಪಿತೃ ಮುಕ್ತಿಗಳಪಡೆವರ್ಗೈ ಸಜ್ಜನರುಗಳು॥ (24)
ಈ ಮಹಾಸ್ಥಾನದೊಳೆಬಂದು ದ್ವಿಜಕುಲರೆಲ್ಲ।
ಪ್ರೇಮದಿಂ ಮನದಿಷ್ಟಗಳ ಪಡವುತ್ತೈದುತಿರ।
ಲಾಮಹಾಗಯಮೆನುತಲೊರ್ವರು ನಿಷ್ಟೆಸರು ನೆನದೆಮ್ಮ ದೌರ್ಜನ್ಯವ॥
ನೇಮುಗೆಟ್ಟುದು ಗಯಾವಿಪ್ರಜೀವನ ಕಷ್ಟ।
ಗ್ರಾಮಂಜಸಮದಾಯ್ತು ದೇವ ನೀಂ ಕೃಪೆಯಿಂದ।
ಲೀಮಹೀಸುರರ ಪಾಲಿಸದಿರ್ದರನ್ಯಥಾಗತಿ ಜನಿಸದಂಬುಜಾಕ್ಷ॥ (25)
ಇಂತವೆಂತಾರ್ತ (ಯುತ) ದ್ವಿಜವಾಣಿಯಂ ಕೇಳಿ।
ಸ್ವಾಂತಾನುರಾಗದಿಂ ಕೃಪೆವೆತ್ತು ದ್ವಿಜರಿಗೋ।
ರಂತಭಯಮಿತ್ತು ಕರುಣಾಳುಗಳ ದೇವನೆಂದೆನಿಪ ಬಿರುದಂ ಮೆರೆವೊಡೆ॥
ಮುಂತೆ ಪಿತೃಕಾರ್ಯಗಳನೆಸಗಲೈತಹ ವಿಪ್ರ।
ನಂತೆ ಪೂರ್ವಶ್ರದ್ಧೆಯಿಂ ಗಯಾಶಿರದಲ್ಲಿ।
ಸಂತಸದಿ ಪಿತೃಗಳಂಗೀಯಲನ್ನವಂ......ಪೂರ್ವಾಚರಣೆಯನು ಬಿಡದೆ॥ (26)
ಎಂದೆನೆಂದದಿ ಗಯಾದಿ ವಿಧಿಯ ಮೀರದೆ ವಿಪ್ರ।
ವೃಂದದನುಮತಿವಿಡಿದು ಪಿತೃಕಾರ್ಯಗಳ ರಚಿಸಿ।
ಬಂದಾವುಗೈದ ಗಯೆಯೊಳ್ ಬ್ರಾಹ್ಮಣೋತ್ತಮರ ಸಂತುಷ್ಟಿಗೊಳಸಲೆನುತ॥
ಚಂದದಿಂ ವರಮಿತ್ತು ರಘುನಾಥನಾ ವಿಪ್ರ।
ಗೊಂದಣವ ನೋಡಿ ಕೃಪೆಯಿಂದ ಮುಗುಳಂತೆಂದ।
ಮುಂದೆ ಕಲಿಯುಗ ಬರ್ಪುದದರಲ್ಲಿ ಧರ್ಮವೆಂದೆಂಬ ವಾರ್ತೆಯು ಪುಚ್ಚುದು॥ (27)

ಗುರು ವಂಚಕೆಗಳರ್ಥ ಸಂಚನೆಗಳುದ್ಧತದ ।
ಸೆರಗೆನಿಪನುಡಿ ನಿಜಾಚಾರ ವಿರಹಿತದೆ ನಡೆ ।
ವರಧರ್ಮಲೋಪ ಪಾಪಾಚಾರ ಸಂಭರಿತ ವಿಪ್ರರುದಿಸುವರು ಮುಂದೆ ॥
ಕರೆದನ್ನ ವಿಹಾವರಿಲ್ಲದರಿಂದ ನಿಮಗೆ ಸುಖ ।
ದೊರಕುವಂದದಿ ಕಯೋಷ್ಣಾನ್ನಪರ್ವತ ಕ್ಷೀರ ।
ಭರಿತ ಕೊಳ ಘೃತವಾಪಿ ದಧಿಯ ಕುಲ್ಯಂಗಳೀ ನೆಲದಿ ಕಂಗೊಳಸಲೆನುತ ॥ (28)
ಹರುಷದಿಂ ವರವಿತ್ತು ಗುರುವಸಿಷ್ಠರ ಬೆರೆದು ।
ಹರನಿರ್ಪ ನೆಲೆಯೆನುತಲಿತು ಕಾಶೀಪುರವ ।
ನಿರುತ ಕೈಲಾಸನಿಭವೆಂದು ಸಂತಸದಂದು ನಡೆತಂದ ನಲವಿನಿಂದ ॥
ಸುರತರಂಗಿಣಿ ಯುಲವಗಾಹನಸ್ನಾನವಂ ।
ವಿರಚಿಸುತ ಪಿತೃಗಳಂ ಸ್ಮರಿಸಿ ತರ್ಪಣಮಿತ್ತು ।
ನಿರುಪಮಾನಂದದಿಂ ತತ್ತಟದಿ ಕುಳ್ಳಿರ್ದ ಗುರುವ ಬೆಸಗೊಂಡನೊಲಿದು ॥ (29)
ದೇವ ಬೇಳೀ ಲೋಕವಿನಾಶರೀರದಿ ಬಂದು ।
ಜೀವನೋಪಮಿತವೆಂದಂತು ಪೋವಣಗೈದು ।
ನೋವನೀಯದೆ ಚತುರತೆಯಲಿ ಸಂತಸಗೊಂಡು ಮಡಗಿರ್ಪ ನಿಜವಸ್ತುವಂ ॥
ಈ ವಸುಧೆಯಲಿ ತೃಣೋಪಮವಾಗಿ ಬಿಡಲೆಂದು ।
ಭಾವಿಪರದೇಂ ಕತದಿ ದೇಹಿಗಳಗೆಲ್ಲ ಮೃತಿ ।
ತೀವಿದ ಭಯಂಕರದೊಳ್ ಮತ್ತದನೆ ಬಯಸುತಿಹರೀ ನೆಲದೊಳಖಿಳಜನರು ॥
ಮೃತಿಯ ಬಯಸುವರುಂಟೆ ಲೋಕಮೇಂ ಕಾರಣದೊ । (30)
ಳತಿಶಯಿತ ಪ್ರೀತಿಯಿಂ ಕಾಂಕ್ಷಿಪಶ್ಚರಿಯ ಸಂ ।
ಗತಿಯ ಬಯಸುವದೆನುತ ಶ್ರೀರಾಮ ಬೆಸಗೊಂಡರಾಮುನಿಪ ನಸುನಗುತಲಿ ॥
ಕ್ಷಿತಿಯಮರ ಸಂದೋಹ ದೊಳ್ ಕುಳಿತು ಕಳಶಜನ ।
ಸುತುಸುತೀಕ್ಷ್ಣಗೆ ಪೂರ್ವದಿ ಪೇಳ್ದವೃತ್ತಾಂತವಂ ।
ಪತಿಕರಿಸಿ ಬಿತ್ತರಂಗೈದ ಭೂಸುರರಮರನಿಕರ ಸಂತೋಷಿಪಂತೆ ॥ (31)
ಕೇಳು ರಘುವರ ಮಹಾದೇವವನೀ ಧರಣಿಯೊಳು ।
ಕಾಳ ಸಂತಸವನುರೆ ನಿಜಪ್ರಮುಖರೊಡವೆರೆದು ।
ಕೋಲಾಹಳಾನಂದದಿಂದಿರಲ್ ಕಂಡಖಿಲ ಭೂಸುರರ ನೆರವಿ ನೆರೆದು ॥
ಭಾಳನೇತ್ರನ ಭಜಿಸಲನುಗೈದು ದೀಕ್ಷೆಯಂ ।
ತಾಳ ಶತಸಾಹಸ್ರವತ್ಸರಗಳಂ ನೀರು ॥
ಕೊಳು ವರ್ಜನೆಗೈದು ಕೃಚ್ಛ್ರಚಾಂದ್ರಾಯಣಗಳಂದುಪಾಸನೆಗೈದರು ॥ (32)
ನಿರತಿಶಯಮುಕುತಿಯಂ ಬಯಸಿ ನಿದ್ರಾಹಾರ ।
ವೆರೆಯದನುದಿನ ಹರಸ್ಮರಣೆಯಿಂ ಬಹುಕಾಲ ।
ಹರಣಗೈವುತಲಿರ್ದ ಬ್ರಾಹ್ಮಣೋತ್ತಮರುಗಳ ಕಷ್ಟವಂ ನೋಡಿ ಮೃಡನು ॥
ಕರುಣದಿಂ ಬಂದಿದೇಂ ಕಾರಣದಿ ತಪವನಾ ।
ಚರಿಸುವಿರೆನುತ್ತ ಬೆಸಗೊಂಡರೆ ಮಹಾದೇವ ।
ಗೆರಗಿ ಬಿನ್ನಪಗೈದರೈಸೆ ತಮ್ಮಯ ಮನೋಭೀಷ್ಟಗಳನರ್ಥಿಯಿಂದ ॥ (33)

ಜಗದಖಿಲ ಜೀವಗಳು ಪಾತಕದ ಬಲೆಯೊಳಗೆ ।
ತಗುಲಿ ನರಕಾದ್ಯುಪದ್ರವದಿಂದ ಧರಣಿಯೊಳ್ ।
ಗೊಗೆದಪರನೇಕವಿಧ ಸಂಕಟಂಗೊಂಬರಾಯಾಸವಿಲ್ಲದ ತೆರದೊಳು ॥
ಸೊಗಯಿಸುವಮುಕ್ತಿಯಂ ಕೊಟ್ಟುಳಹಬೇಕೆಂದು ।
ಬಗೆಬಗೆಯಶ್ರುತಿಗಳಂ ಬೇಡಿಕೊಳಲತಿಚಿಂತೆ ।
ಯೊಗೆದುದಾಕ್ಷಣ ಚಂದ್ರಶೇಖರನಿಗೇನೆಂಬೆ ಹಿಂದುಮುಂದರಿಯದಂತೆ ॥ (34)
ಕೃತ ಸುಕೃತಫಲಗಳಿಂದವರವರಕರ್ಮಾನು ।
ಮತವಿಡಿದು ಗತಿಗಳ್ಪೈದುವ ಜೀವಸಂದೋಹ ।
ಕತಲ ಮುಕ್ತಿಯು ಶರೀರತ್ಯಾಗಮಾತ್ರದೊಳಹುದೆಂತೊ ಭೂತಳದೊಳು ॥
ಯತಿಗಳೀಪರಿಯ ದಯೆವೆರಸಿ ಮುಲ್ಲೋಕದುಪ ।
ಕೃತಿಗೆನ್ನ ಪಿಡಿದಿರ್ದರೇಂಗೈವೆನೆನುತ ಹರ ।
ಮತಿಯೊಳಾಳೋಚಿಸುತಲಿರಲನ್ನೆಗಂ ಬಂದ ಪೊಂಬೊಡೆಯ ನಲವಿನಿಂದ ॥ (35)
ಸಗ್ಗಿಗರ ಪಿರಿಯನೈತರೆ ನೋಡಿ ಹರ್ಷದಿಂ ।
ಬಗ್ಗನಿದಿರೆದ್ದು ಸೆಳೆದಪ್ಪಿ ಕ್ಷೇಮಾರೋಗ್ಯ ।
ಮುಗ್ಗಡಿಸೆ ಕಂದುಗೊರಲನ ನೋಡಿ ನಾಲ್ಮೊಗಂ ಚತುರತೆಯೊಳಿಂತೆಂದನು ॥
ಅಗ್ಗಳಕೃಪಾಸಿಂಧು ಕಂಗೊಳಿಪ ವೀರರಸ ।
ಸುಗ್ಗಿಯಾನನ ಕಂದಿತೇಂ ಕತದಿ ಪ್ರಿಯದಿಂದ ।
ಬಗ್ಗದೊಸಲುಡಿಯನೀಂ ಬೆಸಸೆಂದು ಬಿದಿನುಡಿಯೆ ಪರಮೇಶನಿಂತೆಂದನು ॥ (36)
ಧಾರುಣಿಯೊಳಗಖಿಳಪ್ರಾಣಿಗಳಗಾಯಾಸ ।
ತೋರದಂದದ ಮುಕ್ತಿಯಂ ಕೊಡುವುದೆಂದು ಬಂ ।
ದಾರಾಧನಂಗೈವರೀ ಮುನೀಶ್ವರರಿದಕುಪಾಯಮೇನೊಂದು ಮನಕೆ ॥
ತೋರದಿದೆ ಚಿತ್ತಚಿಂತಾಂಬುರಾಶಿಯನೊಮ್ಮೆ ।
ಪಾರಮಂ ಕಾಣಲಳವಲ್ಲದಿದೆಯದರಿಂದ ।
ಸಾರಸಾಸನ ನಿನ್ನಬರವು ಸಂತಸಮಾಗಿ ಬೆಳಗಿತೆನಲಿಂತೆಂದನು ॥ (37)
ಭೂಸುರರು ಬೆಸಗೊಂಡ ಪ್ರಶ್ನೆ ದುರ್ಘಟಮಿದನಿ ।
ರಾಸಗೈಯಲ್ಕೂಡದೀಯಲ್ದುರಾಸದಸ ।
ಭಾಸದರು ಕೃಪೆಯೊಂದೆ ಮುಖ್ಯ ಜೀವನ ಮೆನಲ್ಕಾರಾಧನಂ ಗೈವರು ॥
ಲೇಸೆನಿಪುಪಾಯ ಮುಂದೋರದಾದರು ದಯಾ ।
ರಾಸಿಯು ಮಹಾಮಂತ್ರಮಿಲ್ಲದಖಿಳ ಪ್ರಾಣಿ ।
ರಾಸಿಗಳಗೊದಗದೈಸಲಿ ಮೋಕ್ಷಮಿದನಾನು ಪೂರ್ವದಲಿ ಕ್ರೂರತಪದಿ ॥ (38)
ಪಲಕಾಲಮತಿಕ್ರೂರ ಮಾದ ತಪದಿಂ ಮೆಚ್ಚಿ ।
ಸಲುಕಷ್ಟ ಬಡಲೊಂದುದಿನ ಕೃಪಾಸಿಂಧು ಬಂ ।
ದೊಲಿದು ನಿಜಮಂತ್ರ ರಾಜಮನೊರೆಯಲಾನದಂ ಭೂಸುರರ್ಗೊರೆದೆನಯದಿ ॥
ಸುಲಭದಿಂದಾ ಮಹಾಮಂತ್ರಂ ಷಡಕ್ಷರಂ ।
ಲಲನಾದಿಗಳಿಗನಾಯಾಸ ಮೋಕ್ಷವನಿತ್ತು ।
ದಲಘು ಮತಿ ರಾಮಮಂತ್ರವನುಳಿದುಪಾಯಮಿದ ಕೇನೊಂದು ತೋರದೆನಗೆ ॥ (39)

ಸಕಲೋಪಕಾರಮೀರಾಮಮಂತ್ರಮಿದೊಂದು ।
ಯುಕುತಿಯಿದೆ ಮತ್ತೊಂದುಪಾಯಾಂತರಗಳೇಂ ।
ಪ್ರಕಟಿಸವೆನಲ್ಕೆ ಹರ ಸಂತೋಷಗೊಳುತೊಡನೆ ಬೊಮ್ಮನೊಡನಿಂತೆಂದನು ॥
ಸಕಲಾಗಮಜ್ಞ ಮೋಕ್ಷೋಪಾಯವಿದ್ಯಮಂ ।
ರಕುತಿಯಿಂದೊರೆಯುಲಿದರಿಂದಖಿಲ ಪ್ರಾಣಿಗಳ ।
ಸುಕರಗೈದಪೆನೆನಲ್ ಪೊಂಬೊಡೆಯು ಸಂತಸದಿ ಪೇಳಲೆಳಸಿದನು ಮನದಿ॥ (40)
ಸುರತರಂಗಿಣಿಯೆಡೆಯು ಸೂರ್ಯೋಪರಾಗದಲಿ ।
ವರಮಂತ್ರರಾಜಂ ಷಡಕ್ಷರವ ಪ್ರೀತಿಯಿಂ ।
ಹರನ ಕರ್ಣದೊಳೊರೆದು ಸತ್ಕಾರಮಂ ಕೊಂಡು ಸರಸಿಜಾಸನ ಗಮಿಸಲು ॥
ಪರಮಭಕ್ತಿಯೊಳು ಮನ್ವಂತರ ಸಹಸ್ರದೊಳ್ ।
ನಿರುತ ಜಪಹೋಮಾರ್ಚನಾದಿಗಳಲುಪಚರಿಸೆ ।
ಕರುಣದಿಂ ಶ್ರೀರಾಮ ಮುಂಗಡೆಯೆ ಕಂಗೊಳಸದಂ ಮಹಾದೇವನಿಂಗೆ ॥ (41)
ತೇಜೋಮಯಾನಂದವಿಗ್ರಹವ ನೋಡುತ ಸ
ಮಾಜಸಹಿತೀಶ್ವರಂ ಮಣಿಯೆ ಕರದಿಂದೆತ್ತಿ ।
ರಾಜಶೇಖರ ಬೇಡಿದಿಷ್ಟಮನ್ನೊಲಿದೀವೆಯಾಚನಂಗೈವುದೆನಲು ॥
ಆಜಗತ್ಪತಿಗೆರಗಿ ದೇವತಾಪಸವಿಪ್ರ ।
ರಾಜಿಗಂ ನಿಜಪದವನಿತ್ತುಪ್ರಿಯು ಗೈವೇಳ್ಕು ।
ಮಿಜಗತಿಯೊಳಗೆಂದು ಹರಬಿನ್ನಪಂಗೈಯಲಂಗೀಕರಿಸಲಾಕ್ಷಣ ॥ (42)
ಸೋಮಶೇಖರನಿಂದಲಾಮುನಿಗಳುಂ ಪರಮ ।
ಧಾಮದೊಳ್ ಬೆರೆಯಲಾಕ್ಷಣದಿ ಹರನಂನೋಡಿ ।
ಸೋಮ ಮನದಿಷ್ಟ ಮೇನುಂಟದಂಬೇಡಿದುದನೀವೆನೆಂದೊರೆಯೆ ಮುದದಿ ॥
ಸ್ವಾಮಿ ಭವದೀಯ ಸನ್ಮೂರ್ತಿಯುಂ ನಿಟ್ಟಿಸುವ ।
ಪ್ರೇಮವೊಂದಲ್ಲದನ್ಯತ್ರ ಯಾಚಿಪಕಾರ್ಯ ।
ನೇಮಮಿನಿತಿಲ್ಲನೀ ನೊಲಿದು ಕೃಪೆಯಿಂದಾವುದಿತ್ತಡದ ಪತಿಕರಿಪೆನು ॥ (43)
ಆದಡಾಲಿಸು ದೇವದೇವೇಶ ಕೃಮಿಕೀಟ ।
ಕಾದಿದೇಹಿಗಳಲ್ಲಿ ಮೂರ್ತಿಯುಂ ಬಿಡೆ ನಿರಾ ।
ಸೇದ ಕೈವಲ್ಯ ಸಂಭವಿಸಲಿದು ರವಿಶಶಿಗಳಿರ್ಪನ್ನ ತಪ್ಪದೆನುತ ॥
ಮೋದದಿಂ ವರವಿತ್ತು ಮಗುಳ್ ಪೇಳದ ಹರನೆ ।
ಸಾದರದೊಳೀ ಮಹಾಮಂತ್ರವನು ಬಿಡದೆನೀ ।
ಬೋಧಿಸು ಮುಮುಕ್ಷುಗಳ್ ಬಲಗಿವಿಯಲದರಿಂದ ಮುಕ್ತರಪ್ಪರು ನಿಮಿಷದಿ ॥ (44)
ಅನಿಮಿಷಸುಸೇವ್ಯಮಾದೀಕುರುಕ್ಷೇತ್ರದಲಿ ॥
ಬಿನದಮೆನಲಾನಿರ್ಪನು ಫಲಾದಿ ಪ್ರತಿಮೆಗಳ ।
ಸನಿಹದೊಳಗಾರಾದರೆನ್ನ ಪೂಜಿಸೆ ಭಕ್ತಿಯಿಂದವರ ಪಾಪಂಗಳ ॥
ಕೊನೆಗಾಣಿಸುವೆ ನಿಲ್ಲಿತನುವ ಕಳದರ್ಪುನ ।
ರ್ಜನನ ವಿರಹಿತಮಾದ ಪದವಿತ್ತು ರಕ್ಷಿಸುವೆ ।
ನೆನುತಭಯಮನ್ನಿತ್ತನಾ ಮಹಾಸಭೆಯುಜನವರಿತು ಸಂತಸಗೊಂಬೊಲು ॥ (45)

ಚತುರಮುಖನಿಂದಾಗೆ ನಿನ್ನಿಂದಲಾದರತಿ ।
ಹಿತ್ರಮೆನಿಪ ತಾರಕಸುಮಂತ್ರವನಿತ್ತವಸು ।
ಮತಿಯೊಳಿರಿದವನಾವ ದೇಹಮುಳ್ಳನಿತುದಿನ ನಿಖಿಳಭೋಗಗಳನುಂಡು ॥
ಅತಿಶಯದ ಕೈವಲ್ಯ ಪದವನಾಳುವನೆಂದು ।
ಯತಿನಿವಹ ಸಂತಸಂ ಗೊಳುವಂತೆ ಪೇಳಸ ।
ಮ್ಮತಿಗೊಳಸುತಾಕ್ಷಣ ತಿರೋಧಾನನಾದ ಶ್ರೀರಾಮಚಂದ್ರಮನು ಬಳಕ ॥ (46)
ಅಂದಿನಿಂದಖಿಲಮುನಿಸಂದೋಹಮೊಡಗೂಡಿ ।
ಮಂದಿರಂಗೈದಿಂದುಶೇಖರಂ ಪ್ರಮಥಗಣ ।
ವೃಂದಾರಕಾಧಿಗಳನೊಡಗೊಂಡು ಕ್ಷಣಮಾತ್ರಮಗಲದಂತಿರ್ಪನಿಲ್ಲಿ ॥
ಚಂದಚಂದದಿ ಹರಿಹರಕ್ಷೇತ್ರ ಪೆಸರಾಂತ ।
ಮಂದಿಗಳರ್ಪವಗಣಿತಧರಾವಳಿಯದೊಳ್ ।
ಒಂದಾದಡೀ ಶಿವಕ್ಷೇತ್ರ ಸಮನೆನಿಸದೈ ತಿಳಪುದ ವಿಮುಕ್ತಮೆನುತ ॥ (47)
ಹರ ತಪೋನುಷ್ಠಾನದಿಂದಲಾರ್ಚನೆ ಗೈದ ।
ಪರಮಪುಣ್ಯಕ್ಷೇತ್ರವತಿ ಪವಿತ್ರಂ ಪಾಪ ।
ಹರ ಶರೀರತ್ಯಾಗಮಾತ್ರದಿಂ ಕ್ರಿಮಿಕೀಟ ಮನುಜಾದಿಗಳ್ಗೆ ಮುಕ್ತಿ ॥
ಕರಗತ ಪದಾರ್ಥಮಿನಿತಾಯಾಸವಿಲ್ಲದಂ ।
ತೊರೆವ ತಾರಕ ಮಂತ್ರಮಹಿಮೆಯಂ ತಿಳಮಬುಧ ।
ನೆರವಿಯವಿಮುಕ್ತ ಮಂದಿರವೆನುತ ತಿಳದಗಲದನುದಿನದೊಳರ್ಪರಸಘ ॥ (48)
ಈ ಮಹಾ ಕ್ಷೇತ್ರದುರು ಮಹಿಮೆಯಂ ವರ್ಣಿಸಲು ।
ಸೋಮಶೇಖರನಲ್ಲದುಳದರಿಂದಳವಹುದೆ ।
ಶ್ರೀ ಮಹಾದೇವಗತಿಪ್ರೀತಿಯಾನಂದ ನೆಲೆಯಾದುದು ಭವಕ್ಕೃಪೆಯೊಳು ॥
ರಾಮಮಂಗಳನಾಮ ಮುಮ್ಮೂರ್ತಿಗಳಧಾಮ ।
ನೀಮನುಜವೇಷದಿಂದೀ ಕಥೆಯ ತಿಳಯದಂ ।
ತೀಮಹೀಜನರಿಗಚ್ಚರಿಯ ತೋರುವ ಲೋಕಹಿತಕೆಂದು ಕರುಣದಿಂದೆ ॥ (49)
ಎಂದು ವ್ಯೈತಾಪ್ರವರುಣ ತಿಳುಹಲಮರೇಂದ್ರಾದಿ ।
ವೃಂದಮುನಿಜನರೆಲ್ಲ ಜಯಜಯನಿನಾದದಿಂ ।
ಪೊಂದಿಪೊಗಳುತ್ತಲಿರಲ ವರವರ ಮನದಿಷ್ಟಗಳನಿತ್ತು ಕರುಣದಿಂದ ॥
ಇಂದುಧರ ನಾಲಯವನುಳದು ಸುಪ್ರೇಮದಿಂ ।
ಬಂದು ಬಂಧುಗಳೆಲ್ಲರಂ ಕಂಡು ಸುಖದಿಂದ ।
ಲಿಂದೀವರಾಕ್ಷನೆಸೆದಂ ಚಿತ್ರಕೂಟದೊಳು ಸಕಲರಾನಂದ ಗೊಳಲು ॥ (50)
ಆದುದುತ್ಸವವಖಿಲ ಜನರಿಂಗೆ ಖಗಗಳಗೆ ।
ಮೋದಸಂಭವಮಾಯ್ತು ಪೋದಮಳ ಬರೆಜಗತಿ ।
ಗಾದ ಹರುಷೋತ್ಸುಕತೆಯುಪ್ಪಂತೆ ನಲಿವುತಿರಲತಿಶಯಪ್ರೇಮದಿಂದ ॥
ಶ್ರೀದಯಾನಿಧಿ ರಾಮನವರಿಗವರಂದದಿಂ ।
ನಾದರಪ್ರಿಯಗೈವುತಿರೆ ಭರತ ಪ್ರೇಮದಿಂ ।
ಪಾದಪದ್ಮಂಗಳಂಗೆರಗಿ ಬಿನ್ನಪಗೈದ ಮುಂತಪ್ಪ ಕಜ್ಜಗಳನು ॥ (51)

ಜನನಾಥನಿಲ್ಲದೆ ಮದೀಯ ರಾಷ್ಟ್ರಂಮೇಘ ।
ದನುವ ಸಂಪ್ರಾಪ್ತಿಸುವ ಚಾತಕಗಳಂತೆ ಪದ ।
ವನಜಂಗಳಂ ಬಯಸಿಕಾರ್ಯೈಸು ಕೆಹರಖಿಲ ಲೋಕಸಂತುಷ್ಟಿಗೊಳ್ಳಲು ॥
ಮನಮೊಲಿದು ರಾಮಪುರ ನಾಥ ನೀನರಸೆನಿಸಿ ।
ವಿನಯದಿಂ ಮುಲ್ಲೋಕವಮಾನಂದ ಸಾಮ್ರಾಜ್ಯ ।
ದನುಭವಂ ಗೈದಂತೆ ಕೃಪೆಗೈಯುವೇಳ್ಕೆನುತ ಭರತಬಿನ್ನಪ ಗೈದನು ॥ (52)

[ಸಂಧಿ 32 ಪದ 1422.]

## ಮೂವತ್ತ ಮೂರನೆಯ ಸಂಧಿ

ಸೂಚನೆ ॥ ಸಕಲ ಜನರಾನಂದಗೊಳುವಂತೆ ಸದ್ಧರ್ಮ ।
ಯುಕುತಿಯಿಂ ಭರತನನುಮತಿಗೈದು ನೆರೆದಬುಧ ।
ನಿಕರ ಸಂತಸಗೊಳುವ್ರೊಲೆಸಗಿದಂ ರಘುನಾಥ ಜಾತಾನುರಾಗದಿಂದ ॥

ಹಿಮಗಿರಿತನೂಜೆಕೇಳ್ ಗುರುವತ್ಸಲತೆವೆರದು ।
ಕ್ರಮದಿಂದ ಪ್ರಾರ್ಥಿಸುವ ಭರತನಂನೋಡಿ ಸಂ ।
ಭ್ರಮದಿಂದಲಿಂತೆಂದ ತಾತದಯದಿಂದಿತ್ತ ರಾಜ್ಯಸಂಪದವನುಳದು ॥
ಶಮಧನರ ರೀತಿಯಾಂಪಿಡಿದು ಕಾನನಕೆ ಬಂ ।
ದಮಲಮತಿಗೇಸೆಂಬೆ ನಗರಯೊಳ್ ಧೊರೆಯೆನಿಸಿ ।
ಕ್ರಮದಿಂದಲಖಿಳರಂ ಪಾಲಿಸಲ್ಕೈದೆನಲ್ ಭರತ ಮಗುಳಂತೆಂದನು ॥ (1)

ಉತ್ತಮಾಂಗವನುಳದು ಮೊಳಕಾಲಗಂಕಾಶೆ ।
ಯಿತ್ತಪರದಾರರಸ ಮುಲ್ಲೋಕನಾಯಕಂ ।
ಉತ್ತಮಪ್ರಿಯ ನೀನೆಧೊರೆಯೆನಿಸುತಖಿಲರಂ ಪೊರೆದು ಕೃಪೆವೆರೆದು ಸಲಹು ॥
ಮಿತ್ತುಪಿನತೆರದಿ ಮಸ್ಮಾತೆ ವಚನದೊಳುಂ ನೃ ।
ಪೋತ್ತಮನ ಪೋಗಾಡಿ ದುರ್ಯಶಕೆಮೂರ್ತಿಯಂ ।
ನಿತ್ತಳಾರರಿಯರಿದ ಮನದೊಳೆಣಿಸದೆ ಪ್ರಿಯದಿಪತಿಕರಿಪ್ಪುದೆನ್ನನುಡಿಯ ॥ (2)

ಈ ಪ್ರಕೃತಿಜನರ ಮತ್ತೀಪ್ರಜಾಹಿತಕರರ ।
ತಾಪಹತ ಮಾತೆಯರ ತಪಿಸುತಿಹ ಭೂಸುರರ ।
ಕೋಪಿಸುವ ಚರರ ಹಿತಕರವೆನಿಸುತಿಹ ನರರನಾನಂದಗೊಳಿಸಲೆಂದು ॥
ಶ್ರೀಪತಿಯೊಲರಸಾಗು ಸಾಕೇತನಗರ ಸಂ ।
ತಾಪಹರವೆನಿಸು ಭಕ್ತ ಶಿಷ್ಯದಾಸನೆ ।
ನ್ನೋಪದಯದಿಂ ನೋಳ್ಪುದೆನುತಾರ್ತಿಯಿಂ ಪಿಡಿದ ಪದಗಳಂ ರಘುನಾಥನ ॥ (3)

ಎನುತಾರ್ತತೆಯ ವೆರಸಿ ಚರಣದೊಳ್ತಲೆಯಿರಿಸಿ ।
ಘನತರದೊಳಳಲುತಿಹ ಭರತನಂ ನೋಡಿರಘು ।
ಜನಪ ಸೆಳೆದಪ್ಪಿ ತೊಡೆಯೊಳಗಿಟ್ಟು ಕಂಬನಿಯನೊರಸಿ ಗಲ್ಲವ ನಲುಗುತ ॥
ತನಯ ಸಚ್ಚರಿತ ಸತ್ಕುಲ ಜಾತ ತೇಜಸ್ವಿ ।
ವಿನಯಪರನತಿಶೂರ ಧರ್ಮಶೀಲಂ ರಾಜ್ಯ ।
ವನುಬಯಸಿ ಪಾತಕವ ಬೆರಸುವರೆ ನಾಥಜನಪಂಥಾನ ದೂರನೆನಿಸಿ । (4)

ಎನಿತಾದೊಡಂ ನಿನ್ನೊಳವಗುಣವ ಕುರುಪಿಡಲ್ ।
ಜನಿಸುವದೆ ಪರದೇವತಾರೂಪವಮಾಂತಿರ್ಪ ।
ಜನನಿಯುಂ ಧಿಕ್ಕರಿಸಬಹುದೆ ಪೆತ್ತಾತನಂ ಕಂಡಂತೆ ಕಾಣ್ಬುದೆನುತ ॥
ಮನುಮುನಿಗಳೊರೆದಪರು ಮಾತಾಪಿತೃಗಳೆಮಗೆ ।
ಸನುಮಾನಗೈದೊಡಂ ಮಗುಳೆ ನಿಂದಿಸಿದೊಡಂ ।
ಮನವೊಡಂಬಟ್ಟಾಚರಿಪುದೆ ಧರ್ಮಮಲ್ಲದದ ಬಿಡಲೊಪ್ಪುವರೆ ಸುಜನರು ॥ (5)
ಸರಿಧೊರೆಗಳಾಪ್ತರುಗಳಮಿತ ಪ್ರಜೆಪರಿವಾರ ।
ನೆರದ ವಿದ್ವಜ್ಜನರ ಮುಂಗಡೆಯೊಳೆನಗೊರದ ।
ಭರತಗೀರಾಜ್ಯಮಂ ಕೊಟ್ಟಿರ್ಪ ನೀಂ ಪೋಗಿ ಪದಿನಾಲ್ಕುವರುಷ ಬನದಿ ॥
ಚರಿಸವೇಳ್ಕೆಂದು ಜನನಿಯು ಜನಕರೀರ್ವರುಂ ।
ಹರುಷದಿಂ ನೇಮಿಸಿದ ಗುರುವಾಕ್ಯಮಂ ಮೀರಿ ।
ಶರಿರವಿದಿದೇನುಫಲಮನೃತಮ ಸ್ನಾಳೆಕುಲಕೆಡುಗು ಜೀವನ ನಿಷ್ಫಲ ॥ (6)
ತಂದೆತಾಯ್ಗಳು ದಯದಿ ಸಕಲ ಬಂಧುಗಳೆಡೆಯು ।
ಚಂದದಿ ವಿಭಾಗಗೈದಿತ್ತಾತೆಗಳ ನಾವು ।
ಕುಂದದನುಭವಗೈದು ಪಿತೃವಾಕ್ಯ ಸತ್ಯಮೆಂದೆನಿಸಿ ಧರೆಯೊಳು ಕೀರ್ತಿಯು ॥
ಪೊಂದುವದೆಲೇಸು ತಿಳಿಯದೆ ಪೇಳ್ವೆಂದಲ್ಲಿ ।
ಕುಂದೆಣಿಸಿ ಜರೆವುದನ್ಯಾಯು ಮೂರ್ತಿಯು ನವರು ।
ಬಂಧುರಪ್ರೇಮದಿಂ ಪೊರೆಯುಲಾರ್ಗೀಯುಲ್ಲ ಸರ್ವಸ್ವತಂತ್ರರಲ್ತೆ ॥ (7)
ಸತಿಸುತರದಾಸಭ್ರಾತ್ರಾದಿಗಳಗೊರವೆಡೆಯು ।
ಪತಿ ನಿಜಮನೋರಥಂ ಬಂದೊಲಾಜ್ಞಾಪಿಸುವ ।
ಹಿತಮೆಂದರಿಯುವೇಳ್ಕುಮಲ್ಲದದ ದೋಷಮೆಂದರಿಯುಲಡಸುವದು ದೋಷಂ ॥
ಮತಿವಂತಕೇಳ್ ಬೊಪ್ಪರಾಜ್ಯಬಸಗಳ ಪಂಚೆ ।
ಮಿತಿಗೈದು ಸಗ್ಗಕೈದಿದಪದಂ ಮನ್ನಿಸದೆ ।
ಕ್ಷಿತಿಯುರಸುತನ ಕಳಸಿ ಪಾತಕವ ಬಯಸುವದು ರವಿಕುಲದ ಜಸಕೆಡುವದು ॥ (8)
ತಾತನೇಮಿಸಿದಂತೆ ಧರೆಯುಪಾಲಿಸು ಬುಧ ।
ವ್ರಾತಮೆಚ್ಚ ಪ್ರೊಲಾನು ಪದಿನಾಲ್ಕುವರುಷಗಳ ।
ನೀತಗೈದೈತಪ್ಪೆ ವಾಜ್ಮ್ಮತುರದೊಳಹುದು ದೆವಸಗಳ್ ನಿಮಿಷದಂತೆ ॥
ತಾತ ಬಳಲದೆಬರಿದೆ ನಗುಗೈದೊಂದೊರೆದ ।
ಮಾತಕೇಳ್ದಾಕ್ಷಣದಿ ಮಗುಳೆ ಶೋಕಾತುರದಿ ।
ಭ್ರಾತ್ರಾಂಘ್ರಿಕಮಲಗಳ ಪಿಡಿದು ಭರತಂ ನುಡಿದ ನಾಸಭಾಸದರೆಡೆಯೊಳು ॥ (9)
ಜನನಿಜನಕರನುಡಿಯು ಪತಿಕರಿಸಿನಡೆವುದೇ ।
ಜನಮನೋಹರ ಧರ್ಮಮಾದೊಡಪ್ರಿಯುದಿಂದ ।
ಲೆನಗಿತ್ತ ಭಾಗಮಂ ದಾನಧರ್ಮಂಗೈಯಲಾರ್ಗಿತ್ತರುಂ ಸಲುವುದು ॥
ಜನಸಮ್ಮತಂ ಸತ್ಯಮಾತ ಧರೆಯು ನಿನ್ನಪದೆ ।
ವನಜಕರ್ಪಿತಗೈವೆನಂಗೀಕರಿಸಿ ಪ್ರಕೃತಿ ।
ಜನರ ಸಂತಸಗೊಳಸು ಶರಣರಲಿ ದಯುವೆರಸು ಶಾಶ್ವತದಜಸವಗಳಸು ॥ (10)

ಸಗರಂದಿಳಿಪ ರಘುನಾಥನೀರಥನಾಳ್ದ ।
ನಗರಿಗಧಿಪತಿ ಯೆನಿಸಲವರಿಗೈವಡಿ ನೀನೆ ।
ಮಿಗೆ ಸತ್ವಸಂಪನ್ನ ನಿನ್ನುಳಿದು ಮತ್ತಾವ ನಗರಿಗಧಿಪತಿಯೆನಿಪನು ॥
ಬಗೆದಪ ಪ್ರಭುತ್ವಮಂ ಹಾಸಕರವೆಂದೆನಿತು ।
ಖಗರಾಜಗತಿಗೆ ಖಗತತಿ ಜಾತಿಗಾಂಧರ್ವ ।
ದೊಗುಮಿಗೆಯುಗಮನಮಂ ರಾಸಭಂಬಯಸಿದಂತಪ್ಪುದಿಮ ತಪ್ಪದರಸ ॥ (11)

ಬಾನೆಡೆಯೊಳಹ ಶಾಖೆಯಗ್ರದೊಳಹಫಲಂ ।
ತಾನುಕೈಸಾರುವದೆ ಖರ್ವಮಾನಸಗೆಂತು ।
ಭಾನುಕುಲದರಸುಗಳ ಪಟ್ಟವಣೆಯಧಿಕಾರ ನಿನ್ನುಳಿದು ಪೆರರಿಗಹುದೆ ॥
ಜಾನಪದ ಜನವಿಯನ್ಲಿವಂತೆ ನುಡಿಯು ಸ ।
ನ್ಮಾನಿಸುತಲರಸೆನಿಸಿ ಶರಣನಂ ಪೊರೆಯೆನುತ ।
ದೀನತೆಯೊಳೊರೆವ ಭರತನ ನೋಟ ಸಂತೈಸುತಾಗಮಗುಳಂತೆಂದನು ॥ (12)

ಜೀವರುಗಳಾಸೆಯುಂ ಸುಖ ಪರಂಪರೆಯಪ್ಪ ।
ತಾವನರಸುವರೆಂದಿಗಿಚ್ಛೈಸುತಿರಸಂ ।
ಭಾವನಾಮಾತ್ರ ಕಷ್ಟವನೆನೆಯರಿದು ಸಿದ್ಧವಪವಡಂ ಸ್ಮರಿಸಿದಂತೆ ॥
ಅವುದೊದಗದು ಪರಾಧೀನ ಫಲ ನಿಷ್ಫಲಗ ।
ಳೀವಿಧಗಳರಿಯದಲೆ ಬರಿದೆಯತ್ನಂಗೈವ ।
ಕೋವಿದರಿಗೇವೇಳ್ವೆ ಮಾಯಾವಿಲಾಸಮಿನ್ನೆಂತೊ ತಿಳಿವುದು ಪುತ್ರಕ ॥ (13)

ಅತಿಶಯಶುಭವಾಸಿಗೆನುತ ಯತ್ನಂಗೈಯೆ ।
ವಿತತ ಕಷ್ಟಂದೊರೆಗು ಕಷ್ಟಕಾರ್ಯವನೆಸಗೆ ।
ಹಿತಕರದ ಸೌಖ್ಯಕೈಸಾರಿಬಹಾದವಂದೆ ಸುಫಲ ದುಷ್ಫಲಗಳಿರಡು ॥
ರತಿಪತೀಪಿತಸಿತ್ರಡಲ್ಲದೀ ಮಾನಸರ ।
ಯಾತನದಿಂದೇನಹುದು ನರಗುರಿಗಳಂತೆಸಂ ।
ಗತರೆನಿಸಿ ತೊಳಲುವರು ಪುರುಳಿಲ್ಲದಾಸೆಯಿಂದೇನೆಂಬೆನಚ್ಚರಿಯನು ॥ (14)

ಅಂಬರಪಟಚ್ಚರಗಳಾದೊಡಂ ಮುಗುಳೊಂದ ।
ಕೊಂಬಂತೆ ಮೂರ್ತಿಗಳ ಕೊಳುತ ಸಂಭ್ರಮಗೊಳುತ ।
ತಿಂಬುದೊರಗುವದೆ ಪುರುಷಾರ್ಥತಾನೀಶ್ವರಂಭೋಗಿಯುಸುಸಿದ್ಧಧನಿಕ ॥
ಎಂಬ ಹಂಕೃತಿದಳೆದು ನಿಧನ ವಾರ್ತೆಯ ಮರೆದು ।
ಜೆಂಬುಲೋಹವಬೆರದ ತೆರದೋಳೀನೊಂದಿಯ ।
ದಿಂಬಾದಥಂಭದಿಂ ಜೆರಿಪಡಿಂಭಕರಿಂಗದೇನುಸುರಲ್ಬಪುರ್ದು ॥ (15)

ದಿನಕರೋದಯಮಾಯ್ತು ಮಜ್ಜನಂ ಭೋಜನಗ ।
ಳನುಗೈವ ಸಂತಸಂ ಭಾನುವಸ್ತಮಿಸಿದಂ ।
ವನಿತಾದಿಭೋಗ ಪರಿಕರಗಳರಸುವಹರ್ಷದೊಳಗಿರ್ಪ ಸಾನಂದದಿ ॥
ತನಗೆ ಪೋಷಾಯುಷ್ಯದನುವ ನೆನೆಯಂ ಶಮನ ।
ಘನತೆಯಂ ಕೇಳ್ದರಿಯ ನರೆಜರೆಗಳಡಸುತ್ತ ।
ತನುವ ಜೀರ್ಣಿಸುವದಂ ತಿಳಿಯ ಮಾಯಾಮಹಿಮೆಯೆಂತಿಹುದೊ ಪರಮಾತ್ಮನ ॥
[(16)

ಬಂದಪುದ್ಯೋಗಾದಿ ದೀವಳಿಗೆ ಸಂಕ್ರಮಣಂಗ ।
ಳೆಂದು ಪಬ್ಬವನೆಸಗಿ ಮಿಂದುಂಡು ಸುಖಿಯುಪ್ಪೆ ।
ನೆಂದು ಬಯಸುವನಲ್ಲದಾಯುಷ್ಯಪೋದಪುದೆನುತ್ತ ತಿಳಿಯಂ ಮಾನವಂ ॥
ಸಂಧಿಸಿದಘನ ಪೋಗುವನ್ನೆಗಂ ಮಿತ್ರ್ರಡಸು ।
ವಂದು ಪರಿಯಂತ್ರ ಜೀವನ ವಿಯೋಗಂಗಳುಂ ।
ಬಂದೊದಗುವನಕ ಸತಿಸುತ ಬಂಧು ಸಂಗಮಗಳೆಂದರಿಯನೇಂಪೇಳ್ವುದು ॥ (17)

ಶರನಿಧಿಯೊಳೊಡವೆರೆದ ನೀರು ಪಿಂದಿರುಗ ದೊಲು ।
ತರುಣತ್ತೆಯು ಜವ್ವನಂ ಪೋಗಿಮಗುಳ್ವುತಹವೆ ।
ನೆರದು ಪಾನೀಯಶಾಲೆಯೊಳು ನೀರಡಿಕೆಯಂ ಕಳದ ಜನರೆಲ್ಲ ತಿರುಗಿ ॥
ಬೆರೆದಪರೆ ಸತಿಸುತಾದಿಗಳೆಲ್ಲ ನಿಜಕರ್ಮ ।
ದಿರವನನುಭವಿಸಿ ಪೋಗಳುವರಾರಿಗಾರಿಲ್ಲ ।
ನರರೀಯವಸ್ಥೆಯಂ ತಿಳದು ಹಿತಕರಮೆಂದು ತೊಳಲುವರುಮರುಕ ವಿಡಿದು॥ (18)

ಮಿತ್ರುಬೆಂಬಡದೆ ಬೆನ್ನೊತ್ತಿಲಿಹುದೆಂದರಿಯು ।
ದುತ್ತಮಂ ಪೋದನೆಂದೆನುತ ಬೆಣನಿಟ್ಟಳುವ ।
ರುತ್ತರೋತ್ತರ ಬಪ್ಪವಸ್ಥೆಯಂ ಮರೆದರಿಯದಳಲುತಿಹ ನರಪಶುಗಳ ॥
ವೊತ್ತದೊಳ್ಬರದು ನೀನೇತಕಳಲುವೆ ಜನಪ ।
ನುತ್ತಮಚರಿತ್ರಿಯಂದಾರ್ಜಸಿದ ಫಲಪಮಲ ।
ಲುತ್ತಮೋತ್ತಮಗತಿಯ ಸಾರಿದಂ ನೆನೆನೆನೆದು ಬಳಲಲೇನಿಹುದುತ್ತನಯ ॥ (19)

ತಾತ ತಂದೆಯ ತಂದೆ ಕುಲ ಪರಂಪರೆಯ ಸಂ ।
ಜಾತನೃಪತಿಗಳೆಲ್ಲ ತಿಳದಖಿಳತತ್ವಮಂ ।
ನೀತನುವನಿತ್ಯಮೆನುತರಿದು ಹಯಮೇಧಾದಿಗಳನೆಸಗಿ ಸುರರದ್ವಿಜರ ॥
ಪ್ರೀತಿ ಗೊಳಸೀಲೋಕಮಂ ಪೊರೆದು ಗಳಸಿ ಪ್ರ ।
ಖ್ಯಾತಿಯಂ ದೀರ್ಘಯುವಂ ಪಡೆದು ಸತ್ಸುಖ ।
ವ್ರಾತಂಗಳನುಭವಂಗೈದು ಕ್ರಮದಿಂದೈದಿ ಪಡೆದರುತ್ತಮಗತಿಗಳ ॥ (20)

ಕುಲವೃತ್ತಮಂ ತಿಳದು ಕುಶಲಧರ್ಮವಪಳದು ।
ನೆಲದಾಸೆಯಂತಳೆದು ನೇಮಂಗಳಂಕಳೆದು ।
ಪಲುಬಲೇಂಫಲ ಗುರುಮತಾನುಸರಣೆಯೆ ಸಫಲಮೆಂದರಿಯ ಪಿರಿಯರಿಂದ ।
ಕಲಿತಮಾದೀರಾಜ್ಯಸುಖದಿಂ ಭವದ್ಭೋಜ್ಯ ।
ನೆಲೆಯೆಂದು ಪಿತೃವಚನದಿರವ ಮನಕಂತಂದು ।
ಲಲನಾಸಮಾಜಸಹಗಮಿಸಯೋಧ್ಯಾನಗರಿಗಹುದುಸುಕ್ಷೇಮಂಕರ ॥ (21)

ಮೂರುದಿವಸದಬಾಳ್ಕೆಯೆಂದರಿತು ಸತ್ಯಮಂ ।
ಮೀರಿ ದೊರೆಗೆಬಂದು ಬಾಳ್ದರೇಂಫಲ ಸದಾ ।
ಚಾರರತ ಪಿತೃ ಸತ್ಯಶೀಲಧರಣೀ ಪಾಲನಾಜ್ಞಾಪಿಸಿದ ಮಾಳ್ಕೆಯೊಳ್ ॥
ಧಾರುಣೀಪಾಲನಂಗೈವುತಿರು ವನದಿ ಸಂ ।
ಚಾರಗೈವುತ್ತಲಾನಿಜನೇಮ ತೀರ್ವನ್ನ ।
ಧೀರಶೋಕಸದೆ ಪಟ್ಟಣಕೈದು ಬೇಗನೆನಲಾಭರತನಿಂತೆಂದನು ॥ (22)

ಹಿಂದುಮುಂದರಿಯದವೆ ಹಿತವನಾತ್ಮಗೆಣಿಸದಲೆ ।
ಸುಂದರಿಯಮೋಹದಿಂದಿರುತ ವೃದ್ಧನೆಂದದಿಂ ।
ಕುಂದಣೆಸಗಿದ ಪಿತನಮತವ ನನುಸರಿಪುದಿದು ಬಲ್ಲವಿಕೆಗೊಪ್ಪಿಯಹುದು ॥
ಚಂದದಿಂದಖಿಲ ಶಾಸ್ತ್ರಾರ್ಥಗಳ ತಿಳದು ಚಿ ।
ದ್ವೃಂದದಾರಕನೆನಿಸಿ ಗುರುಕೃತಾಗಸವನೀ ।
ನಿಂದು ಪ್ರಕಟಿಸುವುದಿದು ಸಮ್ಮತವೆ ಜನಹಿತವೆ ತಿಳ ದಯಾಕಲ್ಪತರುವೆ ॥ (23)

ಪಿತ್ರಾಕೆಯುಮಿತ ದುಷ್ಕೃತ ಗೈದಳೆಂದು ಪಿಡಿ ।
ಪುತ್ರೀಳದುಜರಿವುದನ್ಯಾಯಮದರಿಂ ಜನಕ ।
ಸುತ್ರಾಮನೆನಿಸುತ್ತಿರಿವೆನೆಂಬೆನೇ ಚರಮದಲಿ ಮೋಹಾಬ್ಧಿಯಲ್ಲಿ ಮುಳುಗಿ ॥
ಮಿತ್ರಬಪ್ಪವಸರದೊಳಿಲ್ಲ ಜೀವರು ಮೋಹ ।
ದತ್ರಸಾರುವರೆಂಬ ಶ್ರುತಿಯುಮಾತ್ರಂ ಧರೆಗೆ ।
ಜಾತ್ರಾಯಗೈದು ತೋರಿದ ಬೇಳ್ವಿದೆರಡರೊಳಗಾವುದುತ್ತಮ ಮೆನುತಲಿ॥ (24)

ಶಾಪಂಗಳೆನಿಸಿರ್ದರೋರ್ವರರಿಯದ ತೆರದಿ ।
ಗೋಪನಂಗೈದು ಪರಿಕೃತಗೈದು ಸದ್ಗುಣಾ ।
ಖ್ಯಾಪನಂಗೈಯ್ಯಲೋಸುಗ ಬಯಸಿ ಪುತ್ರರಂ ಪಡೆದಪರೆಲ್ಲ ಪಿತೃಗಳು ।
ಕೋಪಿಸುತ ದೋಷಗಳನೆನದೆಲ್ಲರೊಳ್ಪೇಳ ।
ರಾಪಿಗಿಕ್ಕುವುದುಚಿತಮೆನಿಪುದೇ ತರಣಿಕುಲ ।
ದೀಪನೀನರಿಯದುದೆ ಬಾಲನಾನಿದನೊಮ್ಮೆ ಬಿನ್ನಪಂ ಗೈಯಲಹುದೆ ॥ (25)

"ನಡೆವರೆಡಹುವರೆಂಬ" ಗಾದೆ ದೋಷವನಂತ ।
ದೊಡನೆ ದೇವನಿಕಾಶ ನೀವಿರಲ್ಪುತ್ರೇಶ ।
ಕಡೆಗೊಳಸು ಬೊಪ್ಪನಿಂದಾದತಪ್ಪಂಪೋಮದೆಣಿಸಲೇಂ ಫಲಮಪ್ಪುದು ॥
ಸಡಗರವ ನೋಡಲ್ಕೆತಂದ ಮಾತೆಯರುಗಳ ।
ನಡಿಗಡಿಗೆ ತುತಿಗೈವ ಋತ್ವಿಜರ ಭೂಸುರರ ।
ನೊಡನೆ ಬಂದಿಹ ಜಾನಪದರನಗರೀಜನರ ಸಂತಸಂಗೊಳಸು ಜೀಯ ॥ (26)

ಕುಲಪರಂಪರೆಯರಸುಗಳ ರೀತಿಯುಂ ಪಿಡಿದು ।
ನೆಲದಾಣ್ಮನೆನಿಸಿ ಕಿರಿಯರನುಚಿತಸೇವೆಯೊಳು ।
ನಿಳಿಸಿ ಧರ್ಮಾರ್ಜರಣೆಯಿಂದ ಚಾತುರ್ವರ್ಣ್ಯಮಂ ಪೊರೆದು ಸುಕೃತವೆರೆದು ॥
ಜಲಜಾಪ್ತಗೋತ್ರವರ್ಧನೆಗೈದು ಕೀರ್ತಿಯಂ ।
ಜಲಧಿಮೇಖಲೆಗೆ ವಿಶದಿಮವಸ್ತ್ರಮಂಗೈದು ।
ನೆಲವಿಂದ ಸಕಲಭೋಗಗಳಂಬಡಿದು ಕ್ಷತ್ರಧರ್ಮ ಧರ್ಮಸ್ವರೂಪ ॥ (27)

ಮೊದಲು ದೊರೆತನವಿಡಿದು ಕದನಕರ್ಕಶನೆನಿಸಿ ।
ಸದೆದಹಿತ ಮಂಡಲವ ಸದಯದಿಂ ಮನ್ಯುಗಳ ।
ವಿಧಿತಪ್ಪದೆಸಗಿ ಷೋಡಶಮಹಾದಾನಗಳಮಾಡಿ ಭೂಸುರರತಣಿಸಿ ॥
ಉದಧಿಪರಿಯಂತಖಿಲ ರಾಜ್ಯಪಾಲನೆಗೈದು ।
ಮುದದಿಂದಖಿಲಾಗಮ ಶ್ರೇಷ್ಠಗಾರ್ಹಸ್ತ್ಯ ।
ಧುದಯಗೈವುದೆ ಕ್ಷತ್ರಧರ್ಮವಿಮೀಮರ್ಮಗಳ ನೀನರಿಯದಿಹುದೆ ಜೀಯ॥ (28)

ಅರಸುತನವೆಲ್ಲಿ ಕಾನನನಿವಾಸತೆಯೆಲ್ಲಿ ।
ಮೆರೆವ ಶರಚಾಪಧಾರಣೆಯೆಲ್ಲಿ ಜಟೆಗಳಂ ।
ಪೊರೆದಪುದದೆಲ್ಲಿ ಮೃದುತಲ್ಪಗಳನುಳಿದತುಲಸ್ಥಂಡಿಲದ ಶಯನಮೆಲ್ಲಿ ॥
ಪರಮ ಷಡ್ರುಚಿಯನ್ನಮೆಲ್ಲಿ ವನ್ಯಾಹಾರ ।
ವೆರದ ವಿಪ್ರಮಾಚಾರ ಕ್ಷತ್ರಧರ್ಮವಿದೂರ ।
ಹರಿಭಕುತಿ ಶತ್ರುನಿಗ್ರಹಧರ್ಮರಕ್ಷಣಂ ನೃಪತಿಗಳ ಶೀಲಮಲ್ತೆ ॥ (29)

ಮೊದಲು ಪಟ್ಟವನಾಂತು ಮಹಿತಧರ್ಮದಿನಿಂತು ।
ಸದಯಕುಲಮಂ ಪೊರೆದು ಸತ್ಪುತ್ರರೊಡವೆರದು ।
ಮುದದಿಂದ ನಿಖಿಲಕ್ರತುಯಾಗಂಗಳಂಮಾಡಿ ತನಯರಿಂಗಿತ್ತು ಪದವ ॥
ತುದಿಗೆ ಕಾನನಕೈದಿ ತಪವನಾಚರಿಪುದಿದು ।
ಮೊದಲಿಗೈತಂದ ವಿಕ್ರಮಕಾಮಬೇಳ್ಪುದೇ ।
ನೆಧಿಕ ಧರ್ಮಾಂತರಂಗಂ ಭವಚ್ಚಿತ್ತಮೇನರಿಯದುದೆ ಸಾಧುತಿಲಕ ॥ (30)

ಆನರಿಯದಂತೆನ್ನಜನನಿಗೈವಘವನಂ ।
ಸಾನುರಾಗದಮೋಹದಿಂದರಸಗೈದುದಂ ।
ಹೀನಗತಿಮಾಮಿಯು ದುರ್ಬೋಧೆಯತಿಬೋಧೆಯೆಂಬುದೊಂದೆಣಿಸದುಳಿದು ॥
ಈನಗರದಧಿನಾಥನೆನಿಸಿ ನೆನದೀಪ್ರಜೆಯು ।
ಸಾನಂದಗೊಳಿಸು ಮಾತೆಯರನು ಮಹೀಸುರರ ।
ಭಾನುಕುಲದರಸುಗಳಜಸಕೊಪ್ಪಮನ್ನಿತ್ತು ಬೆಳಗಿಪುದು ಪ್ರೀತಿವೆತ್ತು ॥ (31)

ಕನಕಲೋಷ್ಟಂಗಳಂ ಕಲಿತ ಸುಖದುಃಖಗಳ ।
ನೆನೆವೃತತಿನಿಂದೆಗಳನೆಗಳು ಮಹಿತಾಹಿತಗ ।
ಳನಿತನೊಂದೇಸಮದಿ ಕಾಣ್ಬಪರದೊಡವೆರದ ಸರ್ವಜ್ಞ ಚಿತ್ತತಾನು ॥
ಇನಿತ ವಿಜ್ಞಾಪಿಸುವದೇನುಂಟು ಮೋಹ ಮಂ ।
ಮನವೊಡಂಬಡುವದೇಂ ಮತ್ತಿದನುಸುರ್ವದೇಂ ।
ನಿನಗೆ ನೀನೇ ತಿಳದು ಪಾಲಿಪುದು ಕೃಪೆವೆರದು ಮರೆದವಗುಣಂಗಳರವ ॥ (32)

ಅವರೋಧದಂಗನಾ ಜನರವಮಾನಸಕೆನು ।
ತ್ತವರೋಧ ಜನಿಸದಂದದಲಿ ಸಂತಸವಿಂವು ।
ದವರೋಧಕರವಿರಾಗತೆಯಂ ನಿರೋಧಿಸುತಲಿಂದೆ ಮತ್ತೀ ಕೃಲದಿ ॥
ಅವನಿ ಯಧಿಪತಿಯೆನಿಪೊಲಭಿಷೇಕಮಂ ರಚಿಸ ।
ಲವಿರಳದ ಋತ್ವಿಗ್ಜನಂಗಳೊಡವೆರದು ಗುರು ।
ವವಸರದಿ ರಚಿಸಲಾನಂದಗೊಳಲಖಿಳಜನನೇಮಮಂ ಪಾಲಿಸನಘ ॥ (33)

ತೋರಿದುದ ನೊರೆವೆನಿದಪತಿಕರಿಸಿ ದೊರೆತನದ ।
ಭಾರಮಂವಹಿಸಿ ಬಂದಪಯಶವನಪಹರಿಸಿ ।
ಕಾರುಣ್ಯದಿಂ ಪೊರೆವುದುತ್ತಮಂ ನಿರ್ದಯದಿ ನೀನುದಾಸೀನ ಗೈಯ್ಯೆ ॥
ಚೀರವಸನಂಗಳುರುತರಜಟಾಮಂಡಲದ ।
ಭಾರವಾಹತೆಯೊಳಳವಟ್ಟಿರ್ದನೆನುತಲದಿ ।
ಸಾರಸಕ್ಕೆರಗಿ ಮುಂಗಾಣದಲೆ ದೈನ್ಯದಿಂ ಧರಣಿಯೊಳ್ಕೆಡದಿರ್ದನು ॥ (34)

ಈಪರಿಯು ನಿರ್ಬಂಧಗೊಳಿಪ ಭರತನ ಕುಚೋ ।
ದ್ದೀಪಕವಪರಿಹರಿಸಲೋಸುಗ ರಘೂದ್ವಹಂ ।
ಸೋಪಾಯಕರವಾಣಿಯಿಂದ ಮೆಲ್ಲನೆ ತಿಳುಪಲನುಗೈದ ವಿನಯದಿಂದ ॥
ಪಾಪವಿರಹಿತ ಸಜ್ಜನೋತ್ತಂಸ ನೀನುಸುರಿ ।
ದೀಪರಿಗಳೆಲ್ಲಂ ಯಥಾರ್ಥವಾದರು ಪೇಳ್ವೆ ।
ಗೋಪಿತಾರ್ಥವನೊಂದ ತಿಳಿ ತಿಳಿದು ನಿಶ್ಚಲತೆಯಿಂದ ಭಾವನೆ ಗೈವುದು ॥ (35)

ನೆರದ ಪಿತೃಗಳನೋಡಿ ಪೂರ್ವದೊಳ್ಗಯನೆಂದ ।
ಪರಿಯು ಪೇಳುವೆನು ಪೂವೆಸರಾಂತು ಬಾಧಿಸುವ ।
ನಿರಯದಿಂ ಕಡೆಸಾರ್ಚ್ಕ ಕಾಯ್ದನವ ಸತ್ಪುತ್ರನದರಿಂದ ಪಿತೃಗಳೆಲ್ಲ ॥
ಸುರರ ಪ್ರಾರ್ಥನೆಗೈದು ಬಹಳ ಪುತ್ರರಪಡೆಯು ।
ಲರಿತವರೊಳೋರ್ವ ಕ್ರತುವಂಮಾಳ್ಪ ಮತ್ತೋರ್ವ ।
ನಿರದೆ ಕನ್ಯಾದಾನ ಗೈವ ನೋರ್ವಂ ದಯದೊಳರ್ಚಿಸುವ ಭೂದಿವಿಜರ ॥(36)

ಈ ಸಾಧುಕೃತ್ಯದಿಂ ನಿರಯಂಗಳುಂ ಪೋಗಿ ।
ಲೇಸಾದಪುದೆನುತ್ತಲರಿತು ಪಿತೃಗಳು ಪುತ್ರ ।
ರಾಶಿಗೈದಪರೆಂಬ ಧರ್ಮ ಸಂಗತಿಯುನಂ ಕೇಳ್ದರಿಯದಾದೆ ತರಳ ॥
ಬೇಸರಂಗೊಳಸದಿರುವನ್ನಪೇಳ್ದದ ಕೇಳಿ ।
ಭೂಸುರರಪ್ರತ್ಯಬ್ದದೊಳ್ ತೋಷಣಂಗೈದು ।
ಭಾಸುರದ ಭಕ್ತಿಯಿಂ ಗಯದೊಳನ್ನವನೀಯಲದು ಪುತ್ರಕೃತ್ಯವನಘ ॥ (37)

ನುಡಿಯ ನನೃತವ ನಮ್ಮ ಪೊಡವಿಪತಿ ಸತ್ಪುರುಷ ।
ನುಡಿದೆರಡನಾಡವಂದದಿ ಸತ್ಯಮಂ ಪೊರೆದು ।
ತುಡುಕಿದಂ ಪಾಕಶಾಸನನ ಪಟ್ಟವಣೆಯಿಂ ಮಿತ್ರಕುಲಮಾಳಯೆನಿಸಿ ॥
ಪ್ರಡನಮಶ್ವಿವ ಬೊಪ್ಪನಿತ್ತನುಡಿಗಂತಪ್ಪ ।
ಲಡಸದಿಹುದೇಕಾಲ ಸೂತ್ರ ಪಿತೃಗಳ ದುಃಖ ।
ದೆಡೆಗಿಡುವತನಯ ಸಂಜನಿಸಿವರದೇಂ ಪುಟ್ಟದಿರಲುವೇಂ ನಷ್ಟಜಗದಿ ॥ (38)

ಮದುವೆಯಂ ಮಾಳ್ಪಲ್ಲಿ ನಿಮ್ಮಮಾತಾಮಹಂ ।
ಬುಧಸಮಾಜದಿ ಪೇಳ್ದ ಸುತೆರಾಜ್ಯ ಶುಲ್ಕಳಿಂ ।
ದಿದನರಿದುಕೊಳ್ಳನಲ್ಬೊಪ್ಪ ಸಮ್ಮತದಿಂವಲೊಪ್ಪಿಮಾತಿತ್ತನೊಲಿದ ॥
ಸುದತಿಕೇಕಯತನುಜೆ ದೇವಾಸುರರುನೆರದ ।
ಕದನ ದೊಳುಪ್ರೀತಿಯಿಂ ಘಳಿಸಿವರವಂ ಪಡೆದ ।
ಳದನು ಯಾಚನೆಗೈದಳಂದಿನವಸರದೊಳದ ನೊಪ್ಪಿಪಿತ ದಯೆಗೈದನು ॥ (39)

ಬೊಪ್ಪನಾಡಿದ ನುಡಿಯು ಸಫಲಮೆಂದೆನಿಸಿನಿತ್ತು ।
ತಪ್ಪದಂದದಿ ಪೊರೆವುದಿದು ಪುತ್ರಕೃತ್ಯ ಮೆಂ ।
ದಪ್ಪ ಶತ್ರುಘ್ನ ನೊಡವೆರದು ಜಗತೀತಳವ ಪಾಲಿಸುತಲಿರುತಿರ್ಪುದು ॥
ಇಪ್ಪೆಸವು (ಸೌ) ಮಿತ್ರಿಸಹ ದಂಡಕಾವಿಪಿನದೊಳ ।
ಗಿಪ್ಪ ಋಷಿಗಳ ಭಯವನಪಹರಿಸಿ ನೇಮವುಂ ।
ಬಪ್ಪನ್ನ ಮಿದುಸತ್ಯ ಮೆಗುಳಿಂದಿಗುಂ ಮಿಥ್ಯವಾಗದೈ ಸಾಧುಸುತ್ತ್ಯ ॥ (40)

ಶುದ್ಧಾಂತರಂಗನಿಂ ನೆರದಿರ್ಪ ಪರಿಜನರ ।
ಶುದ್ಧಾಂತರವ ಪಿರಿಯರೊಡಗೊಂಡು ನಡೆದವಿತ್ತ ।
ಶ್ರದ್ಧಾನುಚರಣೆಯಿಂ ಪಿತೃವಾಕ್ಯಮಂ ಸಲಿಸು ನೃಪನೀತಿಯೆಂತು ಜವದಿ ॥
ಉದ್ಧೃತಾಲೋಚನೆಗಳುಳದು ಸಜ್ಜನಸೌಧು ।
ಬುದ್ಧಿಯನುಮತವಿಡಿದು ನಗರಿಗುಂ ನಡೆಯೆ ಸ ।
ನ್ನದ್ಧನಾಗೆಂದೊರೆವುತಿರಲು ಜಾಬಾಲಿಮುನಿ ನುಡಿದ ಧರ್ಮಾಹಿತದಲಿ ॥ (41)

ತಂದೆ ತಾಯಿ ಗುರು ತನುಜರನುಜ ಬಂಧುಗಳುಹಿತ ।
ರೆಂದು ತಾನವರ ನನುಸರಣೆ ಗೈವುದು ವ್ಯರ್ಥ ।
ಚೆಂದಿರನನೊಬಗು ಕಾನನದಿ ತೋರಿದ ತೆರದೊಲವಲನಿಷ್ಫಲ ಮತಿಯಿದು ॥
ಬಂದಪನುತಾನೋರ್ವ ಗಮಿಸುವೆಡೆಯೊಳಗೋರ್ವ ।
ಹಿಂದುಮುಂದಾರವನಿಗಿಲ್ಲ ಕೃತಕರ್ಮಂಗ ।
ಳಂದ ಯೆಡೆಯಾಡುತಿಹ ಜಂತುವಲ್ಲದ ದಾರುದಾರಿಂಗೆ ಹಿತವರಹರು ॥ (42)

ನೆವದಲೊಂದೆಡೆಯ ಗ್ರಾಮಾಂತರದಿ ಸಂಕ್ರಾಂತ ।
ವಿವಿಧಜನರುಲ್ಲಾಸ ಸಲ್ಲಾಪ ಕೇಳಸಿ ನಿಸಿ ।
ಯುವನಿಕಾರೋಧಮಂ ಕಳದೈದುವರು ಮತ್ತದೋರ್ವರೋರ್ವರನೋಡದೆ ॥
ಅವರಂತೆ ಪಿತೃಮಾತೃ ಭ್ರಾತೃ ಪುತ್ರಾದಿಗಳು ।
ನೆವನೆವದೊಳೈತಂದು ತಂದರ್ಥಗಳನುಂಡು ।
ತವಕದಿಂದೈದುವವರಲ್ಲದಾರಿಂಗಾರು ಹಿತವಚಿಂತಿಸುವರೊಲಿದು ॥ (43)

ಜಂತುಜನಿಸಲ್ ಬೀಜ ಮಾತ್ರಕಾರಣ ಪಿತಂ ।
ಕೊಂತಿರುಧಿರದಿ ಶುಕ್ಲಮುತು ದಿನದೊಳುದರದೊಳ ।
ಗಾಂತ ಪಳುಮಾತೆಯೊದ್ಯಶ ಕಾರಣಂಗಳೀತನುವಿದಖಿತಂ ನೋಳ್ಪರೇ ॥
ಪಿಂತಕೈದಿದ ಜನಕನಾರು ತಾನಾರಾತ ।
ನೆಂತಿರ್ಪನೆಂಬುದಂ ತಿಳದರಾರೀಜಗದಿ ।
ಭ್ರಾಂತರರಿಯದೆ ತೊಳಲಿ ಬಳಲುತಿಹರಿದರೊಳಗನ್ನೇನುಂಟು ಬರಿಯಗಂಟು ॥ (44)

ನಷ್ಟಜನರಂ ಕುರಿತು ತೋಷಣಂಗೈಯೆ ಮಗು ।
ಳಷ್ಟಕಂ ಪಿತೃದೇವತೆಗಳೆಂದು ಶ್ರದ್ಧೆಯಿಂ ।
ಮೃಷ್ಟಾನ್ನಗಳ ನಿಡುವರಿವರುಣಲ್ಕತ್ತವರಿಗಹುದೆ ಸಂತೋಷ ಬಳಕ ॥
ಕಷ್ಟದಿಂ ಫಲವೇನು ಪೋದವರಿಗೀವನ್ನ ।
ವಿಷ್ಟಮಪ್ಪದೆ ನರಕಸಗ್ಗಮೆರಡರೊಳಲ್ಲಿ ।
ದಷ್ಟ ಮಾಗಿಹುದಕಂಡಿರ್ಪರಾರ್ ಲೋಕದೊಳು ಚಿತ್ತಚಾಂಚಲ್ಯಮಲ್ತೆ ॥ (45)

ತಿಳದು ಯುಕ್ತ್ಯನುಭವಗಳಲತ ಸಿದರ್ಥಮಂ ।
ಬಳಸಲನುಮಾನದಿಂ ದಿಟಮಹುದೆ ಜೀವದೊಳ ।
ಗಿಳೆಯೊಳಪ್ಪನ್ನೆಗಂ ನೋಡಿದುದು ಮಾಡಿದುದು ಕೊಡುಕೊಡಿದುದೆಲ್ಲವು ॥
ಬೆಳಗುವದು ಸಂತಸವ ಪೋದಬಳಕೇನುಂಟು ।
ತಿಳಿಯದಜ್ಞರು ಶಾಸ್ತ್ರಗಂಹರದೊಳೆಂ ಸಿಲ್ಕಿ ।
ತೊಳಲುವರು ಕುರುಡರಂದದಿ ಸಿಲುಕದಿಹಫಲಕೆ ಕೈಸಾರ್ಚಿ ಮರಗುವಂತೆ ॥ (46)

ಶಾಂತ ಸದ್ಗುಣಶೀಲ ಸತ್ಯವಂತರುಗಳಂ।
ಸಂತಾಪ ಗೊಳಿತಿರಲ್ ನೋಡಲಮ್ಮದೆ ತಿಳುಪು।
ವಂತಿದುಚಿತಂ ಮಹಾರಾಜಸುತನತಿ ಭಕ್ತಿಯಿಂದ ಪ್ರಾರ್ಥನೆಗೈವುತ।
ಮುಂತೆ ದೈನ್ಯಂ ಬಡುವರಂತಃಪುರಾಂಗನಾ।
ಸಂತಾನ ಖೇದಗೊಳುತಿಹರಖಿಲ ಶಮಥನರ।
ಸಂತೆಯನುಸರಿಸುತಿದೆ ಸರ್ವಜನಹೃತ್ತಾಪ ಘೋಪಂತೆನೀಂ ದಯದೊಳು॥ (47)

ಪತಿಕರಿಸು ದೊರೆತನವ ಸರ್ವಲೋಕರ ಮನವ।
ನತುಲಹರ್ಷಂಗೊಳಸು ಸಂತಸದಿ ಕೃಪೆವೆರಸು।
ಸತತ ಪ್ರಾಣಿಗಳ ಹಿತಮೆನಿಸಿದಾತನೆ ದೈವವೆಂಬುದಂ ಮನದೊಳರಿಸು।
ಕ್ಷಿತಿಯೊಳಗೆ ಭೂತಸಂತಸಗೊಳಪುದರ ನೋಡಿ।
ಶಿತಿಕಂಠಚರಣ ಸೇವನೆಯುಹುದು ಮತ್ತಿದ।
ಕ್ಕತಿಶಯತಪಸ್ಸಿಲ್ಲವೆನುತೊರೆವ ಸಾಧುಗಳ ನುಡಿಗಳಂ ಸಾಧುವೆನಿಸು॥ (48)

ಕೇಳುರಘುವರ ತಪೋಧನರಾತ್ರು ಲೋಕಹಿತ।
ಮೇಳವಿಸಲೆಂದಿನಿತ ಬಿತ್ತರಿಸಿ ಬೇಳ್ದುದಂ।
ತಾಳ ಮನದೊಳು ಸಕಲಲೋಕ ಸಂತಸ ಗೊಂಬೊಲನಿಮಿಷಪೋಚ್ಚವಂತೆ॥
ಹೇಳಯನ್ವಯವರ್ಚುವಂತೆ ನೃಪನೀತಿಗಳ್।
ಜಾಳಾಗದಂತೆ ಪೃಥ್ವೀಭರವನುಂ ತಾಳ್ದು।
ಭಾಳನೇತ್ರನಸಖನ ತೆರದೊಳಖಿಳರ ಪೊರೆದು ಸುಖದಿಂದಲಿಹುದುಲೇಸು॥ (49)

ಆ ಮಹಾ ಮೌನಿಯಾ ತೆರದಿ ಬೋಧಿಸೆ ಬುಧ।
ಸ್ತೋಮ ಮನವನುರ್ಕಡಸೆ ಭರತ ಪ್ರಿಯದೊಳ್ಬೆರಸೆ।
ಕಾಮಮೆನೆ ನೆರೆದ ಪ್ರಜೆಪರಿವಾರವೆಲ್ಲರುಂ ತಮತಮಗೆ ಭಾಷೆಗೊಳಸೆ॥
ರಾಮಪುರದರಸ ನಿಟ್ಟಿಸುತಲಾ ಮುನಿವಂಶ।
ಸೋಮ ಜಾಬಾಲಿಗಂ ನಮಿಸಿ ಮಾನವನಂತೆ।
ಪ್ರೇಮದಿಂ ಮಾರುತ್ತರವನೀಯಲುಜ್ಜುಗಂಗೊಂಡನೇಕೇಂಬೆನಗಜೆ॥ (50)

(ಸಂಧಿ 33 ಪದ 1472)

---

## ಮೂವತ್ತನಾಲ್ಕನೆಯ ಸಂಧಿ

ಸೂಚನೆ॥ ಗುರುವಸಿಷ್ಟರ ನೇಮದಿಂದ ಕೈಕಾತನಯ।
ಹರುಷಮಾನಸನಾಗಿ ಪಾಮುಕೆಗಳನ್ನು ನಿಜ।
ಪರಿಮಳ ಭೂಷಣಾಯುತ ಕಲಶೆ ಗೈದೈದಿ ಪುಟವೇದನಂ ಪೊಕ್ಕನು॥

ಹಿಮಗಿರಿತನೂಜೆಕೇಳ್ ಜಾಬಾಲಿಯಾಡಿದಶಿ।
ಮಮತಾಸುವಾಣಿಗಳ ಮಗುಳುತ್ತರವನಿತ್ತು।
ಸುಮನಸಾಗ್ರಣಿ ರಾಮನೇನೆಂಬೆ ತನುವಾಂತ ಧರ್ಮವಹುದೆಂಬಂದದಿ।
ವಿಮಲಮತಿ ದುಷ್ಕಾರ್ಯವಂ ಕಾರ್ಯರೂಪೆನಿಸಿ।
ಸಮಲಪಾತಕವನಂ ಪುಣ್ಯಮೆನಿಸುತಮೆನ್ನ।
ಮಮತೆಯಿಂ ಪೇಳ್ದನುಡಿ ಚಿತ್ರತರಮಾಯ್ತನಘ ಪೇಳ್ವುದೇನುತ್ತರವನು। (1)

ಹೆಂಬೇಡಿಯುಂ ಕೂರ ಹೇಸಿಕೆಯು ಶೀಲಕುಭ।
ಮೆಂಬಂತಲಕ್ಷಣ ಮದೆಬಂಂತೆ ಢಂಬಮೋಹಕವೆ। ?
ಮೋಹಕವಾಗಿ ತೋರುವಂತೊರೆವ ನುಡಿಗಳ ನಿಟ್ಟಿಸಿ॥
ಬೆಂಬಿಡದೆ ಕ್ರೂರಸಕ್ರಾ ಕುಲವ ಬೇರ್ಮಾಡುವು।
ಗಂಭೀರದಿಂದ ಕಾಣ್ಬುಡುವಂತೆ ತೋರುವದು।
ಬಿಂಬದಂತದರ ಸಾಧುಗಳೆಡೆಯುಲಿದ ನುಡಿಯುಲಹುದೆ ತಾಪಸವರೇಣ್ಯ॥ (2)
ವಿಧಿವಿವರ್ಜಿತನಾಗಿ ಸ್ವೇಚ್ಛಂದವಳಿ ನಡೆದು।
ಬೆದರಿಸಿಯೆ ಸತ್ಯಮಂಬೆರದ ಧರ್ಮಸ್ಥಿತಿಯು।
ಬದುಕುವೆನದೇಸುದಿನ ಮತ್ತಾರ ಗತಿಯನುಂ ಪಡೆವೆಸಮ ಹೃದಯರೆಡೆಯು॥
ಪದವ ಪಡೆವೆನದೆಂತು ಧರ್ಮಧೂಷಕನೆಂದು।
ಬೆದರದಿಹುದೇಲೋಕ ಮಗುಳಾರು ಬಂದೆನ್ನ।
ವದನಮಂ ನೋಡುವರು ನೃಪನೀತಿಯುಂ ಕಂಡು ಪ್ರಜೆಗಳಾರನುಸರಿಪರು॥ (3)
ಸುರರು ಭೂಸುರರು ಋಷಿವರರು ಸಂತೋಷಿಸುವ।
ರುರುತರ ಸ್ವರ್ಗಸುಖಮೈಶ್ವರ್ಯ ಬೀಜವಿಾ।
ಧರಣಿಯೆ ಯಶಸ್ಕರಂ ದೀರ್ಘಾಯುವವನೀವದೀ ಸತ್ಯಮೆಂದೆನುತಲಿ॥
ನಿರುತಹುತವಹ ತುಷ್ಟಿ ಜಪತಪಂಗಳು ದಾನ।
ಗುರುಪವಿತ್ರತೆ ಸತ್ಯಮೆನುತ ವೇದಂಗಳರ॥
ದೊರೆವದಂ ಧಿಕ್ಕರಿಸಲೆಂತಹುದು ಪೂರ್ವಾನುಮತವಲಂಘ್ಯಂ ಮುನಿವರ॥ (4)
ಪೊರೆವಕುಲವನ್ನೊರ್ವ ನಿರಯಕೆಳದಪನೊರ್ವ।
ವರಿಪಸ್ವರ್ಗವನೊರ್ವ ಕರುಣ ಗೈದಪನೊರ್ವ।
ನರಸುಗಳನೇಕ ವಿಾಪರಿಯುತೋರುವರ್ಪ್ರಸೆ ಸತ್ಯಪರಮೆಂದರಿಯುದೆ॥
ಭರತನುಪಚರಣೆಯಿಂ ಮಾತೆಯರ ನುಡಿಗಳಂ।
ದೊರೆವ ಬಂಧುಸುಮಿತ್ರರುಗಳ ಮೃದುವಾಣಿಯಿಂ।
ಬೆರದಾನದೆಂತು ಪರಗತಿಯು ಸೇರುವ ಸತ್ಯದಿರವ ಪಳದಪೆನು ಜೀಯ॥ (5)
ಪೊಡವಿಪತಿಗಿದಿರಿನಲಿ ಪಂಡಿತರ ಸಮ್ಮುಖದಿ।
ತುಡುಕಿದಪ್ರತಿಜ್ಞೆಯುಂ ಪಳದು ಸೌಖ್ಯಮಬಯಸಿ।
ನುಡಿದೆರಡನಾಡುವನೆ ರಾಮ ಮೋಹಾದಿಗಳ ವಂಚನೆಗಳೊಡಬಡುವನೆ॥
ಪಿಡಿದವಾತುರದಿ ಪಿತೃದೇವತಾದಿಗಳಂಗೆ।
ಕೊಡುವ ಸಂತಸವ ಜಸವಂನಿತ್ತು ಸದ್ಗತಿಯು।
ಬಿಡುವ ಸುರಧೇನು ಸತ್ಯವನು ಪಳದಪರುಂಟೆ ಪಳೆವಾತುಗಳನಿಳಯನೆ। (6)
ಮನದೊಳೊಂದಿಟ್ಟು ಮಾತಿನೊಳೊಂದ ತೋರುತ್ತ।
ತನುವಿನೊಳಗೊಂದೆಸಗುತನೃತಕರ ಪಾಪಗಳ।
ಮನೆಯೆನಿಪ ದುರ್ಮಾರ್ಗಕ್ಷತ್ರಧರ್ಮವ ಪಿಡಿದು ವಿಷಯಸುಖದನುಭವಗಳಂ॥
ಅನುಸರಿಸಿ ಜನಕನಾಡಿದ ನುಡಿಯು ಸತ್ಯಮೆಂ।
ದೆನಿಸಿ ದುರ್ಯಶವಾಂತು ಪರಗತಿಯು ನೀಗುವಿಂ।
ದಿನಿಸೆನಗೆ ಸಮನಿಪುದೆ ಸತ್ಯಪಂಥಾನವಂ ಮಿಾರಬಲ್ಲೆನೆ ಮುನಿವರ॥ (7)

ಅತಿಥಿಪೂಜೆಯು ದ್ವಿಜೋತ್ತಮ ಪಾದಸೇವೆಯುಂ ।
ಪ್ರತಿಭೂತದನುಕಂಪ ಸತ್ಯಧರ್ಮಂಗಳಂ ।
ವಿತತ ವಿಕ್ರಮಗುರುಜನಾನುಸೇವನೆ ಸ್ನಾನದಾನಪೂಜಾವಿಧಿಗಳ್ ॥
ಸತ್ಪುರುಷರನುಸರಿಪರಿಂದುವೆ ಸೋಪಾನ ಸ ।
ದ್ಗತಿಗೆನುತ ನಳನಹುಷ ಭರತ ಸಗರಾದಿಗಳ್ ।
ಮತವ ಧಿಕ್ಕರಿಸಲಳವಹುದೆ ಬುದ್ಧಾಚರಣೆ ಭವಬಂಧಕರಣೆಯುಹುದೆ ॥ (8)
ಭರತಖಂಡದೊಳಾದಿಸಿ ಬಹುಧರ್ಮಗಳಮಾಡಿ ।
ತುರಗಮೇಧಗಳೆಸಗಿ ಶತಮುಖ್ಯಸಗ್ಗಕುಂ ।
ದೊರೆಯಾದನಖಿಲ ಭೂಸುರರೆಲ್ಲರಿದನರಿತು ಸಾಧುಸೇವನೆಗಳಂದೆ ॥
ಪರಿಪರಿಯುಸತ್ಕರ್ಮಗಳಮಾಡಿ ಕ್ರತುಗಳಂ ।
ಮರುತ್ತ ಶಿಬಿ ಮುಂತಾದ ದೇವರ್ಕಳಂ ತುಷ್ಟಿ ।
ಕರಗೊಳಿಸಿ ಸುಖದಲಿಹುದಂ ನೋಡುತ ಪ್ರಲಾಪಗೈವುದೇಂ ಮೇಧೆಜೀಯ ॥ (9)
ತಾತನಾಡಿದ ನುಡಿಯನನುಸರಿಸಿ ಭೃಗುವರಂ ।
ಮಾತೆಯುಂ ತರಿದಿಟ್ಟ ಧರ್ಮಜ್ಞರೆಲ್ಲರೀ ।
ನೀತಿಯುಂ ತಿಳಿದು ಪಿತೃವಾಕ್ಯ ಪಾಲನೆಗೈದು ಸದ್ಗದಿಗಳಂ ಪಡೆವರು ॥
ಪ್ರೀತಿಯಿಂದಯ್ಯ ಪಾಲಿಸಿದ ವಾಣಿಯ ತಲೆಯೊ ।
ಳಾತು ಬುಧಜನರೆಡೆಯುಲಿಂದು ಸುಖದಿಚ್ಛೆಗಂ ।
ನೋತು ನಡೆದಡದಾರುಮೆಚ್ಚುವರು ಪರಸುಖಗಳೆಂತಪ್ಪುದೈ ತಪ್ಪದೆ ॥ (10)
ಬುದ್ಧಾಚರಣೆವಿಡಿಮ ಭೌತಿಕಸುಖಂಗಳಲಿ ।
ಬದ್ಧಾಚರಣೆಗೈದು ಬಹುದೋಷಗಳತಳೆದ ।
ಬದ್ಧನುಡಿಗಳನಟ್ಟಿ ಧರ್ಮದಾರಿಯಚುಟ್ಟಿ ನಡೆದಬನೆ ಸಿರಿಯುಮೆಚ್ಚ ॥
ಶುದ್ಧಾಂತರಂಗದಿಂ ಸುಜನರೊಪ್ಪಲ್ ಧರ್ಮ ।
ಬದ್ಧಕಂಕಣನಾಗಿ ಮದ್ವಂಶ ಸಂಭವನ ।
ನುದ್ಧರಿಸದಳಮನಸಮಾಡ್ದರಾರೊಪ್ಪುವರು ದುಷ್ಕೀರ್ತಿಗೆಸೆವತವರು ॥ (11)
ಎನುತಲೀಪರಿಯ ಕ್ರೋಧದೊಳೊರೆದ ವಾಣಿಯುಂ ।
ಮುನಿಪತಿವಸಿಷ್ಠ ತಿಳದಿಂತೆಂದ ಪ್ರೇಮದಿಂ ।
ಜನಪಕೇಳ್ ಜಾಬಾಲಿ ಸರ್ವಜ್ಞನಿಧಿ ಸಕಲರಾಟಕೋಟಲೆಗಳನ್ನು ॥
ನೆನಹುಮಾತ್ರದೊಳರಿವ ನಾದಡಂ ಪ್ರೀತಿಯಿಂ ।
ಮನೆಗೆ ಕರದೈದೆಲ್ಲರಂ ತೋಷಗೊಳಿಸಲೆಂ ।
ದನುನಯದಿ ಪೇಳ್ದನಲ್ಲದೆ ದುರಾಗತಮಲ್ಲ ಪೇಳ್ದಪೆಂ ಕೇಳುಸೊಲ್ಲ ॥ (12)
ಮೊದಲು ಜಲಮಯಮಾಗಿ ತೋರುತಿರ್ದುದು ಬ್ರಹ್ಮ ।
ನುದಯಮಾಗಲ್ವರಾಹರೂಪಿಂದ ಭೂಮಿಯುಂ ।
ಮಧುಸೂದನಂಗೈದ ನಿಖಿಲದೇವರ್ಕಳಂ ಚತುರಮುಖಗಿಕ್ಕೆಯಾಗಿ ॥
ಬಿದಿಯಿಂ ಮರೀಚಿ ಕಶ್ಯಪನಾದಯಾಪರ ನಿ ।
ಗುದಿಸಿದ ವಿವಸ್ವಾನ್ಮಹೋತ್ಸಾಹಿಯಾತನಿಗೆ ।
ಸದಯಮನು ವಿಕ್ಷ್ವಾಕುವಾತನಿಂದಂ ಕುಕ್ಷಿ ಯುವನಿಂ ವಿಕುಕ್ಷಿನೃಪತಿ ॥ (13)

ಸುರನಿಕಾಶಂ ಬಾಣನವನಿಂದಲನರಣ್ಯ ।
ಧುರವಿಜಯ ಪೃಥು ವವನತನಯಂ ತ್ರಿಶಂಕು ವು ।
ತ್ತ್ರರಿನಿಷೂದನ ದುಂಧುಮಾರ ಯುವನಾಶ್ವ ಮತ್ತಾತನಿಂ ಮಾಂಧಾತನು ॥
ತರುಣಂ ಸುಸಂಧಿ ಯಾತನಿಗೆ ದ್ರುವಸಂಧಿಯುಂ ।
ಭರತ ನಾತಂಗ ಸಿತ ಸಗರನಸಮಂಜಸಂ ।
ತರುಣನಾತನಿಗಂಶುಮಂತ ಮತ್ತವನಣುಗನಾದಂ ದಿಳೀಪನೃಪತಿ ॥ (14)

ಪಡೆದಂ ಭಗೀರಥನನವನಿಂದೆ ಕಾಕುಸ್ಥ ।
ಗೊಡನೆ ರಘುಕಲ್ಮಾಷಪಾದ ಶಂಖಣನವನ ।
ಪೊಡೆಯೊಳುದಿಸಿದ ನಗ್ನಿವರ್ಣಸಿಂಗ್ರಗಪ್ರಶುಶ್ರುಕನಂಬರೀಷನಹುಷ ॥
ಪೊಡವಿಪನ ಪುತ್ರನಾಭಾಗನಿಂದುದಯಿಸಿದ ।
ನುಡುಪನಂದದೊಳಜಂಗಾದ ದಶರಥ ವಿಪುಲ ।
ದೃಢವಿಕ್ರಮಂಗೆ ನೀಂತನಯರಿನ್ನಯ ವಂಶದರಸುಗಳ ಧರ್ಮಗಳನು ॥ (15)

ತಿಳದು ನಡಸಲ್ವೇಳ್ಕುಮೆನುತಲುಸುರಿವೆ ನಿಮ್ಮ ।
ಕುಲಪರಂಪರೆಯರಸಗಳು ಜ್ಯೇಷ್ಠಪುತ್ರರನು ।
ಬಳಿಗೆ ಪಾಲಕರೆನಿಪರಿದು ತಥ್ಯವನ್ವಯದ ಧರ್ಮವಂ ನತಿಗಳಿಯದೆ ॥
ತೊಳಪಸಿರಿಸಾಮ್ರಾಜ್ಯದಾಧಿಪತ್ಯವನು ಕೈ ।
ಕೊಳುತ ಧರ್ಮಾಭಿವರ್ಧನೆಗೈದು ಜಸದಿಂದ ।
ಬೆಳಗುಗೊಳಸ್ಸೈ ಲೋಕಮಾಗನೆಂದೆಚ್ಚರಿಸಿ ನಗುತ ಮಗುಳಂತೆಂದನು ॥ (16)

ಪುರುಷನಿಗೆ ಗುರುಗಳುಂ ಮೂವರಲೆ ಲೋಕದೊಳು ।
ಪರಮ ಧರ್ಮಜ್ಞಪಿತ ವೆತ್ತಾಕೆ ಧರ್ಮಗಳ ।
ನೊರೆವ ನಾಚಾರ್ಯರೀ ಮೂವರುಂ ಸಮಮಲ್ತೆ ತಾತನಗ್ಗಕೈದಲು ॥
ವರಸಾಧ್ವಿಮಾತೆಗುರುವಾವೀರ್ವರುಂ ಪೇಳ್ವ ।
ಪರಿಯನಂಗೀಕರಿಸಿ ನಡೆಸುವದು ಸಾಧುಗಳ ।
ಚರಿತೆಗೊಣಯಮಹುದೆ ನೆರೆದ ವಿದ್ವಜ್ಜನರ ವಾಣಿಯೀಂ ವಿಫಲಮಹುದೆ ॥ (17)

ಶ್ರುತಿಯಿಂದುದಿತವಾಗಿ ವಿಹಿತಾಚರಣೆಯಾಗೆ ।
ಕ್ಷಿತಿಯಜನಗೊಪ್ಪದುದ ನೆಸಗಲಪ್ಪುದೆ ಸಾಧು ।
ಮತಿಯಿಂದ ಪಿತನಿತ್ತ ರಾಜ್ಯವಂ ಪ್ರೀತಿಯಿಂದೊಪ್ಪಿಸುವ ಭರತನೊಲಿದು ॥
ಸತ್ಪುರುಷರುಗಳ್ ಮಾತೆಯರನೆರದೀಜನರ ।
ನತಿಶಯದಿ ಸಂತಸಂಗೊಳಪುದಿದು ಸದ್ಧರ್ಮ ।
ಕತಿಕರವಿದಲ್ಲೆನುತ ಗುರುಬೆಸಸೆ ರಘುನಾಥ ನಸುನಗುತಲಿಂತೆಂದನು ॥ (18)

ಜೀಯದಯದಿಂದೊರೆದ ವಾಣಿಯತುಲಿತಸುಖೋ ।
ಪಾಯಕರವಾಗಿದೆಕೊ, ಸರ್ವಜನರೊಳಗೆಮ್ಮ ।
ತಾಯಮಾತಿಂಗೊಲಿದು ಕೊಟ್ಟನುಡಿಯು ಸಲಿವೆನೆಂದಾನೊಡಂಬಟ್ಟೆನು ॥
ಆಯಮಾಗಲಿ ಸುಖವಿರಹಿತವಾಗಲ್ಕಿದಕೆ ।
ಪಾಯಮಂ ಚಿಂತಿಸಿದರೊದಗುವದು ದುರ್ಯಶಂ ।
ಕಾಯಸುಖಕೆಳಸುವರೆ ಕಾರ್ಯಸಾಧಕಧರ್ಮವಂಗಳಪ ಸಾಧುಜನರು ॥ (19)

ತನುವನಿರ್ಮಿಸಿ ಪೋಷಣಂಗೈದ ಸ್ವಾತಂತ್ರ್ಯ ।
ದನುವಾಂತ ತಾತ ವಿಕ್ರಮಗೈದಡಾವಮಾತಿ ।
ಗನುವಚಿಂತಿಸಲಹುದೆ ಪೇಳ್ದಂತೆ ಕೇಳ್ವುದಿದು ಪುತ್ರ ಮತಜನ ಸಮ್ಮತ ॥
ಘನತರದ ಕಷ್ಟಗೊಳಲೇಂಫಲಂ ಸಾಧುಸ ।
ಜ್ಜನರ ಮತಮಂಪಿಡಿದು ಪಟ್ಟಣದೊಳರಸೆನಿಪು ।
ದನು ತೊರೆದ ರಘುವರನ ನುಡಿಯಲಾಲಿಸಿ ಭರತ ಪೇಳದಂ ಮಂತ್ರಿಯೊಡನೆ
ತಾತನನುಮತಿವಿಡಿದು ನಡೆವುದಾರ್ಯಗೆನೇಮ । [(20)
ಭ್ರಾತನಂಘ್ರಿಪಂಕಜವನನುಸರಿಪುದೆನ್ನಮತ ।
ನೀತಳುವದೈದಿ ಸ್ಥಂಡಿಲದೇಶದೊಳಗೆಸಗು ಜವದಿ ದರ್ಭಾಸನವನು ॥
ಪ್ರೀತಿಯಿಂ ಪ್ರಾಯೋಪವೇಶನಂ ಗೈದು ಸಂ ।
ಜಾತಕೃಪೆಯಿಂದಾರ್ಯ ನಿಟ್ಟಿಪನ್ನೆಗಮಿರ್ಪೆ ।
ಭೂತಳದೊಳೆಲ್ಲರುಂ ನೋಡಲೆನುತಂ ಭರತ ಪೇಳ ಗಮಿಸುತ್ತಮಿರಲು ॥ (21)
ಭರತನಾಡಿದ ನುಡಿಗೆ ರಘುವರಂ ಬೆರಗಾಗಿ ।
ಗುರುವಿಗೇಕಾಂತ ದೊಳ್ ಸೂಚಿಸಲ್ಕೈತಂದು ।
ತರುಣಬಾರೆಂದು ಕರವಿಡಿದು ಗೋಪ್ಯಾರ್ಥವಂ ಬತ್ತರಿಸಲನುಗೈದನು ॥
ಧರೆಯಭಾರವನಿಳುಪೆ ಸರಸಿಜಾಸನಮತದಿ ।
ನರನೆನಿಸಿ ದಂಡಕಾವನದ ದೈತ್ಯರ ತರಿದು ।
ದುರುಳ ದಶಕಂಧರನ ಸಂಹರಿಸಲೈದುವಂ ರಘುನಾಥ ಕೇಳ್ಬಾಲಕ ॥ (22)
ಯೋಗೀಶ್ವರಂ ವಿಷ್ಣುವೀರಾಮನಾತನುರು ।
ಯೋಗಮಾಯೆಯೆಸೀತೆ ಭೋಗೀಶಲಕ್ಷ್ಮಣಂ ।
ರಾಗಮಂ ಸಲಿಸಲಮರೇಂದ್ರಾದಿಗಳಗಭಯಮಿತ್ತು ಬಂದಿರ್ಪರನಘ ॥
ಈಗುಪಿತದರ್ಥಮಂ ಪೇಳಲಸದಳ ಮನೋ ।
ರೋಗಮಂ ಪರಿಹರಿಸಿ ನಿಶ್ಚಿಂತನಾಗಿ ನೀಂ ।
ಬೇಗಲಪ್ಪಣೆವಿಡಿದು ತೆರಳೆನುತ್ತತಿಳುಪಿ ಗುರುವರನೈದಲಿತ್ತಭರತಂ ॥ (23)
ಪರಬೊಮ್ಮನೀರಾಮಚಂದ್ರನೆಂದರಿತು ಬಂ ।
ಧುರಶೋಕಮಗಲಲಹುದೆನುತ ಚಿಂತಿಸುತಿರ್ಪ ।
ಭರತನಂ ತಿಳುಪಲಿಚ್ಛೈಸಿ ರಘುನಾಯಕಂ ವಿನಯದಿಂದಿಂತೆಂದನು ॥
ದೊರೆಗಳೆಸಗುವ ವ್ರತಮಿದಲ್ಲಮತಿದಾರುಣಂ ।
ಬರಿದೆ ಬಳಲಲದೇನು ಬಿಡು ದುರಾಗ್ರಹವ ಶುಭ ।
ಕರಜಲಸ್ಪರ್ಶನಂ ಗೈದುಸುಖಿಯಾಗೆನುತ ಸೇವಿಸಲ್ಕೇಳಜವದಿ ॥ (24)
ತೊಳೆದು ಕರತಳಗಳಂ ಕೈಮುಗಿದು ನಾಲ್ದೆಸೆಗೆ ।
ನಳನಪತ್ರಾಕ್ಷನಂ ನಿಟ್ಟಿಸುತಲಿಂತೆಂದ ।
ನಿಳೆಯರಸ ಗಿತ್ತಭಾಷೆಯಸಲಿಸೆ ಪದಿನಾಲ್ಕುವರುಷಮೀವನದೇಶದಿ ॥
ನಿಳಯಗೈದಾನಿರ್ಪೆ ನೀವೈದಿಪಟ್ಟಣದಿ ।
ಪೊಳಪಗದ್ದುಗೆಯಲ್ಲಿ ಮಂಡಿಸಲ್ವೇಳ್ಪುದೆನೆ ।
ತಿಳಿದು ಭರತನಮತವ ಶ್ರೀರಾಮಚಂದ್ರಮಂ ಧರ್ಮವಿಧಿದಿಂತೆಂದನು ॥ (25)

ಬಲ್ಲೆನಿನ್ನಯ ಮನೋಭಾವಮಂ ಸಾಧುಗಳ ।
ನಲ್ಲ ನಿನ್ನಯಭಕ್ತಿಯಿಂದ ಮೂಲೋಕಮುಂ ।
ಸಲ್ಲಲಿತಹರ್ಷ ಗೊಂಡುದು ಕೇಳು ಪಿತ್ರವಿಹಿತದಿಂದಮವಿಹಿತದಿನುಡಿಯೆ ॥
ಬಲ್ಲವರ್ಪತಿಕರಿಸಿ ಕೊಟ್ಟಭಾಷೆಯ ಸಲಿಸು ।
ತೊಲ್ಲೆಯೆನ್ನದೆ ಸುಖಾಸ್ಪದಸಗ್ಗತ್ತು ಋಣ ।
ದಲ್ಲಿಮುಳುಗದೆ ಮುಕ್ತನಾದವಂ ಪುತ್ರನೆಲೆಸಾಧುಜನಸಮ್ಮತನೆಲೆ ॥ (26)

ಮೇರೆದಪ್ಪೆ ಮಹಾಬ್ಧಿ ಶಶಿಲಕ್ಷ್ಮಿಯುಂಬಿಡೆ ತು ।
ಷಾರಮುಂತುಹಿನಾದ್ರಿಯುಂತ್ಯಜಿಸಲಾಂ ನುಡಿದು ।
ದಾರಬಾಷೆಗೆ ತಪ್ಪೆದುಷ್ಕರದ ದುರ್ನೀತಿಮಾರ್ಗಮ ನೊಪ್ಪೆತನಯ ॥
ತೀರಿಸಿ ಪ್ರತಿಜ್ಞೆಯಂ ತಿರುಗಿ ಬಹೆ ದಶರಥ ಕು ।
ಮಾರನಿ ನ್ನೊಡೆವೆರದು ಜಗತಿಯಂ ಪಾಲಿಸುವೆ ।
ಸಾರು ಸಂಕಟಗೊಳದೆ ಸರ್ವಜನರೊಡನೆನುತ ರಘುಜಂ ನಿರೂಪಿಸಿದನು ॥ (27)

ಇಂತಗ್ರಜಾನುಜರ ಸಲ್ಲಾಪಮಂ ಕೇಳ್ ।
ಸಂತಸದಲಖಿಳಋಷಿಗಣ ಜಾನಪದರೆಲ್ಲ ।
ಚಿಂತೆಯುಂ ಬಿಸುಟು ಭರತಂಗೆ ಪೇಳವರೊಲಿದು ಸತ್ಯಾನುಮತವಬಳಿದು ॥
ಪಿಂತಣರಸುಗಳಲ್ಲಿ ನಿನ್ನಪೋಲುವ ಮೃದು ।
ಸ್ವಾಂತರಂ ಕಂಡರಿಯೆವತಿಶಯದ ಋತಾವಚನ ।
ಕಾಂತನೆನಿಸಿರು ಧರೆಗೆ ಬರುವ ರಘುಕುಲಶಿರೋರನ್ನ ಮಂದಿರಕೆ ನಿನ್ನ ॥ (28)

ದೇವಕಾರ್ಯಮಿದೆಂದು ಭಾವಿಸುತಮನದೊಳಗೆ ।
ಕೋವಿದರ ಮತವಿದು ನಡವುದೆನುತಂಪೇಳ್ದ ।
ರೀವಿಯಂ ತಿಳಿದು ಕೌಸಲ್ಯೆ ಭರತನೊಳಿಂದಳಣುಗ ಕೇಳ್ಬರಿದೆಬಳಲೆ ॥
ಆವುದಹುದಖಿಲ ಋಷಿನಿವಹ ನೇಮಿಸಿದಂತೆ ।
ಪಾವನತರಾಕಾರ ರಾಮಬೆಸನಿತ್ತಂತೆ ।
ಭಾವಿಸುತೆ ಮನದೊಳ್ಗೈದುವದು ಕರಲೇಸೆನುತ್ತುಸುರಿದಳ್ವಿನಯಮಿಡಿದು ॥ (29)

ರಾಮ ಬಾಲಕನೀತ ಭೂಮಿಪಾಲನೆಗೈಯೆ ।
ನೇಮಿಪುದು ಭವದೀಯ ಪಾದುಕೆಗಳಂ ಬುಧ ।
ಸ್ತೋಮ ಕ್ಷೇಮಂಕರ ಮದ್ಗೈದೆ ಧರಣೀವಲಯ ಪಾಲನಂಗೈದು ಶುಭದ ॥
ನಾಮರಸಗೊಳಪುದಖಿಲರನೆಂದು ಕೌಸಲ್ಯೆ ।
ಪ್ರೇಮದಿಂ ದೊರೆಯೆ ಲೋಕಾನುಗ್ರಹಂ ಗೈದು ।
ತಾಮರಸನಯನ ಪಾದುಕೆಗಳೊಲಿದಿತ್ತನಾಭರತಂಗೆ ಜಗತಿನಲಿಯೆ ॥ (30)

ಸಕಲಭೂತಳದ ಯೋಗಕ್ಷೇಮ ಸುರಧಾಮ ।
ವಖಿಲಜೈವಾತವ ಶುಭೋದಯಮೀತ ಕಲ್ಪಲತೆ ।
ಶುಕವಾಮದೇವಾದಿ ವಿಧಿಭವಸುರೇಶರ ಹೃದಯಕಮಲಹಂಸನೆನುತ ॥
ಭಕುತಿಯಂ ಮಕುಟ ತಪದೊಳಗಿಟ್ಟು ಪೊಗಳ ಮುನಿ ।
ನಿಕರಮಧ್ಯದಿ ಭರತ ಶ್ರೀರಾಮಚಂದ್ರಮಗೆ ।
ಪ್ರಕಟಿಸಿದ ನಿಜಮನೋರಥವ ನಿರ್ವೃತಿಪಥವ ಕುಮತಿಜನರವಿರಥವನು ॥ (31)

ಭವವನುಗ್ರಹದಿಂದಲಿಂದು ಬಂದೊದಗಿದುದು ।
ಸುವಿವೇಕವುಳ್ಳಂದ ನೀಂ ಮಹಾಪುರುಷನೆಂ ।
ಬುವದ ತಿಳದ್ವೈತಂದೆ ಮರಯೊಕ್ಕನೈತಂದೆನೊಂದೆಸ್ಥಪರಿಯಾಚಗಳಂದೆ ॥
ಭವಬಂಧ ಬಾಂಧವಾದ್ಯಖಿಳಮೋಹಾತುರವ ।
ಸವರಿ ಕೃಪೆಯಿಂ ಕಾಯುವೇಳ್ಕೆಂದು ಕೈಮುಗಿದು ।
ವಿವಿಧಪರಿಯಲಿ ನುತಿಸೆ ರಘುನಾಥ ನಸುನಗುತ ವಸಾತ್ಯೆಯೊಡನಿಂತೆಂದನು ॥(38)
ತಾಯೆ ನೀನವಧರಿಸು ಪೇಳ್ದ ನುಡಿ ಪುಸಿಯಲ್ಲ ।
ಮಾಯೆ ಎನ್ನಾಧೀನ ಮದ್ಬಲೋದ್ಧತೆಯಿಂದೆ ।
ಸ್ತ್ರೀಯುಮುಪ್ಪಂತಗಗಿ ಮೋಹಿಸುವುದಿದು ತಥ್ಯ ಮತ್ಪ್ರೇರಣೆಯು ವಿನಾರದೆ ॥
ಬೀಯುದಮರರ ನುಡಿಯು ಸಲಿಸುವರೆ ಸಂಸತಿಯು ।
ಪಾಯದಿಂ ಭವದೀಯನುಡಿಯಿಂದ ನುಡಿಸಿದಳ ।
ಪಾಯಮೆಳ್ಳನಿತಿಲ್ಲ ನಡೆದುದೆಮ್ಮ ಘಮತ್ರದಿ ದೇವಕಾರ್ಯಾರ್ಥವಾಗಿ ॥ (39)
ಚಲಿಸಲಪ್ಪುದೆ ತೃಣಂ ಬೆಸನಿತ್ತಡಲ್ಲದಪ್ರು ।
ಚಲಿಸಲೇಂ ಕಾರಣಂ ಮದಧೀನ ಪ್ರಕೃತಿ ಬಂ ।
ದೊಲಿದಖಿಳಪ್ರಾಣಿಗಳ ಬಂಧಿಸಿಹಳನು ದಿನದಿ ಮಿಸುಕಲೀಯದ ತೆರದೊಳು ॥
ಕಲಿತಕರ್ತೃತೆಯೊಳಂ ಬಾನೆಡೆಯು ತೋರ್ಪಂತೆ ।
ಸಿಲುಕದಾಂ ಸರ್ವತ್ರ ಸಮದೃಷ್ಟಿಯೆನಿಸಿಯೆ ।
ನ್ನೊಲುಮೆಯಿಂ ಭಜಿಸುವರ ಭಜಿಪೆನಲ್ಲದಲೊಂದು ಕ್ರಿಯೆಗಳಂ ಸಿಲುಕೆನನ್ಯೆ ॥ [(40)
ಅರಸಿ ಕಾಣವು ವೇದ ವರವಿಂದಭವಮುಖ್ಯ ।
ರರಿಯರೆನ್ನನನನ್ಯಭಕ್ತಿಯಿಂ ಮೆಲ್ದೋರಿ ।
ಪೊರಮೆನಲ್ಲದೊಡುಳಿದ ಯೋಗಯಾಗಾದಿಗಳ ಬಲೆಯೊಳಾಂ ಸಿಲುಕೆ ತಾಯೆ ॥
ಮರೆಗೊಂಡು ರಾಮನೆಂ ನರನಂತೆ ಸುಖದುಃಖ ।
ವೆರೆದಿರ್ಪನೆಂದೆನ್ನ ತಿಳಿದು ನಿರಯವನಾಳ್ವ ।
ನರಿಯಬಾರದು ತತ್ವ ಪ್ರಟ್ಟೆದಾಕ್ಷಣಕೆಹುದು ನಿರ್ವಾಣಮುಖ್ಯಸೌಖ್ಯಂ ॥ (41)
ಪೊಂಡಿಯೇಕಾಂತನಿಳಯವ ವಿಷಯಮುರುಭರಗ ।
ಳೊಂದನಂಟದೆ ಹೃದಯಮಂದಿರದ ಮಧ್ಯದೊಳು ।
ತಂದದಿಂ ಮನ್ಮೂರ್ತಿಯಂ ನಿಟ್ಟಿಸುತ ಮಭ್ಯಾಸಗೈವುತ್ತಮಿರಲು ॥
ಕುಂದಿ ಪಾತಕತತಿಗಳ್ಪೆದವವು ನಿಜಬೆಳಗಿ ।
ನಿಂದಲಾನಂದ ಸುಖಮಯುಮಕ್ಕುಮಿದ ತಿಳವ ।
ರಂದಿಗುಂ ಭವಬಂಧ ಬೆಸನಿಲ್ಲದಂತಕ್ಕು ಧೃತಿ ಸತ್ಯ ಮಕ್ಕು ಮಿಕ್ಕು ॥ (42)
ಎನುತ ತತ್ವಾರ್ಥಮಂ ಬೋಧಿಸಲು ಕೈಕೆ ಪದ ।
ವನಜಗಳಗಭಿನಮಿಸಿ ಮುಗುಳ್ಪಾರ್ಥನೆಗೈದು ।
ಘನತರಾನಂದಬ್ಧಿಯೊಳಗಾಳುತೇಳುತಂ ತನಯನೆಡೆಗೈತಂದಳು ॥
ಮುನಿತಿಲಕ ಜಾಬಾಲಿಮುಖ್ಯವಿಪ್ರೋತ್ತಮರ ।
ಮನಗೊಂಡಖಂಡನಿಧಿಯಂ ಕಂಡು ಜೀಳ್ಕೊಂಡು ।
ಜನಪನೆಡೆಗೈತರಲ್ ಜನಪದಂ ಬೆಸಗೊಂಡು ವೇಗದಿಂದೈತಂದುದು ॥ (43)

ನೆರೆದಖಿಳಜನರಮಾತ್ಯರುಗಳನುಮತಿವಿಡಿದು ।
ಭರತನಾ ಪಾದುಕೆಗಳಂದು ಮಕುಟದೊಳಾಂತು ।
ಹರುಷದಿಂದೋಲಾಡುತೈತಂದ ಮಣಿರಥದ ಪೊರೆಗಾಗಲೊಲವಿನಿಂದೆ ॥
ಸರಭಸದಿ ಸ್ವರ್ಣಗದ್ದುಗೆಯಲ್ಲಿ ಪಾದುಕೆಗ ।
ಳಿರಿಸಿ ವಂದನೆಗೈದು ಮಗುಳೆಲ್ಲರೆಡೆಗೈದಿ ।
ಕರಕಲಿತಖಡ್ಗದಿಂದೆರಗಿ ಪಾರ್ಥಿವರಮಲಕುಲಥರ್ಮಮಂ ಮೀರದೆ ॥ (44)
ಸಾಮಂತರಿಂದಖಿಲಕಾರ್ಯಾರ್ಥಗಳನರಿದ ।
ಧೀಮಂತರಿಂದ ಪುರಜನ ಜಾನಪದದಿಂದ ।
ಲಾ ಮಹಾಂತನ ಚರಣಪಾದುಕಾವಂದನಂಗೈಸಿ ಜನ್ನೈಸಿ ಮನದಿ ॥
ಪ್ರೇಮಂದಳೆದು ತೇರಿನೊತ್ತಿನಲಿ ಹಯವೇರಿ ।
ಶ್ರೀಮಂತ ಭರತನೈದುತಲಿರಲ್ ತಮತಮ್ಮ ।
ಕಾಮಿತಗಜಾಶ್ವರಥಶಕಟಾದಿಗಳನಡರಿ ನಡೆವಗೆಲ್ಲರ್ ಹರುಷದಿ ॥ (45)
ಕಳೆದು ಕಾನನಗಳುಳಿದಖಿಳಪರ್ವತಗ ।
ಳಳಿದು ಪ್ರಯಾಗಕೈತಂದಾ ಭರದ್ವಾಜ ।
ಪಳಿವಾತಿನಧಿಪತಿಯು ನಿಳಯಮಂ ಸಾರಿ ಭಯಭಕ್ತಿಯಿಂ ನಮಿಸಿ ಬಳಿಕ ॥
ತಿಳಿವೆ ನಡೆದರ್ಥಮಂ ಕೇಳಿ ಮುನಿಪೋತ್ತಮಂ ।
ತುಳುಕುತಾನಂದಮಂ ತುಂಬಿ ಸುಖವೃಂದವಂ ।
ಜಲಜಾಪ್ತಕುಲಮಿತ್ರ ಸುಚರಿತ್ರನೊಡನೆಂದ ನಸುನಗುತ ಗೆಲವಿನಿಂದ ॥ (46)
ವಿಮಲಮತಿಕೃತಯುಗದ ನೃಪತಿಗಳೊಳಾವನುಂ ।
ಸಮನೆನಿಪ ಭವದೀಯಸಾಧುಚಾರಿತ್ರಕಂ ।
ಸುಮಗನಸ ಮಹರ್ಷಿಗಣ ಮುಮ್ಮೂರ್ತಿಗಳು ಸಹಿತ ಹರುಷಮಾನಸರಾದರು ॥
ಅಮರತೋಷಣೆಯಮಿತಶ್ರೇಯಸ್ಕರವನಿತ್ತು ।
ಶಮೆಯೊಳೂರ್ಜಿತಗೃವೃದೆನುತುಸಸಿರೆ ಜವದಿ ಪದ ।
ಕಮಲಂಗಳಗೆ ನಮಿಸಿ ಬೀಳ್ಕೊಂಡು ನಿಜಸೇನೆ ಸಹಿತ ನಡೆದಂ ಭರತನು ॥ (47)
ತ್ವರಿತಗತಿಯಿಂದೈದಿ ತರಣಿಸುತೆಯುಂ ದಾಂಟಿ ।
ಸುರನದಿಯನುತ್ತರಿಸಿ ಶೃಂಗಿವೇರದಿಗುಹನ ।
ಕರುಣದಿಂದುಪಚರಿಸಿ ನಿಜನಗರಿಯನೊಳ್ಪಡುಜ್ಜುಗದೊಳೈದುತಿರಲು ॥
ಪರಿವೇಷದಿಂದ ರಾಜಿಪ ರಾಜನಂದದಿಂ ।
ನಿರತಿಶಯತುಹಿನಪಿಹಿತಾದರ್ಶನದಿ ತೋರ ।
ದಿರುವ ನಗರಿಯ ವಿಟಪಿಗಳ ಕುರುಹಿನಿಂ ತಿಳಿದು ಸೂತನೊಡನಿಂತೆಂದನು ॥ (48)
ಇನನನಿಟ್ಟಿಸದಂಬುಜಾತಮೋ ತುಹಿನಕರ ।
ನನುವ ಕಾಣದ ಸಿತಾಂಭೋಜಾತವೋ ಯೆನಲ್ ।
ಘನಘನಘನಾಪಿಹಿತದಾಕಾಶದಂದದಿಂ ನಗರಿ ಕಣ್ಗೆಸೆವುತಿದೆಕೋ ॥
ವನಿತಾಸಮೂಹ ಕ್ರೀಡಿಸುವ ನೆಲ ಜವ್ವನಿಗ ।
ರನುವಿನಿಂದ ವಿಲಾಸಗೈವ ತಾಣಂ ತುರಗ ।
ಧ್ವನಿಗೈವ ಪಂಥಾನಮೆಲ್ಲ ನಿಪ್ಪ್ರಭೆಯಾಗಿ ಕಾಣುತಿದೆ ಮಂತ್ರಿತನಯ ॥ (49)

ರನ್ನದಂಗಡಿಗಳಂ ಬರದ ನೆಲೆ ಪೂವಸರ ।
ಚೆನ್ನಿಗರನೊಲಿಪ ಬೆಳ್ಳಿವೆಯನೆಲೆ ಪರಿಮಳಗ ।
ಳುನ್ನತಸ್ಥಾನಂಗಳಂದಲಂಕೃತಿವೆರಸಿ ಕಾಣದಿವೆ ಚಿತ್ರ ಕರನಿ ॥
ಸನ್ನುತಿಪ ವಂದಿಮಾಗಧರೊ ವರ್ಣರೆಡೆಯಾಡೆ ।
ರುನ್ನತದ ದೇವಾಲಯಂಗಳೊಳ್ ಶ್ರುತಿಮಧುರ ।
ಸಂನಾದ ಕೇಳದಿದೆ ಖಿನ್ನಚಾರಿತ್ರ ಯಶದಂಸಿನಂತಿದೆ ನಗರವು ॥ (50)
ಮಂದಿರಗಳೆಡೆಯೆಡೆಯೊಳೊಲಿದು ವಾದಿಪ ಶಾಸ್ತ್ರ ।
ವೃಂದಮಲ್ಲಲ್ಲಿ ತರ್ಕಪರ ಸಲ್ಲಕ್ಷಣದಿ ।
ಪೊಂದಿ ಪೇಳುವ ನಿಗಮಮಾಗಮಂಗಳ ಕ್ರಿಯಾತಂತ್ರಗಳ ಬೋಧಿಸುವರ ॥
ಸಂದಣೆಗಳಲ್ಲದಿವೆ ಶಸ್ತ್ರಾಸ್ತ್ರದಭ್ಯಾಸ ।
ದಂದ ವರಗಜವಾಜಿಯಾನದಾರೋಹಣದ ।
ವೃಂದ ವಿರಹಿತವಾಗಿ ನಿಶ್ಶಬ್ದದಂಬುಧಿಯೊಲಿದೆಕೊ ಪಟ್ಟಣ ನೂತಜ ॥ (51)
ಒಂದೆಸೆಯಲಂಕರಣವೆತ್ತ ಭದ್ರೇಭಂಗ ।
ಳೊಂದೆಸೆಯು ಶೃಂಗಾರಕಲಿತಾಶ್ವಸಂದೋಹ ।
ವೊಂದೆಸೆಯು ರತ್ನಮಯಪೊಂದೇರ ಗೊಂದಣಂ ಮಣಿಖಚಿತಕಟಕಂಗಳು ॥
ಒಂದೆಡೆಯು ಚದುರಾಂತ ಯಾನಸಂತತಿಗಳಂ ।
ಬಂದಖಿಳಮಕುಟವರ್ಧನರೆಂದಿನಂವದಿಂ ।
ದಂದವಡೆದೆಸೆಯುೀ ರಾಜಮಂದಿರದೆಡೆಯು ನೂತ ನೋಡ್ಪೈ ವಿಭವಮಂ ॥ (52)
ಅರಸನೈತರುವಾಗ ಕರುವಾಡವಗ್ರದಿಂ ।
ತರುಣಿಯರ್ ಚೆಲ್ಲ ವಾಚಾಲಲಾಜಂಗಳುಂ ।
ಪರಿಪರಿಯ ಫಲವೆರಸಿ ಮಂತ್ರಾಕ್ಷತೆಗಳೀವ ವಿಪ್ರಜನಸಂದಣಿಗಳುಂ ॥
ಕರವೆತ್ತಿ ಬಿರುದನುಘ್ಘಡಿಪ ಪಾಠಕ ಜನರ ।
ನೆರವಿ ಕಂಗೊಳಸದಿದೆ ಯೆನುತ ಮರುಗುತ ಪೊಕ್ಕ ।
ನರಮನೆಯು ಪಾದುಕೆಗಳಪ್ಪ ಮೂರ್ಧ್ನಿಯೊಳಮರತತಿ ನೋಡಿ ಹಿಗ್ಗುವಂತೆ ॥ (53)
ಮಾತೆಯರ ಮೃದುನುಡಿಯ ಲುಪಚರಿಸುತಲತುಲಸ ।
ಪ್ರೀತಿಯಿಂದರಮನೆಯೊಳಿಪ್ಪ ಸಂತಸದಿ ರಘು ।
ಜಾತ ಸಭೆಗೈತಂದು ನೆರೆದಮಾತ್ಯರ ಗುರುಗಳೆಡೆಯೊಳಾಸಿರ್ದಂ ಪ್ರಿಯದೊಳು ॥
ಸೀತಾರಮಣ ನಿರ್ದೋಷದೀ ರಾಜಧಾನಿಯು ।
ಲ್ಲಾತ ಸಂತೋಷದಿಂದಾನಿರಲ್ವೇಳ್ಕು ವಿ ।
ಖ್ಯಾತನಗರಿಯೊಳಲ್ಲದಾನಿಪ್ಪುದುಂ ಸಲ್ಲ ನಾಧುಸಮ್ಮತಮಿದಲ್ಲ ॥ (54)
ಚರಣಸೇವೆಯೊಳಿರುಳು ಪಗಲೆಂಬ ಭೇದಮಂ ।
ಮರೆದನಾಹಾರದಿಂ ನಡೆದವೃತ್ತಾಂತ ಮಂ ।
ತ್ವರಿತದಿಂ ಬಿನ್ನವಿಸಿ ಪಾದದಪ್ಪಣೆವಿಡಿದು ಪತಿಕಾರ್ಯಮನ್ನೆಸಗಲು ॥
ಸರಯೂನದೀತಟದೊಳಪ್ಪ ನಂದಿಗ್ರಾಮ ।
ಪೊರೆಯೊಳೀ ಪಾದುಕೆಗಳಪ್ಪ ಪೂಜಿಸಿ ಪೋದ ।
ಪೆರೆಯಲೆನ್ನಯ ಮನಂ ಸಂತಸಂಗೊಳುತಿದೆಕೊ ಯೆನುತೊರೆದು ನಡೆದನೊಲಿದು ॥ (55)

ನೋಡುತವಿನಾಭಾವದಿಂದೆಸೆವ ಭಕುತಿಯಂ।
ಮೂಡಿದಾನಂದದಿಂದಖಿಲಋಷಿಗಣವಿಪ್ರ।
ರಾಡಿದರನೇಕವಿಧವಿಂ ಧರಾವಲಯಮಂ ಭುಲ್ಲವಿಸಿ ನಲಿವಂದದಿ॥
ಮೂಡಿದರಪಾರನುತಿಗಳ ದೇವತತಿಯುಂ ಸುಧೆ।
ಯುಾಡಿದಂದದಿ ನಾರದಾದಿಗಳ್ ಸಂತಸಂ।
ಗೂಡಿ ಪಾಡಿದರೊಲಿದು ಸಚ್ಚರಿತೆಗಳ ಭರತ ನಡೆಯುವಾಶ್ಚರ್ಯಗಳನು॥(56)
ಪರಿಮಳ ಭೂಷಣಾಯತಮೆನಿಸಿ ಪಾವುಗೆಯ।
ಹರುಷದಿಂ ಶತ್ರುಘ್ನನೊಡನೆ ಗಮಿಸಿದ ನಾರ।
ಕರೆಯುದರೆ ಭರತ ನಂದಿಗ್ರಾಮಕತಿವೇಗಭಕ್ತಿರಸಮಂ ತುಳ್ಕುತ॥
ಅರಸನೈದಿದನೆಂದು ಗುರುವಸಿಷ್ಠಾದಿಮುನಿ।
ವರರಮಾತ್ಯರು ಪೋಗಿ ಕೆಲಬಲದೊಳೊಪ್ಪಿದರ್।
ಸುರಪನೆಡಬಲದೊಳಾರಾಜಿಪ ಬೃಹಸ್ಪತಿಪ್ರಮುಖ ದ್ವಿಜಗೆಂಬಂದದಿ॥ (57)
ಸಾಧುಜನಸಮ್ಮತದೊಳೊಂದರಮನೆಯ ರಚಿಸಿ।
ಮೋದದಿಂ ಪಟ್ಟವಣೆಯೊಳು ಪಾವುಗೆಯನಿಟ್ಟು।
ಸಾದರದಿ ಪಟ್ಟಾಭಿಷೇಕವಂ ವಿರಚಿಸಿಯೆ ಮುಂಗಡೆಯ ವೇತ್ರವಿಡಿದು।
ಶ್ರೀಧವ ಸುರೇಶನುತ ಜೀಯ ಪಾಯಾವಧಾರು।
ಮೇದಿನೀಯರಸ ದಯಗೈವುದೆನುತಂ ಸಮುಖ।
ದಾಧಿಪತ್ಯತೆಯೊಂತು ನಿಂತು ವೋಲಗಗೊಡತಲಿರ್ದ ಭರತಂ ಭಕ್ತಿಯಿಂ॥ (58)
ಆವ ಕಾರ್ಯವನೆಸಗಲದ ಪಾದಕೆಚ್ಚರಿಸು।
ತಾವಗಂ ನಡೆವುದಂ ಪಾದದಪ್ಪಣೆಯೆನುತ।
ಕೋವಿದರು ನುತಿಪಂತೆ ಕೊಡುವ ಪತ್ರಂಗಳಗೆ ಶ್ರೀರಾಮ ಪೆಸರನಿಟ್ಟು॥
ಆವಸುಧೆಯಂ ನಹುಷ ನಳದಿಳೀಪಾದಿಗಳ।
ತೀವಿಗಿಮ್ಮಡಿಯೆನಿಸಿ ಪಾಲಿಸುತ ತಾಂ ಶಿಷ್ಯ।
ಭಾವದಿಂದಿರ್ದ ಭರತನ ಸಾಧುಚರಿತೆಯಂ ಪೇಳಲಾರ್ಗಳವಪ್ಪುದು॥ (59)
ಹಾರೈಸದಲೆ ಸಿರಿಯು ಹಗಲಿರುಳು ಭಕ್ತಿಯ ವಿ।
ಚಾರದಿಂ ತನುಧನಮನಂಗಳರ್ಪಿತಗೈದು।
ವೀರವ್ರತವಂ ಪಿಡಿದು ಚೀರವಸನವ ಧರಿಸಿ ಪತ್ರಪರ್ಣಾಹಾರದಿಂ॥
ಕಾರಣಾತ್ಮಕನಂಘ್ರಿಪಂಕಜವ ಹೃದಯದಾ।
ಗಾರವೆಂದೆನಿಸಿ ಸಂತಸದಿಂದಲಾಳದಂ।
ಧಾರಿಣಿಯ ರಘುಭಗೀರಥರಿಂದಲೈವಡಿಯೆನಲ್ಕೆ ಭರತಂ ಮುದದೊಳು॥ (60)
ಪಗಲಿರುಳು ಸತ್ಕಥಾಸಲ್ಲಾಪಮದರಿಂದ।
ತೊಗುವಿಗೆಯ ಶ್ರೀರಾಮ ಕೀರ್ತನಂ ತದಾಖ್ಯಾನ।
ಮಿಗೆ ಸವಾಧಿಗಳಂದ ರಾಮಾತ್ಮನೆಂದಿನಿಸಿ ಭೇದಮಿನಿಸಂ ತೋರದೆ॥
ಸೊಗಯಿಸಿದ ರಾಮಪುರದರಸ ಮಗುಳ್ಚಿತಪ್ಪ।
ಬಗೆಯಂ ನಿರೀಕ್ಷಿಸುತಲಿರ್ದ ಭರತನ ಚರಿತೆ।
ಜಗತಿಗತಿಪಾವನಂ ಪೊಗಳಲಾ ದೇವನಂ ಫಣಿಪತಿಗಸಾಧ್ಯ ಮಗಜೆ॥ (61)

(ಸಂಧಿ 34 ಪದ 1533)

## ಮೂವತ್ತ್ಯೆದನೆಯ ಸಂಧಿ

ಸೂಚನೆ ॥ ಶರಣಾಗತತ್ರಾಣನೆಂಬ ಬಿರುದಂ ಮೆರೆಯೆ ।
ಕರುಣಾಳುಗಳ ದೇವ ರಘುನಾಥ ಪ್ರೇಮದಿಂ ।
ಕರುಣ ಸೌಮಿತ್ರಿಗಂ ವಿಸ್ತರಿಸಿ ಬೋಧಿಸಿದ ಪರಮತತ್ವದ ಪರಿಯನು ॥

ಹೈಮವತಿ ಕೇಳ್ ಭರತ ನಿಜನಗರಂಗೈದಲ್ಕೆ ।
ಪ್ರೇಮದನುರಾಗದಿಂ ಸೌಮಿತ್ರಿ ಸದ್ಗುಣ ।
ಸ್ತೋಮಗಳ ನೆನೆನೆನೆದು ತೊಲಳುತಿರೆ ನೋಡುತಂ ರಘುವೀರ ಕರೆದು ಪ್ರಿಯದಿ ॥
ಬಾ ಮಗನೆ ಭವದೀಯ ಚಿತ್ತಾನುತಾಪ ಬಲು ।
ಭ್ರಾಮಕಂಗೊಳಪುದಿದು ಬಯಲಮಾಯಾವರಣ ।
ತಾಮಸವಿದಲ್ಲದೊಳಪೊಕ್ಕು ನೋಡಲ್ ಕ್ಲೇಶ ನಿಲವುದಕೆ ತಾಣವಿಲ್ಲ ॥ (1)

ಎನುತೊರೆಯೆ ಸೌಮಿತ್ರಿ ರಾಮಭದ್ರನ ಚರಣ ।
ವನಜಗಳಗಭಿನಮಿಸಿ ದೇವ ಮನೆ ಧನವೆಂಬ ।
ನೆನಹಿದೆಂತುಂ ಪೋಗಿ ನಿರತಿಶಯವಾನಂದದಿಂದಿರ್ಪ ಸುಖದೊಳಾತ್ಮಂ ॥
ಜನನಮರಣಗಳಾಟ ಕೋಟಲೆಗಳಂಕ್ಲೇಶ ।
ಒನುರಾಗಪೋಪ ವಿಧವೆಂತದಂ ವಿಸ್ತರದ ।
ಲೆನಗೊರೆದು ಕೃತಕೃತ್ಯನಂ ಮಾಳ್ಪುದೆಂದೆರಗಿ ಬಿನ್ನಪಂಗೈದ ನೊಲಿದು । (2)

ಆದೊಡಾಲಿಸು ನಿತ್ಯ ನಿರುಪಮ ನಿಜಾನಂದ ।
ಬೋಧಮಯ ಚಿದ್ರೂಪ ಯೋಗಮಾಯೆಯ ಸೃಜಿಸಿ ।
ನಾದರದೊಳದ ನಚ್ಚಿ ಮಚ್ಚುತೀಶ್ವರನೆನಿಸಿ ಲೀಲಾವಿಲಾಸದಿಂದ ॥
ಈ ಧರೆಯೊಳಾಮಾಯೆಗಖಿಲರೂಪುಗಳೀವು ।
ತಾದಾರಸಂಗದಿಂದಮಿತವಿಕೃತಿಗಳಾಂತು ।
ಬೋಧಾರಹಿತನಾಗಿ ಪಾಪ ಧರ್ಮದ ಲೇಪಕೊಳಗಪ್ಪ ಜೀವ ನೆನಿಸಿ ॥ (3)

ಕೃತ ಪುಣ್ಯಪಾಪಗಳ ಕತದಿಂದ ಪರಲೋಕ ।
ದತಿಶಯದ ಸುಖಕಷ್ಟಗಳನುಂಡು ಲೋಕಸಂ ।
ಸ್ಥಿತಿಯಾಳದು ವಾಯುಪಥವಿಡಿದು ಬಂದಾ ಶ್ರ್ಯಪ ಮುಗುಳಭ್ರಮಂಡಲವನು ॥
ಕ್ಷಿತಿಗಿಳದು ಪನಿಯೊಡನೆ ಸಸ್ಯಾದಿಗಳೊಳಿರ್ದು ।
ಜತೆಗೊಂಡು ಧಾನ್ಯಮಂ ಭುಕ್ತಿಮಯದಿಂ ಜೀವ ।
ತತಿಗಾನುರಾಗಮಂ ಬೀರುತ್ತ ಶುಕ್ಲಮಯನಾಗುತುದರದೊಳರ್ಪನು ॥ (4)

ಋತುಸಮಯದೊಳಗೆ ಸ್ತ್ರೀ ಪುರುಷಯೋಗದಿ ಯೋನಿ ।
ಪತನಮೆನಿಸಿದ ಶುಕ್ಲ ಶೋಣಿತದೊಳೊಡಗೂಡಿ ।
ಯಾತನಮಿಲ್ಲದೆ ಪ್ರಥಮದಿವಸ ಬುದ್ಬುದದಂತೆ ತೋರ್ಪುದೇಳನೆಯ ದಿನಕೆ ॥
ಕೃತಕಮೆನೆ ಗೋಳಕಾಕೃತಿಯಿಂದ ಶೋಭಿಸುವ ।
ಪತಿಶಯದ ಲೋಹಿತದಿ ಬಲಿದು ಬಲದಳ್ಳೆಯೊಳು ।
ವಿತತಮೆಂಟಂಗುಲಿತಮಾಗಿ ತೊಡೆ ಭುಜಗಳಂ ತೋರ್ಪನರುವತ್ತು ದಿನಕೆ ॥ (5)

ಕರಚರಣಗಳು ಕಕ್ಷಕಂಧರಗಳುಂ ಸವಿಾ।
ಕರಿಸಿ ಸಂಧಿಗಳೆಸೆವ ನಾಸಿಕ ಶ್ರುತಿ ನೇತ್ರ।
ಮೆರೆವ ಗುದ ಗುಹ್ಯಂಗಳಾಕಾರವೊಂದೆನಿಪ ಮೈಯ್ಯ ತೊಂಭತ್ತುದಿನಕೆ ॥
ಕರಣ ಮುಖ ಮೇಹನ ಗುದಾಕ್ಷಿನಾಸಾಶ್ರುತಿಗ।
ಳುರವುಂ ತೋರಲಾಪಿಂಡವ್ರೊಗ್ಗೇಣಿ।
ಗಿರವಾಗಿ ಜಠರಾನಲನ ಶಿಖೆಯೊಳ್ಗಂ ಬೆಳೆದು ಬಹುದು ತಿಂಗಳುನಾಲ್ಕಕೆ ॥ (6)
ಅಂಗುಲಿಗಳುಂ ಕಟಿನಿಟಿಲ ಚುಬುಕಸ್ತನವು।
ಭಂಗುರೋದರ ಪಾರ್ಶ್ವ ಕಕುದಗಂಡಂಗಳುಂ।
ಸಂಘಟಿಪವೈದನೆಯ ತಿಂಗಳೊಳ್ ಗರ್ಭಸ್ಥವಾದ ಪಿಂಡಕ್ಕೆವೈದೆ ॥
ಪೊಂಗುವವಯವಸಂಧಿ ಕಚ ನಿಕರ ನಖರದ ಬೆ।
ಡಂಗಾಂತು ತೋರುವದು ನಿರಯಸನ್ನಿಭವೆನಿಸಿ।
ಕಂಗೊಳಿಪ ಜಠರಪ್ರದೇಶದೊಳಗಾರನೆಯ ತಿಂಗಳೊಳು ಪಿಂಡವಿಂತು ॥ (7)
ವಿವಿಧಧಾತುಗಳ ನವಚಕ್ರಂಗಳಹ ತಾಣ।
ವವರ ಸಂವರ್ತಿತೆಗಳಲು ನರಂಗಳು ಬಲಿದು।
ಜವದಿಂದವ್ರೊಪ್ಪ ವಂಗೋಪಾಂಗ ಶಿಶುರೂಪವಾಗಿ ಗರ್ಭದಿ ಪೊರಳುತ।
ನವರಸಾನ್ನವ ಕೊಳಲ್ ವಾತೆ ರಸ ಪೊಕ್ಕುಳನ।
ವಿವರದಿಂದೊಳಪೊಕ್ಕರಾ ತಂಪಿನಿಂ (ಬ) ಬೆಳೆದು।
ತವೆ ತೋರ್ಪುದೇಳನೆಯ ತಿಂಗಳಗಾಪಿಂಡವೇನೆಂಬೆ ನಚ್ಚರಿಯನು। (8)
ನೆಲ ಗುದಂ ಜಲ ಶೀರ್ಷವಗ್ನಿ ನಾಭೀಕುಹರ।
ಜಲನ ಹೃದಯಸ್ವರ ಸ್ವಾಕಾಶವುದರಿಂದ।
ನಿಲನು ಹೃದ್ದೇಶದೊಳ್ ಬಲಿದನ್ನರಸವನುಂ ಕೊಡುತ ಜಠರಾನಲನಿಗೆ ॥
ಚಲಿಸುತಿರೆ ಸರ್ವಾಂಗ ಸಂಧಿಗಳಲನುಪದಂ।
ಬಲುರಕ್ತಮೂತ್ರಗಳು ವಿವರದೊಳ್ ಬರೆ ಕಷ್ಟ।
ಕಲನೆಯಿಂದೊದರುತಿಹ ಕರಪಾದಗಳ ಶಿಶುಕನೆಂಟನೆಯ ತಿಂಗಳೊಳಗೆ ॥ (9)
ಹೇಸಿಕೆಯು ಹೆಬ್ಬಡಿಕೆ ಕೀವು ರಕ್ತದ ಕುಂಡ।
ವಾಸು ಸುತ್ತಿರೆ ಮುತ್ತಿ ಕಡಿವ ಕ್ರಿಮಿಸಂಕುಲಾ।
ಯಾಸದಿಂದಳಲಿ ಬಳಲುತ ಸಂಕಟಂಗೊಳುತಲೊಮ್ಮೊಮ್ಮೆ ಸಂಚರಿಸುತ ॥
ಬೇಸತ್ತು ನಿರಯದನುಭವಗೈಯಲಾರದೆ ನಿ।
ರಾಸವುತಿಯಿಂ ಜನ್ಮಕರ್ಮಗಳ ನೆನೆನೆನೆದು।
ಕೂಸು ತನ್ನೊಳ್ತಾನೆ ಹಂಬಲಿಪ ತೆರವದೇನೆಂಬೆ ನಚ್ಚರಿಯ ಪರಿಯ ॥ (10)
ನಿಂದಿಸುತ ಹರಿಹರರ ನಿಜಸತಿಯನುಳಿದು ಪರ।
ಸುಂದರಿಯರಂ ಬಯಸಿ ಸಚ್ಛಾಸ್ತ್ರಗಳ ಜರೆದು।
ಬಂಧುರದ ಭೂಸುರದ್ವೇಷದಿಂ ಕರಿಗೊಂಡು ಗುರುವನರನೆಂದು ತಿಳಿದು ॥
ಇಂದಿರೇಶನ ಭಕ್ತರಂ ತಿರಸ್ಕೃತಗೈದು।
ಕುಂದದೆ ತತ್ಕಥಾಶ್ರವಣವುಂ ಪಳಿದ ಕತ।
ದಿಂದಲಡಸಿತು ನಿರಯ ನಿರ್ಭರ ಗರ್ಭಯಾತನೆ ಮಹೇಶ ಹಾಯೆಂದಳಲ್ವುದು ॥ (11)

ಪರಮಕರುಣಾವನಧಿ ಹರಿ ಯೆನ್ನ ಯಾತನೆಯ ।
ನರಿದು ಪರಿಹರಗೈದು ನರಕಬಾಧೆಯು ಬಿಡಿಸಿ ।
ಧರಣಿಯಂಕಾಣಿಸಲ್ಕನುದಿನದಿ ಶುಭನಾಮಕೀರ್ತನಂಗೈದು ಮುದದಿ ॥
ಚರಣಸೇವನೆಗೈದು ಸಾಧುಜನರೊಳು ಬೆರೆದು ।
ನಿರತಪೂಜಾದ್ಯಮಿತಭಕ್ತಿಯಿಂ ಮೆಚ್ಚಿಸುತ ।
ಪರಿವೆ ಭವಬಂಧವಂ ಸ್ಮರಿಸೆ ಗರ್ಭದ ನೋಯನೆನುತುಳಿವುದದು ಮನದೊಳು॥(12)
ಇಂತನಂತಪ್ರಲಾಪನಗೈವುತಲೆ ತನ್ನೊ ।
ಳಂತರಾತ್ಮನ ನೆನವುತಳುತಿರಲ್ಕನಿತರೊಳು ।
ಚಿಂತಾಯಕನ ನೇಮವಿಡಿದು ಯೋನಿದ್ವಾರದಿಂದಲೊಳಪೊಕ್ಕು ಜವದಿ ॥
ಕೊಂತಿ ಕೊಂಡಿಹ ಮಾಸಿನೊಳಗಿರ್ಪ ಶಿಶುವನ ।
ತ್ಯಂತ ಬರಸಿಡಿಲಂತೆ ಪೊಡೆದು ಭ್ರಾಮಕಗೊಳಿಸಿ ।
ತಾಂ ತಿರುಗಿಸುವದೇನ ಪೇಳ್ವೆ ಸೂತ ಸಮೀರನುರುಬೆಯಂ ಹರಿಯಾಜ್ಞೆಯ ॥ (13)
ಆ ಮಹಾಯೋನಿಯಂತ್ರವ ಪೀಡನಾಬಲದಿ ।
ಭ್ರಾಮಕಂಗೊಂಡು ವಿವರದೊಳಳದು ಪೊರಬಿದ್ದು ।
ಭೂಮಿಯೊಳ್ ಕೆಡೆದಪುದು ಪ್ರಾರಬ್ಧಫಲದಿಂದ ಲೇಶ ಕಂಪದೆ ಕುಂದದೆ ॥
ಕಾಮಜನಕನ ಮಾಯೆ ಕಪಿಯಲಾರೋಹಿತ ।
ಸ್ತೋಮದೊಳು ಜಂಬಾಲಕಲಿತರ್ಧ್ಯುಷಮೆಂಬಂತೆ ।
ತಾಮಸದ ಮೂರ್ಛೆಯಿಂದರೆನಿಮಿಷ ಮೈಮರೆದು ಕೆಡೆದಿರ್ಪುದೇಂ ಪೇಳ್ವೆನು ॥
ಘನವಾಗೆ ಶೋಣಿತಂ ವನಿತೆಯುಪ್ಪಳು ಶುಕ್ಲ । [(14)
ಘನಮೆನಿಸೆ ತನಯನಹ ನುಭಯಸಮನೆಂದೆನಿಸೆ ।
ಜನಿಸುವ ನಪುಂಸಕಂ ತಂದೆತಾಯ್ಗಳ ಬಯಕೆಯಿಂದ ಕುಬ್ಜಂ ಕೇಕರಂ ।
ತನುಕಾರ್ಶ್ಯ ಪೀನತೆಯನನುಕರಿಸಿ ಪುಟ್ಟುವರು ।
ಜನದ ನಿಜನಿಜಕರ್ಮದಿಂದ ನಾನಾಯೋನಿ ।
ಯನುಸಾರಿ ಪಲವುವಿಧ ಸುಖದುಃಖಗಳನುಂಬರೇನೆಂಬೆ ಮರುಳರಿವರ ॥ (15)
ಪಲಪರಿಯ ಯೋನಿಗಳೊಳುದಿಸಿ ನಾನಾಚಿತ್ರ ।
ಕರದೂಟಗಳನುಂಡು ದಣಿವಿಲ್ಲದಲೆ ತನ್ನ ।
ಮರೆದಕೃತ್ಯಗಳೆಸಗಿ ನರಕಯಾತನೆಗಳನ್ನನುಭವಿಸಿ ಮನದೊಳಡದೆ ॥
ಮರುಳುತನದಿಂದಧಿಕಭೋಗಗಳ ಬಯಸುತಂ ।
ಕುರಿಗಳಂದದಿ ಸಿಲ್ಕಿ ತರಣಿ ಸಕ . . . . ಳಾಗಿ ।
ನರಳುವರದೇನೆಂಬೆ ವಿಷ್ಣುಮಾಯಾಮಹಿಮೆ ಯೆಂತುಟೋ ಪೇಳಲರಿದು ॥ (16)
ಪಗೆಯ ಮಂದಿರವಾಹ ಮಾರಿಯಿರುತಿಹ ಮನೆಯೊ ।
ಳೋಗುವಿಗೆಯ ಸಲಿದಾಟ ಬೇಟಶಾಖಾಮೃಗದ ।
ವಿಗೆ ಸೀಧುಸೇವಕನ ಶೃಂಗಾರಕರ ನೋಟ ಕಲಹಕೇತನಮಿತ್ರತೆ ॥
ಮೃಗತೃಷ್ಣೆಯತಿಶಯಂ ಜಾರೆಯೆಸಗುವ ಪ್ರೀತಿ ।
ಸೊಗಯಿಸುವ ಖಲನುಡಿಯ ಸೊಂಪನನುಕರಿಪುದೀ ।
ಹಗರಣದ ಸಂಸಾರಸುಖವು ಬೀದಿಯೊಳಟ್ಟ ಸೊಡರಂತದೇ ಪೇಳ್ವೆನು ॥ (17)

ಮರುಮರೀಚಿಕದ ಸಿರಿ ಮರುತವೈಭವದ ಪರಿ ।
ಮೆರವಮಿಂಚುಗಳ ನಿರಿ ಮುಗಿಲವೈಖರಿ ಕನಸಿ ।
ಸುರುತರದ ಭೋಗಪ್ರೋಗಂ ಪುರಂದರಜಾಲದಿಂಪವಗ್ರಹದ ಸೊಂಪು ॥
ನಿರುತವೆನ್ನುತ ನಚ್ಚಿ ನೀಚಸುಖಗಳ ಮೆಚ್ಚಿ ।
ಮರುಳಬುದ್ಧಿಯು ಮುಚ್ಚಿ ಮರುಗಿ ಪಲ್ಗಳ ಬಿಚ್ಚಿ ।
ನರಳುವರು ಸಂಸಾರಘೋರಾಟವಿಯು ಕಳೆವುಪಾಯವೊಂದಂ ತಿಳಿಯದೆ ॥ (18)

ಬಿಳಿಗಲ್ಲಪುಡಿಯು ಮೊಸರೋಗರವೆನುತ್ತೆ ಪ್ರಿಯು ।
ದಳಿಮಂಡು ಪ್ರಾಣಗಳ ಬಿಡುವ ಹರುಕನ ತೆರದೊ ।
ಳಳಿಯೊಳಗೆ ಸಂಸಾರಸುಖ ನಿತ್ಯವೆಂದೆನುತ ಬಯಲಾಸೆಯಿಂದ ಬಳಲಿ ॥
ಕಳಿಗುಂದಿ ಕಾರ್ಪಣ್ಯಗೊಳುವ ಪಾಮರಜನರಿ ।
ಗಳವೆ ಬೋಧಿಸಲು ತಲೆ ಹುಳುತ ಸೊಣಗನ ತೆರದಿ ।
ತೊಳಲುವರು ಮುಂಗಾಣದಲೆ ಸಗ್ಗನರಕಗಳ ದೂರಪಂಥಾನವಿಡಿದು ॥ (19)

ಹುಸಿಯೆನಿಪ ಸಂಸಾರ ದಿಟವೆಂದು ನಂಬಿ ಸಂ ।
ತಸಗೊಂಡು ಹಿಗ್ಗುತಿರೆ ಜನನಮರಣಾದಿಗಳ ।
ಹಸರ ಹೋಗದು ಸಕಲ ಶಾಸ್ತ್ರಂಗಳೋದಿನಿಂದುಪಕಾರ ಮಿನಿತಾಗದು ॥
ಸಸಿನೆ ಸದ್ಗುರುಚರಣಗಳ ಪಿಡಿದು ಭವರೋಗ ।
ವೆಸರ ಕೆಡಿಸುತ್ತಲಾನಂದದಿಂ ಪ್ರಾರಬ್ಧ ।
ದೆಸಕಮನ್ನುಂಡುಂಡು ಸುಖದೊಳಿಪ್ಪುದೆ ಬುದ್ಧಿ ಪರದ ಪಂಥಾನವನಘ ॥ (20)

ಮರುತ ಮನ ಬಿಂದುಗಳ್ ಮುಖ್ಯವಾಗೀದೇಹ ।
ದಿರವೆನಿಸಿ ಪೊರಗೊಳಗೆ ಬಾಧಿಸುವ ಪದರಿಂದ ।
ಮರುತಾದಿಗಳ್ ಜೈಸಿದಾತ ಭವಬಂಧಗಳ ನೆಗ್ಗೊತ್ತಿ ಸುಖದೊಳಿರ್ಪಂ ॥
ಬರಿದೆ ವೇದಾಂತವಾಕ್ಯಗಳಾಶೆಯಿಂ ಬಳಲ ।
ಲರುಗುವದೆ ಮಾಯೆ ಮಾತಿನ ಮುಕ್ತಿಯಾನಂದ ।
ಕರವೆನಿಸದಾಗರ್ಗೆ ಮೊದಲಿವಂ ಗೆಲವೇಳ್ಕು ಮುಕ್ತಿಯಂ ಕಾಂಕ್ಷಿಸುವರು ॥ (21)

ಪಿಡಿದು ಮೂಲಾಧಾರದಿಂದ ಲಾಶಿಖೆಗಂಟು ।
ತೊಡಸೆ ಪ್ರತ್ಯಂಗಗಳ ಶೋಧಿಸುತ ಸಂಚಲಿಸಿ ।
ಒಡವಖಿಲವ್ಯಾಪಿಯೆಂದೆನಿಸಿ ಕರಣಂಗಳಂ ಸಾಧ್ವಸಾರ್ಥಗಳ ಮಾಡಿ ॥
ತೊಡರಿ ಸಂಚರಣೋದನಭ್ರಮಣೆಯಂ ಗಗನ ।
ಕಡೆಯದಾಕುಂಚನದಲೆನಿಪ ಕಮಲಗಳಿಂದ ।
ಲಡಿಗಡಿಗೆ ವೈಕಾರಗೊಳಪುದನಿಲನ ಕೃತ್ಯ ಸತ್ಯ ಜೀವರ ಸಂತೆಗೆ ॥ (22)

ಬೆರೆದಂತೆ ಮೈಮುರಿವ ಬೆಬ್ಬುರಿಸಿ ಪಲ್ಗಿರಿವ ।
ಮರದಂತಿರುವನೊಮ್ಮೆ ಪರಿದು ಬೆಚ್ಚುತಲಿರುವ ।
ತರತರಿಸುವಂ ಪಾರಿ ಬೀಗಿ ತೊಡೆವರೆಗುಟ್ಟಿ ನಗುವ ನರ್ತನವೆಸಗುವಂ ॥
ಪರಿದು ಕರಿಕರಿಗುಟ್ಟಿ ಕಣ್ಮೀಟುತಾಕಳಸಿ ।
ಮರುಕಿಸುತ ಮುಸುಡಿನೊಳ್ ತೂಕಡಿಸುತೊಲಿದಾಡಿ ।
ಪರಿಪರಿಯ ಚೇಷ್ಟೆಗಳ ತೋರುವಂ ಮಾರುತನ ಬಲವಶಂವದತೆಯಿಂದೆ ॥ (23)

ಪಸರಿಸುತ ರಸ ದುಧಿರ ವಸೆ ಕುಂಡಪುಲಗಳಂ ।
ಸಸಿನೆ ಪೋಷಿಸುತ ದಶವೃತ್ತಿಯನ್ನಾಂತು ನರ ।
ಪಶುಸುರಾಸುರಮೂರ್ತಿ ಪಾಂಚಾಲಿಕೆಗಳ ಬಿಡದನುದಿನದಿ ಕುಣಿದಾಡಿಸಿ ॥
ಹಸನ ರೋದನ ಸ್ವಪ್ನ ವೈಭವಂಗಳ ತೋರಿ ।
ಮಿಸುಕಲೀಯದೆ ತನ್ನ ವಶವರ್ತಿಗೈದು ಭಂ ।
ಗಿಸುವನಿಲನಂ ಪಿಡಿದು ಬಾನೆಡೆಯೊಳಡಲಲ್ಲಿ ಸುಮ್ಮನಹ ಸುಖಮಪ್ಪುದು ॥(24)
ಮನವೆನಿಪಶಾರ್ದೂಲ ಬಹುವಿಧ ಪ್ರಕೃತಿಗಳ ।
ಬನಗಳೊಳಗಾವರಿಸಿ ಮಾನನ ಮೂರ್ಛಾಜಡತೆ ।
ನೆಸಹು ಮರವೆ ವಿಕಾರವೆನಿಪ್ಪೈದು ಚೇಷ್ಟೆಗಳಲಖಿಳದೇವಾಸುರರನು ॥
ಜನಕೆ ನಾನಾಪರಿಯು ಕುಣಿಸಿ ಕೂಗಿಸಿ ಕೊಡಹಿ ।
ಕೆನಿಸು ಭ್ರಾಂತಿ ವಿಕಾರಿ ಎನಿಸುತಂ ಮುರಿಮುರಿದು ।
ತಿನುತಿಹುದುಖಾಯುಸಾಸಿರಗಳೆಸಗಲು ಸಿಲುಕದಳಲಿಪುದದೇನೆಂಬೆನು ॥ (25)
ಯೋಗಿಗಳ ತಪದಿಂದ ಕೆಲಸಾರ್ಚೆ ವೈಸಿಕವಿ।
ರಾಗಿಗಳ ಧ್ಯಾನದಿಂ ಪರೆದೆಗೆದು ಬಿಸುಟಾಗ ।
ಲಾಗವಿಾಕರಕ್ರಿಯಾಭ್ರಂಶವೆನಿಸುತ ತತ್ವವಿದರ ಚಾಪಣೆಯು ಕಳೆದು ॥
ಬೀಗಿಸಿ ಸಮಾಧಿಯಂ ಮಾನಿಗಳ ಶುನಿಯಂತೆ ।
ಕೂಗಿಪ್ಪುದು ಮನವೊಂದೆ ಪದುಳದಿಂದೊಳಗಿರಲು ।
ಭೋಗಿಯುಹ ಪೊರಸೂಸೆ ಬಾಹ್ಯನಹ ಸುಖದುಃಖ ಕಾರಣಂ ಚಿತ್ರಮಲ್ತೆ ॥(26)
ಪಲಲ ಮೇದೋಮಜ್ಜ ರಕ್ತಶಲ್ಯಾದಿಗಳ ।
ಲೊಲಿದು ವ್ಯಾಪಿಸಿ ಭುಕ್ತಮಾದ ಷಡ್ರಸದಿಂದ ।
ಬಲಿದು ಸರ್ವಪ್ರಾಣಿಗಳ ದೇಹಕಾರಣತೆಯಾಂತು ಮನದಾಸೆವಿಡಿದು ॥
ಕುಲಛಲಂಗಳು ಸಾಧ್ವಸಾಧುಕೃತ್ಯಂಗಳುರು ।
ಕಲನೆಯಂ ಬಿಟ್ಟು ಚಾಪಲ್ಯದಿಂ ತೊಳಲಿಪ್ಪುದು ।
ಲಲನಾನುರಾಗದಿಂದಿರುವೆ ಬದಿಪರಿಯಂತಲಾಬಿಂದು ವಚ್ಚರಿಯೆನೆ ॥ (27)
ಪಸಿವುತೃಷೆನಿದ್ರೆಗಳು ವಸುಸಮುದ್ಭವ ಮದುವೆ ।
ಸಸಿನೆತನ್ನೊಳಗಿರಲ್ಕೇನೊಂದ ಮೆಲುವಲ್ಲಿ ।
ರಸನೆಯಂ ವರ್ಜಿಸುವರಳವಲ್ಲಮದರಿಂದ ಕೊಂಡುದಂ ಗುಹ್ಯಕೆತ್ತು ॥
ಬಿಸಜಾಕ್ಷಿಯನ್ನರಸಿ ಬೆರಸಿ ಕಾಮಾಂಧತೆಯು ।
ಹಸರದೊಳು ಮುಳುಗಿಸುತ ಪುಸಿಯು ಸುಖದಿಂ ತನುವ ।
ನಸಿವಂತೆ ಮಾಳ್ಪುದೀ ಬಿಂದು ಮುಲ್ಲೋಕಜನರಂದಮಂ ಕೆಡಿಸುತನಘ ॥ (28)
ಬಿಂದು ನಿಲೆ ತನುವಿನೊಳಗಾವನಾದರು ಮೃತಿಯು ।
ಪೊಂದುವನೆ ತರುಣಿಸುತಸಾರ್ಭಟೆಯು ಗಣನೆಗಂ ।
ತಂದಪನೆ ಶೈಥಿಲ್ಯಮಾಂತಪನೆ ಸಗ್ಗಿಗರ ಸಾತ್ವಿಕವನುಂಬಗವನೆ ॥
ಬಿಂದು ನಿಲಲಾನಂದಕಂದನಹ ಚಲಿಸಿದಡೆ ।
ದಂದುಗದ ಭವಬಂಧ ಬಿಡದಲೆವುದದರಿಂದ ।
ಮುಂದರಿತು ತಡೆದರೆಯು ಸೌಖ್ಯಹಸ್ತಾಮಲಕ ಮೆನೆ ಸುಲಭಮಹುದು ತನಯ ॥ (29)

ಮನದ ನೆನೆಹೇ ಮದನ ಮುಂಬರಿವ ಪವಮಾನ ।
ನನುವೆ ಶಮ ಮೋಹಕಂಗೊಳಿಪ ಧೃತಿಯೇ ಮಾಯೆ ।
ಮನಮುರುತ ಬಿಂದುಗಳ ಮೊದಲರಿದು ಸಾಧಿಸಲು ಸುಲಭದಿಂ ಮುಕುತಿಯಹುದು ॥
ಮನಸಿನಿಂದಾಧಿಕ್ಯ ಮನುಮಥನೆ ಪವಮಾನ ।
ಕೆನಿಸಿಂದ ಸಮವರ್ತಿಗಧಿಕನೇಂ ಬಿಂದುವಿಂ ।
ಘನವೆ ಮಾಯಾಂಗನೆ ಮದಾಂಧತೆಯನುಳಿದಿವಂ ತಿಳಿದು ಪಿಡಿ ಸುಖಮಪ್ಪುದು ॥
ಸ್ಥೂಲತನುವೇ ಬಿಂದು ಸೂಕ್ಷ್ಮವೆ ಜಗತ್ಪ್ರಾಣ । [(30)
ಮೇಲೆ ಮನಕಾರಣಂ ಮುಮ್ಮೂರ್ತಿಗಳ ಪಿಡಿದು ।
ಕೇಳಿಸಲುಪಾಯದಿಂ ಕನ್ನಡಿಯ ಪಿಡಿದಂತೆ ಕಾಣ್ಬಡುವದತಿವಿಭವದಿ ॥
ಶೀಲಗುರುಮೌನಿಗಳು ಸಿಲ್ಕಿ ಸಂದೆಗದಿಂದ ।
ಪೋಲಾದರೀ ಮರುತ ಮನಬಿಂದುಗಳ ಕುಹಕ ।
ಜಾಲದಿಂ ಕಂಗೆಟ್ಟು ಮುಂದರಿಯದೆನಿತೆನಿತು ತೊಳಲಿದರ್ ಲೋಕದೊಳಗೆ ॥ (31)
ಪಿಡಿದು ಮೂಲಾಧಾರಬಂಧಬಲದಿಂ ಮೇಲ ।
ಕಡರಿಸಿ ಮರುತ್ತನಂ ನಡುನಾಳದೊಳ್ ಪೊಗಿಸಿ ।
ತೊಡರಿಸುತಲಕ್ಷರದ್ವಯದಿಂದ ಬಂಧಿಸಲು ಚಲಿಸಲಮ್ಮದೆ ಗಗನದಿ ॥
ಎಡೆಯಾಡುವದನುಳಿದು ಪದುಳದಿಂದಿರೆ ಮನಂ ।
ಮಿಡುಕದಿಪ್ಪುದು ಬಿಂದು ವಲ್ಣಡದಿರೆ ಹರ್ಷ ।
ವಿಡಿದು ಬಿಡುಗಣ್ಣವರಧಿಕ್ಕರಿಪನಾನಂದ ಸೊಕ್ಕಿನಿಂ ಗಣನೆಗೊಳದೆ ॥ (32)
ಕಡೆಗೊಳಿಸಿ ಕಾಮಮಂ ಕಡಹಿ ಕೆನಿಸಂ ಭರದೊ ।
ಳೆಡಹಿ ಲೋಭವ ನೈದೆ ಕಡಿದು ಮೋಹದ ಬಲೆಯ ।
ನೊಡನೆ ಮದಮಂ ತರಿದು ಬಡಿದು ಮಾತ್ಸರದಂಭದೆಡರುಗಳ ಗಡಣಗಳನು ॥
ಕಡುಮಮತೆಯಂ ಬಿಟ್ಟು ಪಿಡಿದು ಶಾಂತಿಯ ನತುಳ ।
ದೃಢತರದೆ ದಾಂತಿಯಂ ತುಡುಕಿ ಸದ್ಭಕ್ತಿಯಂ ।
ಬಿಡದೆ ರುತ ತತ್ವಗಳ ನೊಡ(ಲೊ)ಳಂ ಮಡಗುತಂ ಪಡೆ ಮುಕ್ತಿಯಂ ಬಾಲಕ ॥ (33)
ನಸುಗೆಂಪು ನಾಲ್ದಳಂ ವಸುಧೆಯುರುತರಗಂಧ ।
ವಶಷಸ ಚತುರ್ವರ್ಣ ಚತುರಮುಖನಿಹ ತಾಣ ।
ಬಿಸಜಮಂ ಬಲಿದು ಮರುದಾಕುಂಚನಂಗೈದು ಮೂಲಾಗ್ನಿವಿಡಿಯಲಿಮಪ್ಪು ॥
ಪೊಸತೆನಿಪ ಷಡ್ದಳಂ ಶಿತವರ್ಣವಾರಿಯುತ ।
ರಸಭರಿತ ಬಭಮಯರಲಾಕ್ಷರ ಸ್ಥಲವನುಂ ।
ಬಸದೋರದೋಲ್ ಬಿಂದುವಂ ಕೊಂಡು ಮೇಲಕ್ಕಡರುವದೆ ನಿಯಮವನಘ ॥ (34)
ರನ್ನಮಯ ಪತ್ತುದಳ ಡಢಣತಥದಧನಪಫ ।
ವೆನ್ನುವಕ್ಕರರುದ್ರನಿಲಯ ದಗ್ನಿಯ ಬಲಿದು ।
ಚೆನ್ನಾಗಿ ಮರುತನಂ ಕುಂಭಿಸುವುದದನೋಡಲಾಸನವೆನಿಪ್ಪುದಣುಗ ॥
ಪನ್ನೆರಡು ದಳ ಕ ಖ ಗ ಘ ಙ ಚ ಛ ಜ ಝ ಞ ಟ ಠ ಗ ।
ಳೆನ್ನು ವಕ್ಕರ ವೀರನೆಲೆ ಕೃಷ್ಣವರ್ಣಚಲ ।
ನುನ್ನತಸ್ಥಾನದೊಳು ಪೂರಕದೊಳರುತಿಹುದೆ ಕೇಳು ಪ್ರಾಣಾಯಾಮವು ॥ (35)

ಪದಿನಾರುದಳದ ಪುಷ್ಕರರೂಪ ಶಬ್ದಮಯ ।
ಪುದಿದ ಸ್ವರವರ್ಣಂ ಸದಾಶಿವನ ಮಂದಿರವ ।
ನೊದಗಿ ಸಂಕೋಚಿಸಲ್ ತದಿಲಾಕ್ಷವಶತೆಯುಹುದದುವೆ ಪ್ರತ್ಯಾಹಾರವು ॥
ಉದಯಾಸ್ತಮಯಗಳುಂ ಪೋಗದಿಹ ಚಿದದ್ವಯದ ।
ಸದನವೆರೆದಕ್ಕರಾತ್ಮಕನಾಗಿ ರಾಜಿಸುವ ।
ಸದಮಲದ ತೇಜಮಂ ಒಡದೆ ನಿಚ್ಚಸುವುದದು ಧ್ಯಾನಾಂಗಮಪ್ಪುದೆಣಗ ॥ (36)
ಸಾಸಿರದಳಗಳಂದೆಸೆವ ಸರಸೀರುಹಾ ।
ವಾಸವಾಗಿಹ ಸಸಿಯುಲೊಸರುವಮೃತವನುಂ ವಿ ।
ಳಾಸದಿಂದುಂಡುಂಡು ಬೆರೆ ಸಾರದಿಹುದದುವೆ ಸುಖಮಯದ ದಾರುಣಮದು ॥
ಭಾಸುರದೊಳೀರೆಂಟು ಬೆರಳ ಪ್ರಮಾಣದಿನಿಂ ।
ಭಾಸಿಪ ಶಿಖಾಂತವೆಳಗಂ ಸಾರಿ ಕಪ್ಪುರದ ।
ರಾಸಿಯುರಿಗೊಂಡಂತೆ ಚಿತ್ಸ್ವರೂಪದೊಳರ್ಪದದು ಸಮಾಧ್ಯಂಗ ತನಯ ॥ (37)
ಯಮನ ಜಯ ಭಯ ಚಿಂತೆ ಪಸಿವು ಹಸುಣತ್ತೆ ನಿದ್ರೆ ।
ಹಿಮ ತೃಷ್ಣೆ ಭ್ರಮಣೆ ಮೊದಲಾದವುಂ ವಶವಹವು ।
ಶಮೆ ದಮೆ ತಿತಿಕ್ಷೆ ಧೈರ್ಯ ಸ್ಥೈರ್ಯ ನಿಸ್ಪೃಹತೆ ಶಾಂತಿಗಳ್ ಬಹವು ಯಮದೆ॥
ಪ್ರಮುದ ಗುರುಸೇವೆ ಪರಪುರುಷಾರ್ಥಪರರ ಸ್ತ್ರೀ ।
ವಿಮುಖತೆ ಹಿತಾಹಿತದ ಚಿಂತೆ ನಾಮಸ್ಮರಣೆ ।
ವಿಮಲಮತಿ ಕಾಂತಸರ್ವಭೂತಸಮಾನಬುದ್ಧಿ ನಿಯಮದಲೆ ಬಹುದು ॥ (38)
ಜಲಜಭವ ಮೊದಲಾದೆಲ್ಲರಂ ನೆರೆ ಪಿಡಿದು ।
ಪೊಲಜಿಗಡರಿಸಿ ತನುವ ಬಂಧಿಸಲ್ಕಾಸನದಿ ।
ನಿಲಲಗ್ನಿಯೂರ್ಧ್ವಮುಖಮಾಗಿ ಮಾರ್ಗದ ಮಲವ ಹರಿವುದಾಸನದ ಫಲವು ॥
ಬಲಿದೆಡದ ಮಡನ ಗುದದೆಡೆಯ ಬಲಮಡವನುಂ ।
ಬಲಿದು ಮೇಹನದೂರ್ಧ್ವದಲ್ಲಿಟ್ಟು ದೃಢಗೈಯ ।
ಲುಲಿವು ರಿದ ಸಿದ್ಧಾಸನಂ ಮಹಾಸಿದ್ಧಿಕರ ಪರಮೋದಕರಮೆನತಲಿ ॥ (39)
ಇಂತತ್ರೀವ ರಹಸ್ಯತರದರ್ಥಮಂ ಮನದ ।
ಲಾಂತು ವಿಜನಸ್ಥಾನದಲಿ ಕುಳತು ತನ್ನೊಳಗೆ ।
ಚಿಂತಿಸುತ ಗುದ ಲಿಂಗ ನಾಭಿ ಹೃದಯಂ ಕಂದಭ್ರೂಮಧ್ಯ ಶಿರಶಿಖೆಗಳ ॥
ಪಂತಿಯೊಳುಪಾಯದಿಂದಭ್ಯಾಸಬಲದಿಂದ ।
ಸ್ವಾಂತಮನ್ನಿಲಿಸಲಾನಂದವಶಮಹುದಲ್ಲ ।
ದಂತರದ ಕರ್ಮಗಳ ಪಿಡಿದು ತೊಳಲಲುಭವದ ಸಂತೆ ಆ ಪಾರ ಮಣಗ ॥(40)
ಖಳರ ಸಂಗವನುಳದು ತಿಳದು ಗುರುಮುಖದಿಂದ ।
ತಳೆದು ಮನದೊಳು ದಿವ್ಯಮೂರ್ತಿಯಂ ಸನ್ನಿಯೊಳು ।
ಪೊಳೆವ ಕನಕದ ವರ್ಣ ಭೂಮಿಯೊಳು ಮಾಣಿಕ್ಯಸಿರಿಯನುಂ ಬಳಸಿಕೊಂಡು ॥
ಬೆಳಗುವ ದಿವಾಕರನ ಕಾಂತ್ರಿಯನ್ನುಚ್ಚಳಸಿ ।
ಥಳಥಳಪ ತೇಜದಿಂ ಪೊಂದಿ ಮತ್ತಗಲದಲೆ ।
ಬೆಳಗಿನೊಳ್ ಬೆಳಗೆನಿಸಿ ಹಾರೈಸದೊಂದನುಂ ಸುಖವ ನನುಭವಿಸು ತನಯ ॥ (41)

ಅರಿಶಂಖಲಾಂಛನಂ ವರದಾಭಯಪ್ರದಸು ।
ಕರಗಳಿಂದೆಡವಂಕದೊಳಗಾಂತ ಲಕುಮಿಯಂ ।
ಮಿರುಮಿರುಪ ಮಣಿಮಕುಟಕರ್ಣಕುಂಡಲಹಾರಪದಕದಿವ್ಯಾಂಬರಗಳಿಂ ॥
ಮೆರೆವ ಶ್ರೀಹರಿಯ ಚಿನ್ಮೂರ್ತಿಯಂ ಮಾನಸದ ।
ಲಿರಿಸಿ ಮನದಿಷ್ಟಗಳದಲ್ಲಿಲ್ಲ ಸಂಚರಿಸ ।
ಲಿರದೆ ಭಾವಿಸುತಿರೆ ಪ್ರಪಂಚಂ ತದಾಕೃತಿಯೊಲಾಗಿ ತೋರ್ಪುದು ಬಾಲಕ॥(42)

ಎಲುಮಯದ ಪಂಜರವ ಚೇತನದ ಮಂದಿರವ ।
ಚೆಲುವಗೋಲ್ನಾಟಸಿತಕಮಲ ಮರುತಂ ಸತತ ।
ಚೆಲಿಪ ಚಾತಿಯ ಫತ್ಕಳಿಯ ದಿವ್ಯಸುಧೆಯಿಂದೆ ಕಲೆತಂತೆ ಕಲೆತು ಬರುವ ॥
ಪೞಬಗೆಯ ಮಿಂಚುಗಳ ತ್ರಿಥಿರುತುಗಳಗೆ . . . . . . . . . . ? ।
ಯಿಲ್ಲದಿರುಳು ಪಗಲಂಟದಿಹ ಆಣವಂ . . . . . . . . . ? ।
ಸುಲಭದಿಂ ಸಾಧಿಸುವುದೆಡೆವಿಡದೆ ಮರೆದಿರದೆ ಮನಪಂ ತದಾತ್ಮನೆನಿಸಿ ॥ (43)

ಕ್ಷಿತಿಯ ಜಲದೊಳ್ ಕಲೆಸಿ ಕ್ಷಿತಿಜಲಗಳಗ್ನಿಯೊಳು ।
ಹುತವಹನ ಮರುತನೊಳ್ ಬೆರಸುತಾಗಸಕ್ಕೈದೆ ।
ಸತತಗತಿ ಚೆಲಿಸದಿಹನ್ನಲ್ಲಿ ಮಣಿಗಿರಿಯೊತ್ತಿಲತಿಶಯದ ಕಾಂತಿಯುತದ ॥
ಕ್ಷಿತಿಯೊಳಗಖಂಡತೇಜಃಪೀಠದೊಳಗಬ್ಧಿ ।
ಸುತೆಯುರಸನನ್ನಿಟ್ಟು ಶಾಂತಿಕುಸುಮಗಳಿಂದ ।
ಮತಿಯೊಳರ್ಚಿಸರಿವಿನುರುಳ ನೀನೆಂದೆನಿಸಿ ಬೆಳಗುತಿಹೆ ಬೆಳಗೆನಿಸುತ ॥ (44)

ಚಾಲನಂ ದೋಹನಗಳಿಂದ ನಿಡಿದೆನಿಸಿರ್ಪ ।
ನಾಲಿಗೆಯ ವಿಪರೀತಗತಿಯಿಂದ ಪೊಗಿಸುತಂ ।
ತಾಲುವನ್ನುಂಟುತ ಚಿದಾಕಾಶದೊಳು ತೋರ್ಪ ಸುಖಕರಸುಧಾಸೂತಿಯಿಂ ॥
ಲಾಲಿಸಲ್ಕಮೃತರಸ ಸಾಲಿಟ್ಟು ಬರುವುದದ ।
ಗೋಲದುಂಡುಂಡು ಸಂತಸಗೊಂಡು ಹರುಷದಿಂ ।
ಬಾಲಕ ಜರಾಮರಣಗಳ ಜರೆದು ಮಾನಸವ ಪಂಧು ಸುಖಿಮಿಹುದು ಬೆರೆದು ॥ (45)

ಪ್ರಣಮಮಯಶಂಕಿನಿಯ ಸೂಕ್ಷ್ಮವಹ ಕುಂಡಲಿಯ ।
ನಣುರೂಪಚಕ್ರಗಳ ದಂಡದಂಡಾಂಕುರಗ ।
ಳಣಿಮಾದಿಗಳನೀವ ನೀವಾರಶೂಕದಂತಿಹ ಸುಷುಮ್ನೆಯ ಕಂದವಂ ॥
ಮಣಿದಿರ್ಪ ಪದ್ಮಮಂ ಮಗುಳೆ ದಹರಾಭ್ರಮಂ ।
ತಣಿವುದನುದಿನ ನೋಡಿ ಬಾಡಿಸುತಲಿರೆ ಗಗನ ।
ಮಣಿಸುಧಾಸೂತಿಗಳನತಿಗಳೆವ ಬೆಳಗಿನೊಳ್ ಬೆಳಗೆನಿಸಿ ತೋರ್ವೆ ತನಯ॥(46)

ರನ್ನಗಿರಿಗಳ ಬಜ್ಜರದ ಮೊರಡಿಗಳ ಚೆಲುವ ।
ಪೊನ್ನಗಿರಿಗಳ ಕಾವ್ಯಶೈಲ ಕುಲಪರ್ವತಗ ।
ಳನ್ನು ತುಡುಕುತ ಚಿಣಿ ಚಿಣೀ ಚಿಣಿಯ ಘಂಟಿಕಾಶಂಖಮುದ್ದಳೆತಾಳವ ॥
ಮುನ್ನಲನುಸರಿಪ ಭೇರಿಯ ತಂತಿ ಮೇಘಸರ ।
ಮುನ್ನಡೆಸು ನಾದಗಳ ಭಾವಿಸುತ ಮರೆಯದಿರ ।
ಲನ್ನೆಗಂ ಸುಖದ ಸುಗ್ಗಿಯ ಸೂರೆಗೊಂಬೆ ಯಿದ ನಂಬಿ ನೀನೆಸಗು ತನಯ ॥ (47)

ನಾಡಿಗಳ ದ್ವಾರಗಳ ಕುಟಿಲರುಜಿ ಕೇರಿಗಳ।
ಕೂಡೆ ಮರುತ್ತಂಗಳಂ ಧಾತುಗಳ ಹಟಲಗಳ।
ಕೋಡೆ ತಾಕೇವುುಖವ ಸಂಧಿಗಳ ಮೇರುಗಿರಿ ವರ್ಣಗಳ ಸೇರುವೆಗಳ॥
ನೋಡುತಿರೆ ಸಮವಿಷಮಗಳ ಪುಷ್ಪವೃಷ್ಟಿಗಳ।
ನೀಡುತಿಹ ಸುರರ ದುಂದುಭಿ ದಿವ್ಯವಾದ್ಯಗಳ।
ಕೂಡೆ ಸಂಚರಿಸುತಿಹ ಸರ್ವಭೂತಗಳಂ ಸತತ ಭಾವಿಸು ಬಾಲಕ॥ (48)

ಸರಸದಸುಪೂಷ್ಟಿಕವ ಶೋಷ್ಟಿಕವಸೀತಳವ।
ಕರಿಕರಂ ಭಸ್ತ್ರಿಕಾ ಮಟ ಸಮುದ್ಧರಣೆಯಂ।
ಸುರುಚಿರದ ಕರ್ಕರಿಯು ಶಾಂಕರಿಯು ಭಸ್ತ್ರಿಣಿಯು ವಿಭ್ರಮಗಳನ್ನು ಪಿಡಿದು॥
ತರಹರಿಸಿ ರೇಚಕಂ ಪೂರಕಂ ಕುಂಭಕದಿ।
ಬೆರೆದು ಶರಸಂತ್ರಾಣ ಭುಜಗಿಯು ಪಿಪೀಲಿಕಾ।
ಸರಣಿಯೊಳಾಕುಂಚನದಿ ಕುಂಚನವೆನಿಪ್ಪವಂ ಮರೆಯದಿರು ಮನದಿ ತನಯ॥ (49)

ಎನಿತು ಪೇಳುವುದೇನು ತನಯ ನಿನ್ನೊಳು ನೀನೆ।
ಮನದೊಳಾಳೋಚಿಸಲು ಕೊನೆಯೊಳಗೆ ಮಿನುಗುತಿಹ।
ಘನತೇಜ ವಶಮಹುದು ಕರದೊಳಹ ವ್ರಣಕೆನ್ನು ಕನ್ನಡಿಯನರಸಲೇಕೆ॥
ಜನರ ಬೆಸಗೊಳಲೇನು ಜನನಾದಿ ಕರ್ಮಗಳ।
ಕೊನೆಗಾಣಿಸುವರೆ ಕೋಟಲೆಗಳಂ ಬಿಡಿಸುವರೆ।
ಬಿನದಗಳ ನೆನೆಯದಾಂ ಪೇಳ್ದಂತೆ ಗೋಪನದೊಳರಿದು ಸುಖಿಯಾಗು ತನಯ॥
[(50)

ರಾಗವು ವಿರಾಗಂಗಳಲ್ಲದೆ ಹಿತಾಹಿತಗ।
ಳಾಗು ಹೋಗುಗಳರಿವ ವೆಚ್ಚರಿಕೆಯೀ ಲೋಕ।
ಭೋಗಮೋಹ ಭ್ರಮೆಂಬುದೆ ಕನಸು ಕನಸಿನಾವಿಮರ್ಶಮಂಕಳೆದು ಬರೆದ॥
ಭಾಗೆಯಂತಿರೆ ನಿದ್ರೆಯಾತಮವನುಳದು ನಿಜ।
ವಾಗಿರುವುದೇ ತುರ್ಯ ಮದ ಮರೆದು ಚಂದ್ರಿಕಾ।
ಭೋಗ ತುರ್ಯಾತೀತ ಮಹುದು ಪಂಚಾವಸ್ಥೆಗಳು ಯೋಗಿಜನಕಣಾಗನೆ॥ (51)

ಭ್ರಮೆಗೊಂಡು ಕೋಟಲೆಯನನುಭವಿಪ ವರ್ಣಸಂ।
ಕ್ರಮ ಕರ್ಮ ಕಾಲಗಳ ಕಳೆದಖಂಡಾನಂದ।
ವಿಮಲಬೋಧಾಮೃತವ ಗುರುವಚನದಿಂದುಂಡು ಜನನಮರಣಗಳ ಕಳೆದು।
ಸುಮನಸರ ಪದಕೆ ಪದವೆನಿಪ ಶ್ರೀರಾಮಪುರ।
ದಮಲ ಸದ್ಬ್ರಹ್ಮಾಹಮಸ್ಮೀತಿ ಯೆನುತ ಸಂ।
ಭ್ರಮದಿಂದ ಪ್ರಾರಬ್ಧಮುಳ್ಳನಕ ಸಂಚರಿಸುತುತ್ತರಿಸು ಭವಜಲಧಿಯಂ॥ (52)

(ಸಂಧಿ 35 ಪದ 1585)

# ಮೂವತ್ತಾರನೆಯ ಸಂಧಿ

ಸೂಚನೆ ॥ ಬ್ರಹ್ಮಣ್ಯ ದೇವನೆಂದೆಂಬ ಬಿರುದನು ಮೆರೆಯೆ ।
ಬ್ರಹ್ಮ ಋಷಿಗಳ ನುಡಿಯ ಪ್ರತಿಕರಿಸುತೊಡಗೊಂಡು ।
ಬ್ರಹ್ಮಲೋಕೋಪಮಿತಮೆನಿಪತ್ರಿಯಾಶ್ರಮದೊಳಿರ್ದ ರಘುನಾಥನೊಲಿದು ॥

ಸಾದರದಿ ಲಕ್ಷ್ಮಣಗೆ ಪರತತ್ವದಿರವನುಂ ।
ಬೋಧಿಸಿ ನಿಜಾನಂದಮಯನೆನಿಸೆ ರಘುವರನ ।
ಪಾದಂಗಳಗೆ ಮಣಿದು ಪದುಳದಿಂ ಕೆಲಸಾರಿ ಭಾವಭಕ್ತಿಯೊಳಿರಲ್ಕೆ ॥
ಮೇದಿನೀಸುತೆಸಹಿತ ಯೋಗಮಾಯಾಕಲಿತ ।
ಮಾಧವಂ ಮಂದಿರದಿ ಮಂಡಿಸಿರಲತ್ತಂ ವಿ ।
ನೋದದಿಂ ನೆರದ ಮುನಿವರರೆಲ್ಲ ನೋಡುತ್ತ ಸಲ್ಲಾಪಗೈದರಗಜೆ ॥ (1)

ಮೆಲ್ಲನಲ್ಲಲ್ಲಿ ತಮ್ಮೊಳ್ ತಾವೆ ಮಾತುಗಳ ।
ಸೊಲ್ಲಿಸುತಲಿರ್ಪ ತಾಪಸರ ಪರಿಯನ್ನೋಡಿ ।
ಮುಲ್ಲೋಕವಲ್ಲಭಂ ರಘುವರಂ ತನ್ನೊಳಗೆ ತಾನೆ ಚಿಂತಿಸಿ ಬೇಗದಿ ॥
ಬಲ್ಲವರ ಬೆಸಗೊಂಡನೇಂ ಕಾರಣಂ ಮುನಿಗ ।
ಳೆಲ್ಲರೊಂದೆಡೆಯಲ್ಲಿ ಕುಳಿತು ಯೋಚನೆಗೈದು ।
ಸಲ್ಲಲಿತದನುಲಾಪಕೆಳೆಸಿರ್ಪ್ರದಾರಿಂದಲಪರಾಧ ಮೆಸಗಿತೆನುತ ॥ (2)

ವಿನಯಪರ ಲಕ್ಷ್ಮಣಂ ಮುನಿಗಳುಪಚರಣೆಯಲಿ ।
ಮನವನೊಂಚಿಸದನೋ ಧರಣಿ ಸುತೆಯಿಂದೇನು ।
ಜನಿಸಿಹುದೊ ನಿಷ್ಠುರಂ ಮತ್ತೆನ್ನ ದೆಸೆಯಿಂದ ಲಪರಾಧವೇಂ ಘಟಿಸಿತೊ ॥
ಇನಿತು ಜನರೊಂದೆಡೆಯ ಕೂಡಿ ನುಡಿವುದ ನೋಡೆ ।
ಕೆನಿಸೆಂದು ಭೀತಿಗೊಳುತಿದೆ ಚಿತ್ತ ಪೇಳ್ವುದೆನು ।
ತನುವಿನಿಂ ಬೆಸಗೊಂಡಪೋರ್ವ ಭೂಸುರವೃದ್ಧ ನಡೆನಡುಗುತಿಂತೆಂದನು ॥ (3)

ಸಕಲಭೂತಾನುಕಂಪಂ ಸರ್ವಜನಭಾಗ್ಯ ।
ನಿಕರದಾತಾರಂ ನಿರೀಹಂ ನಿಜಾನಂದ ।
ಸುಕರರೂಪಂ ನಿನ್ನದೆಸೆಯಿಂದಲೆಮಗೇನುಪಾಧಿ ಸಂಧಿಸುವದರಸ ॥
ಸುಕುಮಾರಚಿತ್ತ ಬುಧನಿಕರಸೇವಿತ ನನುಜ ।
ನಕಳಂಕೆ ಧರ್ಮದಾಕಾರೆ ಧರಣೀತನುಜೆ ।
ಭಕುತಿಯಿಂದನುದಿನದಿ ಪಾಲಿಸುವರವರಿಂದ ಲಘುಲೇಶ ಜನಿಸದನಘ ॥ (4)

ಕ್ರೂರಕುಲಿಶಸ್ವನ ಕರಾಳಮಾಂಸಾದನರ ।
ಪಾರಘೋರಾಕಾರ ರಕ್ಕಸರ ಬೆರೆಬೆರೆದು ।
ಧಾರಿಣೀಸುರರ ಶಮಧನರನೆಲ್ಲರ ಭೀತಿಗೊಳಿಸಿ ಬಾಧಿಸುತ ತಿನುವ ॥
ಚಾರಣಂಗೈವ ರಾವಣನನುಜ ಖರನೆಂಬ ।
ಘೋರಭೀಷಣರೂಪಮುಳದು ತದ್ವಿಘ್ನಮಂ ।
ತೋರಲಂತಃಕರಣ ವೊಳಗೆಲ್ಲ ಮುನಿಗಳಂದನುವ ಚಿಂತಿಸುವರನಘ ॥ (5)

ವಿವಿಧರೂಪುಗಳಾಂತು ವಿಧವಿಧದೊಳೈತಂದು ।
ರವದಿಂದ ಸುಗ್ರಾಂಡಗಳನಂಗಣದೊಳಟ್ಟು ।
ಕಿವಿಗಳಂ ಪಿಡಿದಲುಗಿ ಕೇಕರಿಸುತಗ್ನಿಯೊಳು ಶಾಂತಿಕಲಶಗಳನೊಡೆದು ॥
ಲವಲವಿಕೆಯಿಂ ಸಮಾಧಿಯೊಳಿರ್ದರಂ ತಿಂದು ।
ಜವದಿಂದ ಬಾಧೆಗೊಳಿಪರ್ ದುಷ್ಟರಕ್ಕಸರ್ ।
ಭವದಾಗಮನವಿಡಿದು ಬಾರದಿರದೀತಾಣ ಸುಕ್ಷೇತ್ರಕರಮಪ್ಪುದೆ ॥ (6)
ಈಶೈಲಕತಿದೂರದೊಳಗಿರ್ಪವಾಶ್ರಮಾಗ ।
ಳೀಶಫಲ ಪುಷ್ಪಸಂಭರಿತ ತರುಗಣವು ಕೇ ।
ನಾಶಭಯದಿಂದಲ್ಲಿ ನಿಲಲಮ್ಮದೈತಂದು ನಿರತಿಶಯದಾನಂದದಿ ॥
ಪಾಶಹಸ್ತನ ಪೋಲ್ವ ನಿನ್ನನುಗ್ರಹದಿಂದ ।
ಲೇಶಭಯ ತೋರದಿರ್ದಪವು ಮೊದಲನೆಲೆಗಳಾ ।
ವಾಸಕೆಳಸಲ್ ಜನಗಳೆಲ್ಲರಾಳೋಚನಂಗೈವರಲ್ಲಲ್ಲಿ ಮುದದಿ ॥ (7)
ಬಲುರಮ್ಯಕರವಾದ ತಾಣ ಬಾಧಿಪ ಕ್ರೂರ ।
ಬಲಿ ಖರಾಸುರಬಾಧೆ ಬರಲಮ್ಮದೆಂದರಿತು ।
ಸುಲಭದಿಂ ತಮತಮ್ಮ ನೆಲೆಗಳಂಗೈದಲೆಂದಾಲೋಚನಂಗೈವರು ॥
ಜಲಜಾಕ್ಷ ದಿವ್ಯಫಲಪುಷ್ಪದಿವ್ಯೋದಕಂ ।
ಫಲಬಗೆಯ ಕಂದಮೂಲಾದಿಗಳ್ ಸ್ವಾದುತರ ।
ಗೆಲವೀವ ನೆಲೆಯೆನುತ ಸಕಲದೇವತೆಯರುಂ ಪ್ರಾರ್ಥಿಸುವರನುದಿನದೊಳು ॥ (8)
ಮುನಿಗಳಾರುವಚನರಚನೆಗಳನಾಲಿಸಿ ಪ್ರಿಯದಿ ।
ಜನನಾಥನೆಲ್ಲರಂ ಸಂತೈಸಿ ನಸುನಗುತ ।
ಮನದೊಳಾಳೋಚಿಸಿದ ಮುಂದಪ್ಪ ಕಜ್ಜಗಳ ದೇವತತಿಹಿತಕರಗಳ ॥
ವನಿತೆ ಲಕ್ಷ್ಮಣರುಗಳನೊಡಗೊಂಡು ಗಿರಿಯನಿಳಿ ।
ದನುವಿನಿಂ ಬರುತಲಿರಲಾ ತಪೋಧನರೆಲ್ಲ ।
ಘನತರದ ಹರ್ಷದಿಂದೊಡನೆ ಬರುತಿರಲವರತತಿ ನೋಡಿ ಹಿಗ್ಗುವಂತೆ ॥ (9)
ಮುಂತಡಿಗಳಡುತ ರಘುನಂದನಂ ನಾಲ್ದೆಸೆಯ ।
ಸಂತಸದೊಳಟ್ಟಿಸುತಲಿದು ಭರತ ಬಂದು ತ ।
ನ್ನಂತರಂಗವನುಸಿರ್ದ ತಾಣವಿದು ಮಾತೆಯರ ಕಂಡು ವಂದಿಸಿದ ನೆಲನು ॥
ಸಂತರೊಪ್ಪಿದ ಧರಣಿಯಿದುವೆ ಪಟುಗೃಹದ ನೆಲೆ ।
ದಂತಿವಾಜಿಗಳ ಬಂಧಿಸಿದ ಭೂಮಿಯು ಧರಾ ।
ಕಾಂತರುಗಳಿಳಿದ ಧರೆ ಯಿದನುಳಿದು ತೆಂಕದೆಸೆಗೈದವೇಳ್ಕೆನುತ ನುಡಿದಂ ॥ (10)
ಈ ಪರಿಯೊಳೆಲ್ಲಲ್ಲಿ ಮೆಲ್ಲನಿಟ್ಟಿಸುತ ರಘು ।
ದೀಪ ಶಮಧನರೊಡನೆ ಸಲ್ಲಾಪಮೆಸಗುತಂ ।
ನೀಪಮುಖ್ಯಾದಿವನಗಳ ಕಳೆದು ನಡೆತಂದ ನತ್ರಿಮುನಿವರನ ಬನಕೆ ।
ತಾಪೋಪಹರಗೈಯಲರೆನಿಮಿಷ ತರುನೆಳಲ ।
ಲಾ ಪರಮಪುರುಷ ಮಂಡಿಸಿ ಭ್ರಾತ್ರರಿಂ ತಿಳಿಪಿ ।
ಶ್ರೀಪನಿಭ ಮುನಿಪನನುಮತದಿಂದಲೊಳಪೊಕ್ಕು ಭೂಸುರಸಮೂಹದೊಡನೆ ॥ (11)

ಸೆಲನನಿಚ್ಛೈಪ ಕುತುಕದಿಂದಲೈತಂದಿರ್ಪ ।
ಜಲಜಪೀರನೊ ಸುರೇಂದ್ರನ ಗುರುವೊ ರಜತಾದ್ರಿ ।
ನಿಲಯನೋ ಲಕುಮಿಯುರಸನೊ ಯೆನಲ್ಕಂಗೊಳಿಪ ದಿವ್ಯವಿಗ್ರಹವ ನೋಡಿ ॥
ಫಲಪುಷ್ಪಭರಿತಶಯದಿಂದಲೈತಂದು ಪದ ।
ಜಲಜಗಳಿಗಭಿನಮಿಸಿ ನುತಿಸಿ ಕೆಲದೊಳ್ ನಿಲ ।
ಲ್ಕೆಲವಿಂದ ಸೌಮಿತ್ರಿ ವೈದೇಹಿಯರ್ ನಮಿಸಲನ್ನೆಗಂ ರಾಮ ನುಡಿದಂ ॥ (12)

ಪರಮತೇಜೋರಾಶಿ ಪಾವನಸುಮೂರ್ತಿ ತವ ।
ಚರಣದರ್ಶನದಿಂವಲಾಂ ಧನ್ಯನಾದೆ ನಿಜ ।
ಕರುಣದಿಂದೆನ್ನ ಪತ್ರಿಕರಿಸವೇಳ್ಕನೆ ಮೌನಿ ನಸುನಗೆಯುಲಿಂತೆಂದನು ॥
ಪರಬೊಮ್ಮ ನೀಂ ಮನುಜಲೀಲೆಗಳನನುಕರಿಸಿ ।
ನರರಾಟ ಕೋಟಲೆಗಳಲಿ ಮೋಹನಂಗೊಳಿಸಿ ।
ಹರವಿರಿಂಚಾದಿಗಳ ನೇಮಕಂ ಸಿಲುಕದಿಹತತ್ವಮೆಂದರಿವೆ ಜೀಯ ॥ (13)

ಪಲಕಾಲಯೋಗದಿಂ ಭಜಿಸಲಬ್ಬದ ಭವ ।
ದ್ಬಲದೆ ನೀಂ ಮುಲ್ಲೋಕಘನವಾರ್ತೆಯೆನಗೆ ಕರ ।
ತಲಬದರದಂತೆ ಕಾಣ್ಬುಡುವುದದರಿಂದೆನ್ನ ವ್ರತಕೆ ಫಲರೂಪವ್ವಾಗಿ ॥
ಕಲಿತಾನುರಾಗದಿಂದೈತಂದೆ ಯೆನುತೆನಗೆ ।
ಪಲಪರಿಯಪೂಜೆಯುಂ ಮಗುಳೆ ಭಕ್ತಿಯೊಳೆರಗಿ ।
ಸುಲಲಿತಾನಂದದಿಂ ನುತಿಗೈದ ರಾಮನಂ ಮುನಿತಿಲಕ ವಿನಯದಿಂದ ॥ (14)

ಯತಿಶಿಖಾಮಣಿ ಮನೋತ್ಸವದಿಂದ ಕುಳ್ಳಿರಿಸಿ ।
ಕ್ಷಿತಿಜಾರಮಣಗರ್ಘ್ಯಪಾದ್ಯಂಗಳಂ ಕೊಡುತ ।
ಲತಿಶಯದೊಳುಪಚರಿಸಿ ಕೃತಕೃತ್ಯನಾದೆ ನಿಜಯೋಗ ಕೈಸಾರಿತೆನುತ ॥
ಮತಿಯೊಳಾನಂದಿಸುತ ಮತ್ತೆ ರಘುವೀರನೊಳು ।
ಸತಿಯವಾರ್ತೆಯನು ಪ್ರಸ್ತುತದಿ ವಿಶ್ರುತಗೈದ ।
ಕತಿಪಯದ ಲೌಕಿಕಾಚರಣೆಯಿಂದೆಲ್ಲ ಸಂತೋಷಿಸುವ ತೆರದೊಳೊಲಿದು ॥ (15)

ಪತ್ತುಸಾಸಿರವರುಷ ತಪದಿಂದ ಪ್ರತ್ಯೂಹ ।
ಮೊತ್ತಂಗಳಂ ಪರಿದು ಮಗುಳನಾವೃಷ್ಟಿಯಿಂ ।
ಬಿತ್ತರದ ದುರ್ಭಿಕ್ಷ ಬರಲೆಲ್ಲರಂ ಪೊರೆದು ಜಾಹ್ನವಿಯ ಪೆತ್ತು ಬಳಕ ॥
ಪೊತ್ತಿರುಳನೊಂದೆನಿಸಿ ದೇವತಾಕಾರ್ಯಮಂ ।
ಪೊತ್ತೆಸಗಿದನಸೂಯೆ ಧರ್ಮಚಾರಿಣಿ ತಾಪ ।
ಸೋತ್ತಮಿಯು ಗೃಹದೊಳಿಹಳವನಿಜೆಯು ಕಾಣ್ಬಂತೆ ಜವದಿ ಬೆಸನೀವುದೆನುತ ॥
ವೃದ್ಧಳತಿಕೀರ್ತಿಪರಳೆಮಿತ್ರಧರಣೀವಲಯ । [(16)

ವೃದ್ಧಿಕರತಾಪಸಿಯ ದರ್ಶನದಿ ಸಂಪತ್ಸ ।
ಮೃದ್ಧಿ ಕೈಸಾರುವುದೆನುತ್ತ ಸಂಯಮಿ ಪೇಳೆ ರಘುನಾಥ ಪ್ರೀತಿಯಿಂದೆ ॥
ಶುದ್ಧಾಂತರಂಗಯುತೆಯಂ ಕರೆದು ದೇವಿಜಗ ।
ದುದ್ಧರಣ ಸೀತೆಯನಸೂಯೆಗಭಿನಮಿಸಿ ಶುಭ ।
ಸಿದ್ಧಿಯಂ ಪಡೆವುದೆನೆ ಜಾನಕಿ ಮನೋಹರ್ಷದಿಂದಲ್ಕೊಳಪೊಕ್ಕಳೊಲಿದು ॥ (17)

ಜರೆಯಿಂದ ಲತಿಜೀರ್ಣಮಾಗಿ ತಪದಿಂದೊಣಗಿ ।
ನರೆಯಿಂದ ಬೆಳ್ಗುರುಳ್ಗಳನಾಂತ ಪ್ರೊಪ್ಪಿಡಿಯೊ ।
ಳಿರುವಂತೆ ಕಂಗೊಳಪ ದಿವ್ಯಮೂರ್ತಿಯು ನೋಡಿ ಹರ್ಷದಿಂದೈದಿ ಬೇಗ ॥
ಧರಣಿಸುತೆ ಯುಭಿವಾದನಂಗೈದಳೆನುತಲು ।
ಚ್ಚರಿಸಿ ಸುಮಿಸಲ್ ವಿತತಹರ್ಷದಿಂ ತೆಗೆದಪ್ಪಿ ।
ಕರುಣದಿಂ ಗಲ್ಲಗಳನಲುಗಿ ತೊರೆಯೊಳ್ಗಿಟ್ಟನಾಮುಯಾವ ಬೆಸಗೆಂಡಳು ॥
ಸೀತೆ ಸತ್ಯವ್ರತಸದಾಚಾರಸಂಕಲಿತೆ । [(18)
ಮಾತೆ ಭರ್ತೃಪ್ರೀತೆ ಭವದೀಯಸದ್ಗುಣ ।
ವ್ರಾತಂಗಳೆನಿತೆಂದು ಪೊಗಳ್ದು ಬೆಂಪಿತವಾಡೆ ಸಂಪತ್ಸಮೃದ್ಧಿಗಳನು ॥
ಜಾತುಬಯಸದೆ ಬನಕೆ ಪತಿಯೊಡನೆ ಬಂದು ಸೇ ।
ವಾತುರದಿ ಪ್ರಿಯಬಂಧುವೆಂದು ಪೂಜಿಪ ಜಗ ।
ನ್ಮಾತೆಯೆನಿಸಿದೆ ದೈವಗತಿಯಿಂದಲಾರ್ ಸಾಟಿ ಸುಚರಿತೆಯರಿಗೆ ಜಗದಿ ॥ (19)
ನಗರದಲ್ಲಿರಲಿ ಬನದಲ್ಲಿರಲಿ ಪಾತಕವ ।
ನೊಗಸಿರಲಿ ಸುಕೃತಿಯಾಗಲಿ ಕಾಮವೃತ್ತಿಯಿಂ ।
ಬಗೆಬಗೆಯ ದುಶ್ಶೀಲ ದಾರಿದ್ರ್ಯವಾಂತಿರಲಿ ಧನಿಕನೆಂದಿಸೆ ಪತಿಯೆ ॥
ಮಿಗೆ ದೇವತೆಯೆ ಬಂಧು ಗುರು ಪರಮೆನುತ್ತರಿದು ।
ಜಗತಿಯಂ ಪಾವನಿತವೆನಿಪ ನಾರೀಜನರ ।
ಬಗೆಗೆ ಪರಿಮಳವಿಾವೆ ಸುರಪಸತಿಸಾವಿತ್ರಿಯರುಂಧತಿಗೆ ತವ್ರರೆನಿಸಿಯೆ ॥ (20)
ಸಕಲಧರ್ಮಸ್ವರೂಪಿಣಿ ತಾಪಸೋತ್ತಮೆಯು ।
ರಕುತಿಯಿಂ ಬಿತ್ತರಿಸಿದಮೃತಮಯವಾಣಿಯಂ ।
ಭಕುತಿಯಿಂದಾಲಿಸುತೆ ಸೀತೆ ಕರಗಳ ಮುಗಿದು ವಿಜ್ಞಾಪನೆಂಗೈದಳು ॥
ಸಕಲಲೋಕಾರಾಧ್ಯ ಸರ್ವಗುಣಗಣನಿಲಯ ।
ನಕಳಂಕನಧಿಕಧರ್ಮಸ್ವರೂಪಂ ಸಾಧು ।
ನಿಕರಸಂಸ್ತುತ ರಾಮನೀ ಮಹಾಪುರುಷನಂ ಭಾವಿಸದರಾರಂಬಿಕೆ ॥ (21)
ಹುತವಹನ . . . . . ಳುದ್ವಾಹಸಮಯದೊಳ ।
ಗತಿಶಯದ ಸಭೆಯೆಡೆಯಲೆನ್ನ ಪೆತ್ತಾಕೆ ನಂ ।
ತತಿಮೆಚ್ಚುವಂತೆ ಪೇಳ್ದಬುದ್ಧಿಯು ಮನದಲಾಂತಿರ್ಪ ಕೇಳು ತಾಯೆ ॥
ಪತಿಸೇವೆಯಿಂದ ಸಾವಿತ್ರಿ ಶಚಿ ರೋಹಿಣಿಯು ।
ರತಿಶಯದಿ ಬೆಳಗುವದ ತಿಳದಾವಕಾಲದೊಳ್ ।
ಜತೆಯುಳಯದನುಸರಿಸಿ ಚಿತ್ತಾನುಮತವಿಡಿದು ಪರಗತಿಯ ಸಾಧಿಸೆನುತ॥ (22)
ಅತಿಕರುಣದಿಂದ ಬೋಧಿಸಿದ ಬುದ್ಧಿಯ ಮಹಿಮೆ ।
ಪತಿಯ ಸಚ್ಚರಿತೆ ಪೂರ್ವದ ಪುರಂಧ್ರಿಯರ ನನು ।
ಮತಿವಿಡಿದು ಭವದೀಯಚರಣಯುಗಳವ ಕಂಡೆ ಮುಂದೆ ಶುಭಸಂತತಿಗಳು ॥
ಸತತಮಿಪ್ಪಂತನುಗ್ರಹಗೈಯವೇಳ್ಕೆನುತ ।
ಕ್ಷಿತಿಯ ಸುತೆ ಬಿನ್ನವಿಸೆ ಕೇಳಿ ಸಂತೋಷದು ।
ಸ್ನತಿಯಿಂದ ತೆಗೆದಪ್ಪಿ ಮುದ್ದಿಸುತಲನಸೂಯೆ ಮಗುಳೆ ಸೀತೆಯೊಳೆಂದಳು ॥ (23)

ಇದೆ ವಸ್ತ್ರ ಶ್ರವಣಭೂಷಣ ಮಂಗರಾಗವು ।
ಭ್ಯುದಯುಕರ ಕೊಳ್ಳೆನುತ ಕರತಳಕೆ ನೀಡಿ ಸಂ ।
ಮುದದಿಂದಲಾವಸ್ತುಗಳ ಮಹಿಮೆಯುಂ ಪೇಳ್ದಳಾನಂದ ಸಂದಣಿಸುತ ॥
ಸುದರ ಕುಂಡಲಗಳಂ ಚಿರಸುವಾಸಿನಿಯೆನಿಪೆ ।
ಪದಿನಾರುವರುಷಜವ್ವನವುಪ್ಪುದಂ ಭರದಿ ।
ಮುದವಿಊವುದನುದಿನಂ ತನುಲೇಪನಂಗೈಯಲರಿಸಿನದ ಮಹಿಮೆಯುನಘೆ ॥ (24)
ಎನುತ ಸಂಪ್ರೀತಿಯಿಂದೊಲಿದಿತ್ತು ಕುಸ್ತರಿಸಿ ।
ಜನನಿ ನಿನ್ನಯಸ್ವಯಂವರದ ಕಥೆಯುಂ ಕೇಳ್ವೆ ।
ನಿನಿತಿನಿತ ಜನರಿಂದ ತಿಳಯಲೆಳಸಿದೆ ಮನಂಬಿತ್ತರಿಸಿ ಪೇಳ್ವುದೆನಲು ॥
ವನಿತೆ ಸಂತಸದಿಂದ ಬಿನ್ನಪಂಗೈದಳತಿ ।
ವಿನಯದಿಂ ಜನನಸಂಗತಿಯ ಪೇಳ್ದಪೆ ಕೇಳು ।
ಜನಕ ಮಿಥಿಲಾಧಿಪತಿಧರ್ಮಜ್ಞ ನೊಂದುದಿನ ಯಾಗವಂ ಗೈವೆನೆಂದು ॥ (25)
ನೆಲನ ಶೋಧಿಸುತಿರಲ್ ಕನಕಮಯದ ಕರಂಡ ।
ಹಲಮುಖದಿ ಸಿಲ್ಕಲಾರೆ ನೋಡಿ ನರನಾಯಕಂ ।
ಗೆಲವಿಂದಲುಂ ತೆಗೆದು ನೋಡುತೆನ್ನಂ ತನ್ನ ತನಯಳೆಂದಭಿಮಾನದಿ ॥
ನಲಿವುತಿರಲಂತರಿಕ್ಷದೊಳೊಂದು ಧ್ವನಿ ಕೇಳ ।
ಲಲಘುಮತಿ ಧರ್ಮದಿಂದೀ ತರುಣಿ ಸುತೆ ಯೆನುತ ।
ಲೊಲಿದು ಪಾಲಿಪುದೆನಲ್ ನೃಪವರ್ಯ ಸಂತಸದೆ ಪರಿಪಾಲನಂಗೈದನು ॥ (26)
ಸತಿಪತಿಗಳರ್ವರುಂ ಸಂತಸದಲೆನ್ನ ನಿಜ ।
ಸುತೆ ಯೆನುತ ಪ್ರೇಮದಿಂ ಪಾಲಿಸುತಲಿರೆ ವರ್ಷ ।
ಕತಿಪಯಂಗಳು ಕಳೆಯಲುದಿಸೆ ಜವ್ವನವೊಂದುದಿನ ನೋಡುತೆನ್ನ ಮನದಿ ।
ಮತಿರ.ುತೆಯಯೋನಿಜೆಯು ನಾರ್ಗೀವೆ ಸದ್ವಂಶ ।
ಪತಿ ದೊರೆವನೆಲ್ಲಿ ಮತ್ತೇಂಗೈವೆನೆಂದೀಗ ।
ಕ್ಷಿತಿಪಾಲ ತನ್ನೊಳಗೆ ತಾನೆ ಚಿಂತನೆಗೈದ ಮುಂಗಾಣದೇನೊಂದನು ॥ (27)
ಸರಸಿಜಾಸನನಾಗಲಮರಪತಿಯಾದೊಡಂ ।
ಹರನಾದೊಡಂ ಬೆಂಗಳನು ಪೆತ್ತೊಡಾಲಿಸಂ ।
ಭರಿತವಾದಡೆ ಮಾಣದೆನುವುದಕೆ ದೃಷ್ಟಾಂತ ಮಿಥಿಲಾಧಿರಾಜನಾದಂ ॥
ಪರಿಪರಿಯ ಚಿಂತೆಯೊಳು ತೊಳಲುವರಸಂಗಿನಿತು ।
ದೊರೆವುದತಿಶಯಬುದ್ಧಿ ಹರಚಾಪಮನ್ನೆತ್ತಿ ।
ದರಿಗೀವೆನೆನುತೊಂದು ಶಪಥಮಂ ಗೈದ ನಿಜಸಭೆಯಲಾಕ್ಷಣಮಂಬಿಕೆ ॥ (28)
ಶಿವನ ಕೋದಂಡಮಂ ಪೂಜಿಸುತಲೀ ಪರಿಯ ।
ವಿವರಪತ್ರಿಕೆಗಳಂ ನಾಲ್ದೆಸೆಗೆ ಕಳಪೆ ತಿಳ ।
ದವನಿಪತಿಗಳ್ ಬಂದರಾರಿಂದಲುಂ ಶೈವಪತ್ರಣತ ಚಲಿಸದೆ ನಿಲಲ್ಕೆ ॥
ಬವರಮಂ ಗೈದು ಪತ್ತಣಕೆ ಮುತ್ತಿಗೆಯಿಡಲ್ ।
ರವಿಯುದಯದಿಂ ಬಲವ ಘಳಸಿ ಭೂಭುಜರುಗಳ ।
ತ್ರವಕದಿಂದಟ್ಟಿ ಸುಖವಿರ್ದ ಮಿಥಿಲಾಧಿಪಂ ನೆನೆನೆನೆದು ಕಾರ್ಯದಿರವ ॥ (29)

ಬಂದು ನಿಟ್ಟಿಸುತಲರಸುಗಳೆಲ್ಲ ಭಕ್ತಿಯಿಂ ।
ಚೆಂದದಿಂದೆರಗಿ ಧನುವಂ ಸುತ್ತಿಸಿ ಪೋಗುತ್ತಿರೆ ।
ಲಂದಿನಿಂದೆಮ್ಮಯ್ಯನತಿಚಿಂತೆಯಿಂದೆನ್ನ ನೋಡಿ ಮರುಗುತ್ತಲಿರಲು ॥
ಒಂದುದಿನ ಗಾಧೇಯ ಮುನಿರಾಯ ಸಂಪ್ರೀತಿ ।
ಯಿಂದ ಬಂದಾಸವನವಂ ನೋಡಲಾಸತ್ಯ ।
ಸಂಧರಿರ್ವರ ನೃಪೋತ್ತಮರನೊಡಗೊಂಡಾಗ ನೆಲವಿನಿಂದೈತಂದನು ॥ (30)
ಬರಲಾ ಮುನೀಂದ್ರನಂ ಹರುಷದಿಂ ಪೂಜಿಸುತ ।
ಲರಸ ಬೆಸಗೊಂಡನಿವರಾವ ಬಾಂಧವರು ಶಶಿ ।
ತರಣಿಯಂದದಿ ಧರಣಿಯಂ ಬೆಳಗುತೇಂಕತವಲ್ತೈತಂದರೀನಗರಿಗೆ ॥
ಒರೆಯಬೇಕೆನೆ ಮುನಿಪ ನತಿಹರುಷದಿಂ ಪೇಳ್ದ ।
ಧರಣೀಶ ದಶರಥ ಕುಮಾರರಿರ್ವರು ಯಜ್ಞ ।
ದಿರವ ನಿಟ್ಟಿಪ ಕುತೂಹಲದಿಂದಲೆಮ್ಮೊಡನೆ ಬಂದರತಿಪ್ರಿಯದಲೆನುತ ॥ (31)
ಭಾನುಕುಲಸಂಭೂತ ಚಕ್ರವರ್ತಿ ನೃಪಾಲ ।
ಸೂನುಗಳು ಜಯಲಕುಮಿ ಯಧಿಪರಿವರಿಗೆ ರವಿಕೃ ।
ಶಾನುಶಶಿನಯನನ ಶರಾಸನವ ತೋರಿಸಲು ನೋಡಿ ಪರ್ಚಿಸುವರೆನಲು ॥
ಮಾನವಾಧಿಪ ಚಾಪವಂ ತೋರೆ ರಘುನಾಥ ।
ತಾನತಿಪ್ರಿಯದಿಂದಲೆತ್ತಿ ತಿರುವಂ ತೊಡಿಸ ।
ಲೇನೆಂಬೆ ಪುಂಡ್ರೇಕ್ಷುವೆಂಬೊಲಿಕ್ಕಡಿಯಾದುದಾಕ್ಷಣದೊಳಚ್ಚರಿಯೆನೆ ॥ (32)
ಅತಿಬಲಾನ್ವಿತರೆನುತಲರಿದು ಮಿಥಿಲಾಧಿಪನು ।
ಯತಿಗಳನುಮತಿಯಿಂದ ಕರೆಸಿದಂ ಪಂಕ್ತಿರಥ ।
ಕ್ಷಿತಿಪತಿಯ ತತ್ಪುರೋಹಿತಬಂಧುಜನಸಹಿತಲುದ್ವಾಹಗೈವೆನೆನುತ ॥
ಅತಿಶಯದ ವಾರ್ತೆಯಂ ಕೇಳಿ ದಶರಥಮಹೀ ।
ಪತಿ ಬರಲು ಜನಕನತಿಸಂಭ್ರಮದೊಳಂ ನೇಹ ।
ತತಿ ಪೆರ್ಚಲಾಗ ರಘುವರಗೆನ್ನನೊಲಿದಿತ್ತು ಪರಿಣಯಂಗೈದ ಮುದದಿ ॥ (33)
ಸುಕುಮಾರ ಲಕ್ಷ್ಮಣನ ನೋಡುತತಿಪ್ರೀತಿಯಿಂ ।
ದಕಳಂಕಳತಿಗುಣಾನ್ವಿತೆಯಪ್ಪ ನಿಜಸುತೆಯ ।
ರಕುತಿಯಿಂ ವೈವಾಹಗೈದಿತ್ತ ನೆರೆದಖಿಲಭೂಮಿಪತಿಗಳ್ ಮೆಚ್ಚಲು ॥
ಸಕಲ ಸಂತೋಷದಿಂದಂದಿನಿಂ ಶ್ರೀ ರಾಮ ।
ಭಕುತಿಯನ್ನೆಡೆವಿಡದೆ ಚರಣಸೇವನೆಯಿಂದ ।
ಪ್ರಕಟಿಸುವೆ ಭವದೀಯಚರಣಸೇವಕಳೆನುತ ವಿನಯದಿಂ ಸೀತೆ ನುಡಿಯೆ ॥ (34)
ಎನುತ ಧರಣಿಜೆ ಪೇಳ್ದ ವಾಣಿಯಿಂದನಸೂಯೆ ।
ಮನದಿ ಸಂತಸಗೊಂಡು ತಾಯೆ ಕೇಳ್ ಭೂತಳದಿ ।
ವನಿತೆಯರಿಗಖಿಲ ವ್ರತನೇಮನಿಷ್ಠೆಗಳೆಲ್ಲ ಪತಿಸೇವೆಗನ್ಯಮಿಲ್ಲ ॥
ಅನುದಿನಂ ಪಿಡಿದ ಪಾತಿವ್ರತ್ಯದಿಂ ನಡೆಯೆ ।
ಘನಸುಖಂ ಕೈಸಾರ್ಪುದೀಕಥೆಯ ವಿಸ್ತರಿಸಿ ।
ನಿನಗೊರವೆ ಸಾವಧಾನದಿ ಕೇಳು ಸಾಧ್ವಿಯರ ಪಾವನಚರಿತ್ರೆಗಳನು ॥ (35)

ಪತಿಯೆ ಪರದೇವತೆ ಯೆನುತ್ತಲನುದಿನ ಮನೋ ।
ಹಿತದಿಂದ ಸೇವನಂಗೈವ ಪಾತಿವ್ರತ್ಯ ।
ಸತಿಗೆ ಬ್ರಹ್ಮಾನಂದಪದವಿ ಕೈಸಾರುವದು ಯಿದರೊಳೊಂದಿತಿಹಾಸವು ॥
ಮತಿವಂತೆ ಕೇಳ್ ಪೂರ್ವದೊಳು ಶೀಲವರ್ಣಗುಣಿ ।
ವತಿಯೊರ್ವ ಬ್ರಾಹ್ಮಣಿ ಪತಿವ್ರತೆಯು ಭಕ್ತಿಯಿಂ ।
ಸತತ ಸೇವನೆಗೈದು ಪರದೇವತಾಪ್ರೀತಿಯೊಂತಿರಲ್ಕಾ ವಿಪ್ರನು ॥ (36)
ಕಾಮಲಂಪಟನಾಗಿ ದುರ್ವೃತ್ತ ದುಷ್ಕೃತವ ।
ಕಾಮವೆನಲೆಸಗುತ್ತ ಪಶುವು ಕ್ರೌರ್ಯಾದಿದು ।
ಸರ್ವಮಕ್ಕೈಹಿತ ನೆನಿಸಿ ಕೆಲಕಾಲಮಿರುತಿರಲ್ ರುಜೆಯಡಸಲಾ ವಿಪ್ರಗೆ ॥
ಭೀಮಬಲವಾತಪ್ರಕೋಪದಿಂದವಯವ ।
ಸ್ತೋಮಂಗಳುಡುಗುತ ವಿಕಾರಿಯಾಗನು ಮನಃ ।
ಪ್ರೇಮದಿಂದಾತನಂ ಬಿಡದೆ ಸೇವಿಸುತಿರ್ದಳಾ ಪುರಂಧ್ರಿಯು ಸಂತತಂ ॥ (37)
ಅತುಲದುರ್ವೃತ್ತಿಯಿಂದಾವಿಪ್ರನೈಶ್ವರ್ಯ ।
ಗತವಾಗಿ ಕರಣದಾಟಗಳುಡುಗಿ ಸಂಕೋಚ ।
ಪಥಿಕನಾದರು ಬಿಡದೆ ದೇವತಾಪತಿಭಕ್ತಿಯಿಂದೆ ಸೇವನೆಗೈಯುತ ॥
ಹಿತವೆನಿತನಿತ್ತೆಸಗುತತಿರುಜಾಕಲಿತನಂ ।
ಜೊತೆಯಾಗಲಲೀಯದುಪಚರಣೆ ಗೈಯುತ ಭಕ್ತಿ ।
ಮತಿಯಿಂದ ಪೋಷಣಂಗೈದಳಾ ಸುಚರಿತ್ರೆ ಜೀವನಾಧಿಕವೆನುತ್ತ ॥ (38)
ಉದಯದೊಳಗೆದ್ದು ಮತ್ತಾದಗೊಂಡು ಪತಿಯಕರ ।
ಪದಮುಖಂಗಳ ತೊಳೆದು ಪದುಳಗೈದಾತನಂ ।
ಸದನದೊಳಗಿಟ್ಟು ವೀದಿಯೊಳೈದಿ ಮನೆಮನೆಗಳಲಿ ಯಾಚನಂ ಗೈಯುತ ॥
ಸದನಕೈತಂದದಂ ಪಾಕಸಿದ್ಧಂಗೈದು ।
ಮುದದಿಂದಲುಣಲಿತ್ತು ಮೋದಗೊಳಸುತ ಮಿಕ್ಕು ।
ದುದರಭರಣಂಗೈದು ಪಗಲಿರುಳು ಸನ್ನಿಧಿಯ ಸೇವೆಯೊಳಗೆಸದಿರ್ದಳು ॥ (39)
ದಿನದಿನದೊಳೀ ಪರಿಯ ಸುಚರಿತ್ರೆ ನಿಜಪತಿಯ ।
ಮನದೊಲವ ಪಿಡಿದು ನಡೆಯುತ್ತಿರಲ್ಕಾತನಿಗೆ ।
ಘನಮರುದ್ವ್ಯಥೆಯಿಂ ಕರಪದಂಗಳು ಪೋಗಿ ಕಾರ್ಪಣ್ಯ ಪೆರ್ಚೆ ಬರಲು ॥
ಮನೆಯೊಳೊರ್ವನ ಬಿಟ್ಟು ಪೊರಡಲಮ್ಮದಲುಳಿಯೆ ।
ತಿನುವರನುವಿಲ್ಲದಾ ಸಾಧ್ವಿ ಸಂಕಟಗೊಳ್ಳು ।
ತನುದಿನಂ ಪತಿಯ ಬೆಗಲೊಳಗಿಟ್ಟು ಮಂದಿರಗಳನು ತೊಳಲಲನುಗೈದಳು ॥
ಈ ಪರಿಯು ಕೆಲಕಾಲವಾ ಪುರಂದ್ರಿಯು ಕಷ್ಟ । [(40)
ಗೋಪನಂಗೈದು ಪತಿಸೇವೆಯೇ ಗತಿ ಯೆನುತ ।
ತಾಪಗೊಳದತಿಭಕ್ತಿಯಿಂದ ಪೊರೆಯುತಲಿರ್ದಳೊಂದುದಿನ ಬೀದಿಯೊಳಗೆ ॥
ಆಪಣದೊಳಿಟ್ಟು ಯಾಚಿಪೊಡೆ ಕೆಲಬಲಕೈದೆ ।
ರೂಪು ಜವ್ವನೆಯೊರ್ವೆ ವಿಟರ ನರಸುತ ನಿಜ ।
ವ್ಯಾಪಾರಕೆಂದು ಬರುತಿರ್ದಳಂಗಜನ ಕರದಲಗಿನೋಲ್ ಬೆಡಗ ನಾಂತು ॥ (41)

ಶಶಿವದನೆ ಸಾರಸಾಂಬಕಿ ಕೋಕಿಲಾಲಾಪೆ ।
ಮಿಸುಪ್ಪ ಶುಕವಾಣಿ ಫಣಿವೇಣಿ ಸುಸ್ತನಿ ಮದನ ।
ವಿಶಿಖನಿಭಸುಕಟಾಕ್ಷಗಳ ಪರಪಿ ಗಜಗತಿಯಿಂದ ಜವ್ವನೆ ಬರುತಿರೆ ॥
ಪೊಸಬೇಟಮಂ ನೋಡುತಂಗಡಿಯೊಳೊರಗಿರ್ದ ।
ನಿಶಿತರೋಗಾವಿಷ್ಟ ವಿಪ್ರಾಧಮಗೆ ಚಿತ್ತ ।
ಕುಸಿದು ಕಂದಿದುದು ತನುವೇದನೆಯೊಳೇನೆಂಬೆನಾ ದುರಾವಸ್ಥೆಗಳನು ॥ (42)
ಮದನವಶನಾಗಿ ಮತ್ತಾ ಸುದತಿಯಂ ಬಯಸಿ ।
ಹೃದಯದನುತಾಪದಿಂ ಕರಗಿ ಕೊರಗುತ್ತಳಲಿ ।
ಮದವತಿಯ ನೆನೆನೆನೆದು ಮಂದಮತಿ ಪಲುಬುತಿರಲನ್ನೆಂ ಸತಿಯು ಬರಲು ॥
ಕುದಿಯುತ ಮನೋವೃತ್ತಿಯಂ ತಿಳಿಪಲಾ ಸಾಧ್ವಿ ।
ಮುದದಿಂದಲೈದಿ ವೇಶ್ಯಾಂಗನಾಮಂದಿರಕೆ ।
ವಿಧವಿಧದೊಳುಪಚರಿಸುತೆರಗಿ ಪ್ರಾರ್ಥನೆಗೈದಳೇನೆಂಬೆನಾ ಪರಿಯನು ॥ (43
ಸರಸಿಜಾಸನೆ ನೀನು ವೀಧಿಯೊಳ್ ಬರುತಿರಲ್ ।
ತರಳನಯನಾಪಾಂಗವಿಭ್ರಮವ ಬಯಸಿ ಪತಿ ।
ಸ್ಮರವೇದನಂಗೊಳುತ ನವಸಂಗಮೋತ್ಸುಕತೆಯಿಂತ ಮನದನುತಾಪದಿಂ ॥
ಮರುಗಲಾದುದು ಬರಲ್ ಕರಪಾದರೋಗದಿಂ ।
ಬರುವುದಿಲ್ಲವು ಕೊಡಲ್ಕಿಲ್ಲ ಕಾಂಕ್ಷೆಯು ತೊಡರಿ ।
ಧರೆಯನಂಜಿಹ ಪತಿಯ ಪೊರೆದೆನ್ನನುಳುಹೆನುತ ಪದಕೆರಗಿ ಪ್ರಾರ್ಥಿಸಿದಳು ॥
ಶಾರೀರ ಪಾರಮಂದಿರದಿ ವಸುಮಣಿಗಳರೆ । [(44)
ನಾರಿಯರ್ ಬಂದೊಲಿವರಲ್ಲದೀ ಪರಿಯ ದು ।
ಶ್ಚಾರಣೆಯ ಧವನ ರೋಗಿಷ್ಠನಂ ಮನದೊಲವ ಪಿಡಿದು ಭಕ್ತಿಯನೆಸಗುವ ॥
ನಾರಿ ಮೂಲೋಕದುಪಕಾರಿ ಸುಚರಿತ್ರೆ ।
ಯಾರ ತವುರೆನಿಪಳೀ ಮಹಾಸತಿ ಯೆನುತ ।
ಲರಿತು ಸುಖಕಾರಣಕ್ಕೊಡಬಟ್ಟು ಸಂಕೇತನಿಲಯಮಂ ತೋರಿ ಬೀಳ್ಕೊಟ್ಟಳೊಲಿದು ॥
ಅತಿಕಷ್ಟದಿಂದಲಾ ಸತಿಯೊಡಂಬಡೆ ಬಂದು । [(45)
ಪತಿಗೆಚ್ಚರಿಸಲಾತನತಿಸಂತಸಂಗೊಂಡು ।
ಮತಿಯ ನಿಟ್ಟಿಸುತಿರ್ದನಮಂಭೋಜಬಾಂಧವನು ಪಶ್ಚಿಮಕೆ ಪೋಪ ಪರಿಯ ॥
ಹಿತವಾಗಿ ಕಳ್ತಲೆಯು ಕವಿಯೆ ನಾರಿಯೊಳಿಂದೆ ।
ಜತನದಿಂದೆನ್ನ ಕರದೊಯ್ದಲ್ಲಿ ಜವ್ವನೆಯ ।
ಜೊತೆಗೊಳಿಸಿ ಪೊರೆಯದೇತಕೆ ತಾಗನೆಸಗುತಿಹೆ ಕರದೊಯ್ಯುವುದೆಲೆ ಸಾಧ್ವಿಯೆ॥
ಕಗ್ಗತ್ತಲೆಯೊಳು ಬೆಗಲೊಳಗಿಟ್ಟು ಪತಿಯ ಮತಿ । [(46)
ಯುಗ್ಗಡದೊಳೈತರುತಲಿರಲೊಂದು ತಾಣದೊಳ್ ।
ಬೊಬ್ಬಿಗ್ಗಿ ಜೋಲ್ದಿರ್ದ ಪದವಿಾತನುರುಮಸ್ತಕ ಸೋಂಕಲದ ಪಿಡಿದು ಕರದಿ ॥
ಡಗ್ಗಲತಿವೇದನೆಯು ತೋರಲಾ ಪುರುಷ ಬೈ ।
ದಗ್ಗಳದ ಕೋಪದಿಂದಾತ್ಮವೇದನೆಯೊಳಂ ।
ಮುಗ್ಗುತ್ತಲಿಂತೆಂದನಾ ಮಹಾಕಳ್ತಲೆಯೊಳತಿಕಂಪನಂಗೊಳಸುತೆ ॥ (47)

ಕೃತದುಷ್ಕೃತದಿ ಶೂಲಹತ್ತಸಾದ ಜೀವಿಯುಂ ।
ಮಿತಿಯಿಂದಲ್ಲಾವ ಪಾಪಾಚಾರಿ ಪಿಡಿದೆಳೆದ ।
ಮತಿಹೀನನವತರಣೆಯುಂದಿಸಲೆವುಸ ದನೆವನ್ನೆಯ್ದಲೆನ್ನುತ ಶಪಿಸಲು ॥
ಪತಿಗಡೆಸಿದತಿವಿಪತ್ತೆಣಿಸಿ ಭಯದಿಂ ಬೇಗ ।
ಸತಿ ಜಲಾಶಯದೆಡೆಗೆ ನಡೆದು ತತ್ತಟದೊಳ್ಗಂ ।
ಜತನದಿಂ ಕುಳ್ಳಿರಿಸಿ ಬೇಗ ಸ್ನಾನಂಗೈದು ಮನದಿ ನೆನೆದಳ್ ಪತಿಯನು ॥ (48)
ಮೊಗೆದು ಬೊಗಸೆಯೊಳುದಕವಂ ಸಾಧ್ವಿ ವ್ರತನಿಷ್ಠೆ ।
ಯೊಗುಮಿಗೆಯು ಸತ್ವದಿಂ ರವಿಯರ್ುದಿಸಬೇಡೆಂದು ।
ಮಿಗೆ ಜಲಕ್ಷೇಪಣಂಗೈದು ಪತಿಯೆಡೆಗೈದಿ ಸಂತಸದಿ ಕುಳ್ಳಿರ್ದಳು ॥
ಬೆಗಡುಗೊಂಡುದು ದೇವತತಿಯಿಂದ್ರನೆಡೆಗೈದಿ ।
ಸುಗುಣೆಯೆಸಗಿದ ಪರಿಯನುಸಿರಲಾತಂ ಹರನ ।
ಬಗೆಯೊಳಂ ಜಾನಿಸಲು ಮುಮ್ಮೂರ್ತಿಗಳ್ ಬಂದರಾ ಸಮಯಕೇನೆಂಬೆನು ॥ (49)
ಸರಸಿಜಾಸನ ವಿಷ್ಣು ಹರಸುರೇಶಾದಿಗಳ್ ।
ಧರಣೆ ಗೈತಂದು ಕಳ್ತಲೆಯೊಳೊಪ್ಪುವ ದಿವ್ಯ ।
ತರುಣಿಯಂ ಕಂಡು ತರಣಿಯು ಶಾಪಮೇಂ ಕತದೊಳಾದುದೆನುತಂ ಕೇಳಲು ॥
ಇರುಳೊಳೆಂ ದೆಡೆಯು ಶೂಲದ ಪೆಣದ ಪದಸೋಂಕ ।
ಲಿರದೆ ಕೋಪಿಸಿ ದಿನಪನುದಿಸೆ ಮೃತನಹನೆನುತ ।
ಭರದಿ ಶಾಪವನಿತ್ತೊಡಾನಂಜಿ ಭಾಸ್ಕರನ ಪ್ರಾರ್ಥನಂಗೈದೆ ಭಯದಿ ॥ (50)
ಪತಿಯು ಪರದೇವತೆಯೆನುತ್ತರಿದು ಸಂತಸದ ।
ಲತಿಕಷ್ಟವಂ ಸಹಿಸಿ ವ್ರತದಿಂದಲಿರೆ ದುಃಖ ।
ಜತೆಯಾದುದೈಸೆ ನಿಷ್ಕಾರಣದಲಿದ ನಾರಿಗೆಚ್ಚರಿಪೆನಾರ್ಗೊರೆವೆನು ॥
ಕ್ಷಿತಿಯೊಳೆನುತಾ ಸಾಧ್ವಿ ನುಡಿಯೆ ಹಿಗ್ಗುತ ದೇವ ।
ತತಿಗಳೊಡೆಯುಂ ಬೇಳ್ದು ಬೇಳು ಮನದಿಷ್ಟವಂ ।
ಸತಿಶಿಖಾಮಣಿ ಬೇಡಿದುದನೀವೆನೆನಲಾಕೆ ಕೈಮುಗಿಯುತಿಂತೆಂದಳು ॥ (51)
ರೋಗವಿಲ್ಲದೆ ಪತಿಯು ದೀರ್ಘಾಯುರಾರೋಗ್ಯ ।
ಮಾಗಿರಲ್ಕನುದಿನಂ ಚರಣಸೇವನೆಗೈವ ।
ಯೋಗಮೊಂದಂ ಕೇಳ್ವೆನಲ್ಲದನ್ಯವ ಬಯಸೆನೆನೆ ದೇವ ಸಭೆ ಮೆಚ್ಚುತೆ ॥
ಆಗಲಾರೋಗ್ಯಮೈಶ್ವರ್ಯ ಜವ್ವನ ದೇವ ।
ಭೋಗಂಗಳಾತನಿಗೆ ಕೊಟ್ಟರಾಸುಚರಿತ್ರೆ ।
ಗಾಗಲಾನಂದ ರವಿಯುದಿಸಲೆಂದಪ್ಪಣೆಯನಿತ್ತಳತಿಹರ್ಷದಿಂದೆ ॥ (52)
ಪಾತಿವ್ರತಾಮಹಿಮೆ ಯೆಂತೊರೆಯಲಳವಪ್ಪು ।
ದೀತೆರದೊಳೊರ್ವ ಪುರುಷನ ನೊರ್ವೆಯನುಸರಿಸಿ ।
ಖ್ಯಾತಿಯಂ ಪಡೆದಳೀ ಲೋಕಕಚ್ಚರಿಯೆನಲ್ ಪದಿನಾಲ್ಕುಲೋಕಗಳಗೆ ॥
ಸೀತ ಶ್ರೀರಘುವರನ ಹೃತ್ಕಮಲದೊಳಗಿಟ್ಟು ।
ಪ್ರೀತಿಯಿಂದೊಡನೆ ಭಕ್ತಿಯನೆಸಗುತಿಹೆ ನೀನೆ ।
ಸೀತೆ ಭೂಲೋಕಪಾವನೆ ಭವನ್ಮಹಿಮೆಯಂ ಪೊಗಳಲೆನ್ನಳವಪ್ಪುದೆ ॥ (53)

ಎಂದುಸುರಿದನಸೂಯೆಯಮೃತಮಯನುಡಿಗಳಂ ।
ಪೊಂದಿ ಧರಣೀತನುಜೆ ಚರಣಕಾನತಳಾಗಿ ।
ಇಂದೆನಗೆ ಚಿತ್ತ ನಿರ್ಮಲಮಾಯ್ತು ತಾಯೆ ನಿಮ್ಮುಪದೇಶಮಹಿಮೆಯಿಂದೆ ॥
ಬಂಧುರದ ಭಕ್ತಿಯನ್ನೆಸಗಿ ತಾಂ ಕೃತಕೃತ್ಯ ।
ಳೆಂದೆನಿಪೆ ಪ್ರಿಯಚಿತ್ತ ಸಂಪ್ರೀಣನಂಗೈವೆ ।
ನಿಂದಿರಾವರನೆನುತಲರಿತು ಸೇವಿಪೆನೆನುತ ಜನಕಸುತೆ ಬಿನ್ನವಿಸಲು ॥ (54)
ಕೇಳ ವಿಸ್ಮಿತೆಯಾಗಿ ಸೆಳೆದಪ್ಪಿ ಮುದ್ದಿಸುತ ।
ಮೌಳಿಯಾಘ್ರಾಣಂಗೈದು ಸನ್ನುತಿಗೈದು ।
ನಾಳೀಕಭವನರಸಿ ಕಾಳ ಹರಿವಲ್ಲಭೆಯರುಗಳ ಸರಿ ನೀನೆನ್ನುತ ॥
ವೇಳೆ ಪ್ರಿಯೆ ನಿನ್ನಗಲಲಳವಲ್ಲವಸ್ತಮಿತ ।
ಹೇಳಿಯಂ ಕಂಡು ಕಂಗಳ ಮುಗಿದ ಕಮಲಗಳ ।
ಬಾಳುಮೆಯನುಳಿದು ಮಧುಕರ ನಗುವ ನೈದಿಲೆಂತು ಸಂತಸದಿ ಸಾರುತಿಹವು ॥ (55)
ಖಗಮೃಗಗಳೆಲ್ಲವು ಕುಲಾಯಕೈದುತಲಿವೆ ಕೊ ।
ನಗುವಳೆಂಬರಗಣಿಕೆ ಕುಂವದುಡುತತಿಗಳಂ ।
ಮಿಗೆ ಪರಪಿ ಸಕಲಭೂತಗಳು ವಿಷಯಗಳಂದಲುಪರಮಂಗೊಳ್ಳಲೆನುತ ॥
ಸೊಗಯಿಸುವ ಕ್ರತುಲಿಹನ ಪೂಜಿಸುವ ಕಾಲ ಮಾನ ।
ದೊಗುಮಿಗೆಯಲಂಗರಾಗವ ರಚಿಸುತಂಮುಕುರ ।
ಸೊಗಸಿಂದಲಂಕರಿಸಿ ತಾಟಂಕಮಂಡನದಿ ರಾಜಿಸ್ಪುದು ಬೆಂಗಳರಸಿ ॥ (56)
ಎನುತಲೀಪರಿಯಲನಸೂಯೆ ಯೆಸಗಿದುಪಚಾರಗಳೆ ।
ಜನಕಸುತೆ ತಾಪಸಿಯ ಚಿತ್ತಾನುಮೋದಸಂ ।
ಜನಿಪಂತಲಂಕರಿಸಿ ಚರಣಗಳಗಭಿನಮಿಸಿ ಬೀಳ್ಕೊಂಡು ಬೇಗಲೈದಿ ॥
ವಿನಯದಿಂದನಸೂಯೆ ಯೆಸಗಿದುಪಚಾರಗಳ ।
ಘನ ಕುಂಡಲಂಗಳಂಶುಕಮಂಗರಾಗಗಳ ।
ಮನದನ್ನನೊಳು ಪೇಳ ಮಮತೆಯಿಂ ವಂದಿಸಿದಳೆಂದು ಧರಣೀಜಾತೆಯು ॥ (57)
ಎಸಗಿ ಸಂಧ್ಯಾಕೃತ್ಯಗಳ ರಾಘವೇಶ್ವರಂ ।
ಪಶುಪತಿನಿಕಾಶ ಋಷಿಗೆರಗಿ ಕುಳ್ಳಿರ್ದು ತಾಂ ।
ಪೊಸತೆನಿಪ ಕಥೆಗಳಂ ವಿಪ್ರನಿಂದಲಿ ಕೇಳುತಾನಂದಮಯನಾಗುತ ॥
ನಸಿಯು ವಾರುಣಿಯ ಮುಖಚುಂಬನಂಗೈವನ್ನ ।
ನಿಶಿ ಚಾರುತಿರೆ ನಭೋರನ್ನ ಬರುತಿರೆ ಹರಿಯು ।
ಪೆಸರ ಸತ್ಕೀರ್ತನೆಯನೆಸಗಿ ಬೇಗದೊಳುಪ್ಪವಡಿಸಿದಂ ರಘುನಾಥನು ॥ (58)
ಹರುಷದಿಂ ಪೂರ್ವಾಹ್ನಿಕೀಕ್ರಿಯೆಗಳಂ ರಚಿಸಿ ।
ಸುರರ ಸಂತಸಗೊಳಸುತತ್ರಿಮುನಿಗಭಿನಮಿಸಿ ।
ಭರದೊಳಪ್ಪಣೆವಿಡಿದು ಧರಣಿಸುತೆ ಲಕ್ಷ್ಮಣರೊಡವೆರೆದು ಕರುಣದಿಂದ ॥
ಪೊರಯೆ ಮುಲ್ಲೋಕಮಂ ರಾಮಪುರದರಸ ಮುನಿ ।
ವರರು ಜಯಜಯವೆನುತ ಬರಲು ದೇವರ್ಕಳುಂ ।
ಸುರಿಯುತಿರೆ ಪೂವಳೆಯನಾನಂದನಂದನವನೊಳಪೊಕ್ಕರಘುವೀರನು ॥ (59)

ಸಂಧಿ ಮೂವತ್ತಾರು ಪದ 1664.

ಶ್ರೀ : ಶ್ರೀ : ಶ್ರೀ :

" ಮಂಗಳ ಮಹಾ ಶ್ರೀ "

ಶ್ರೀ ಲಕ್ಷ್ಮೀ ನರಸಿಂಹಾಯನಮಃ । ಶ್ರೀಃ ॥

ಶ್ರೀ ರಾಮಚಂದ್ರಾಯ ನಮಃ ॥

ಗದ್ಯ ॥

ಇದು ರಾಮಚಂದ್ರ ಪಾದಾರವಿಂದವಂದನ ಪವನನಂದನವರಪ್ರಸಾದಾಸಾದಿತ ಸಾರಸ್ವತಾ
ಸಾಹಿತ್ಯಸಾಮ್ರಾಜ್ಯಸರ್ವಂಕಷ ಚತುರ್ವಿಧಕವಿತಾಪರಿಶೀಲಿತಾತ್ಮನಿಷ್ಠಾಗರಿಷ್ಠ
ಗಾಂಧರ್ವಕಳಾವಿದ ವಿವಿಧ ವಿದ್ವಜ್ಜನೋಪಲಾಲನೀಯ ರಾಮಪುರಿ
ಹಂಪೆಯಮಾತ್ಯತನೂ ಭವ ವೆಂಕಾಹ್ವಯ ವಿರಚಿತ
ಮಾದ ಶ್ರೀಮದ್ರಾಮಾಯಣಮಹಾ
ಪ್ರಬಂಧದ ಶ್ರೀಮದಯೋಧ್ಯಾ
ಕಾಂಡಂ.

—॥ ಸಮಾಪ್ತಂ ॥—

ಮಂಗಳ ಮಹಾ ಶ್ರೀ

ಶ್ರೀ ಸೀತಾಲಕ್ಷ್ಮಣ ಭರತಶತ್ರುಘ್ನ ಹನುಮತ್ಸ
ಮೇತ ಶ್ರೀರಾಮಚಂದ್ರಾರ್ಪಣಮಸ್ತು ॥

ಶ್ರೀ ಲಕ್ಷ್ಮೀ ನರಸಿಂಹಾರ್ಪಣಮಸ್ತು.

ಶ್ರೀ : ಶ್ರೀ : ಶ್ರೀ :

---

# LIST OF AGENTS FOR THE MADRAS GOVERNMENT PUBLICATIONS.

## IN CITY.

ACCOUNT TEST INSTITUTE, Egmore, Madras
CITY BOOK COMPANY, POST BOX No 605, Madras-4.
HIGGINBOTHAMS, Madras
P. VARADACHARI & Co , Madras.
THE SOUTH INDIA SAIVA SIDDHANTHA WORKS PUBLISHING SOCIETY, LIMITED, Madras
VENKATARAMA & Co , Madras
V. PERUMAL CHETTY AND SONS, Madras
V. RAMASAWMY SASTRULU & SONS, Madras
OTTRUMAI OFFICE, Madras-17.
M DORAISWAMY MUDALIAR & Co , Madras
FREE INDIA CO-OPERATORS' AGENCY, Madras-4
SOUTH INDIA TRADERS, R[illegible]apetta, Madra

## IN MUFASSAL

M. C KRISHNIAH CHETTY, Madanapalle, Chittoor district.
THE EDUCATIONAL SUPPLIES COMPANY, P S. Puram , Coimbatore district.
D. SREEKRISHNAMURTHI, ONGOLE G[illegible] district
M SESHACHALAM & Co., Masulipatnam, Krishna district.
TRIVENI PUBLISHERS, Masulipatnam, Krishna district
HINDUSTAN DIARY PUBLISHERS, Vijayavada, Krishna district.
THE COMMERCIAL LINKS, Governorpet, Vijayavada, Krishna district
THE MANAGER, Gramodharana, Buckinghampet, Vijayavada, Krishna district
E. M. GOPALAKRISHNA KONE, Madurai, Madurai district.
K. P. AHMED KUNHI & BROS , Cannanore, Malabar district.
KERALA POLYTECHNIC CO-OPERATIVE SOCIETY, LTD , Kozhikode-5 (South Malabar).
P. K. BROTHERS, Kozhikode (South Malabar).
V. D. MOORTHY, Nellore, Nellore district.
A. VENKATASUBBAN, Vellore, North Arcot district.
TIMES MODERN MART, Salem, Salem district.
K. BHOJA RAO & Co , Mangalore, South Kanara district.
U. R. SHENOY & SONS, Mangalore, South Kanara district.
SRINIVAS & Co., Kumbakonam, Tanjore district.
P. N. SWAMINATHA SIVAN & Co , Pudukkottai, Tiruchirappalli district.
S. KRISHNASWAMI & Co., Tiruchirappalli, Tiruchirappalli district.
PALANIAPPA BROTHERS, Teppakulam, Tiruchirappalli, Tiruchirappalli district.
V. S. VASAN & Co., Tirunelveli, Tirunelveli district.
S. R SUBRAMANIA PILLAI, Tirunelveli, Tirunelveli district.
ARIVU NOOLAGAM, Market Street, Ootacamund.

## IN OTHER STATES

BHANWARILAL JAIN, Mot[illegible]a, [illegible]
SREE ABHIRAVA VAIDYA SHARADA BOOK DEPOT, Bangalore-2.
THE BANGALORE BOOK CENTRE, Bangalore-2.
THE STANDARD BOOK DEPOT, Bangalore-2.
HARI GOVIND BOOK STALL, Baroda.
NEW BOOK COMPANY, Bombay
THE POPULAR BOOK DEPOT, Lamington Road, Bombay-7.
THE BOOK COMPANY, Calcutta.
THACKER SPINK & Co , Calcutta.
BHARAT STORES, Ernakulam.
CHAROTAR BOOK STALL, Anand (Gujerat).
OSMANIA UNIVERSITY STUDENTS' CO-OP[illegible] BOOK DEPOT, Lallaguda P.O., Hyderabad (Deccan).
S. M. JAGANATHAN, Nagercoil.
S. V. KAMAT, Kumta (North Kanara).
JAIN BOOK AGENCY, New Delhi.
INTERNATIONAL BOOK SERVICE, Poona.